# ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳು

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಮಹಾಪ್ರಬಂಧ





ಸಂಶೋಧಕ
**ಸೋಮಶೇಖರ**

ಮಾರ್ಗದರ್ಶಕರು
**ಡಾ. ಗಂಗಾಧರ ದೈವಜ್ಞ**
ಹಿರಿಯಶ್ರೇಣಿ ಅಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೧೦



# ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳು

(ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ


ಸಂಶೋಧಕರು

**ಸೋಮಶೇಖರ**

ಮಾರ್ಗದರ್ಶಕರು

**ಡಾ॥ ಗಂಗಾಧರ ದೈವಜ್ಞ**

ಸಹ ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.



ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ–೫೮೩೨೭೬.

**೨೦೧೦**

# ಪ್ರಮಾಣ ಪತ್ರ

**"ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳು"** (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಬುಡಕಟ್ಟು ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ ಡಾ. ಗಂಗಾಧರ ದೈವಜ್ಞ ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(**ಸೋಮಶೇಖರ**)
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ-೫೮೩೨೭೬.

ಸ್ಥಳ : ಗಿರಿಸೀಮೆ,
ವಿದ್ಯಾರಣ್ಯ
ದಿನಾಂಕ : 30/08/10

# ದೃಢೀಕರಣ ಪತ್ರ

ಶ್ರೀ ಸೋಮಶೇಖರ ಅವರು "ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳು" (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ॥ ಗಂಗಾಧರ ದೈವಜ್ಞ)
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ–೫೮೩೨೭೬.

ಸ್ಥಳ : ಗಿರಿಸೀಮೆ,
ವಿದ್ಯಾರಣ್ಯ
ದಿನಾಂಕ : 30-8-2010.

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಬಿ.ಎ. ವಿವೇಕ ರೈ ಅವರಿಗೂ ಮತ್ತು ಇಂದಿನ ಕುಲಪತಿಗಳಾದ ಡಾ. ಎ. ಮುರಿಗೆಪ್ಪ ಅವರಿಗೆ, ಮಾನ್ಯ ಹಿಂದಿನ ಕುಲಸಚಿವರಾದ ಶ್ರೀ ವಿ. ಶಂಕರ್, ಶ್ರೀ ಎಸ್.ಎಸ್. ಪೂಜಾರ, ಡಾ. ಹಿ.ಚಿ. ಬೋರಲಿಂಗಯ್ಯ ಅವರಿಗೂ ಈಗಿನ ಕುಲಸಚಿವರಾದ ಪ್ರೊ. ಮಂಜುನಾಥ ಬೇವಿನಕಟ್ಟಿಯವರಿಗೂ ತುಂಬು ಹೃದಯದ ಕೃತಜ್ಞತೆಗಳು. ಆಡಳಿತ ವರ್ಗದ ಇತರ ಎಲ್ಲ ಹಿರಿಯರಿಗೆ, ಅಧ್ಯಯನಾಂಗದ ಹಿಂದಿನ ನಿರ್ದೇಶಕರಾದ ಪ್ರೊ. ಪಾಂಡುರಂಗ ಬಾಬು ಮತ್ತು ಇಂದಿನ ನಿರ್ದೇಶಕರಾದ ಪ್ರೊ. ವೀರೇಶ ಬಡಿಗೇರ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನ ಕ್ರಮವನ್ನು ಬೋಧಿಸಿ, ಮಹಾಪ್ರಬಂಧದ ರಚನೆಯ ಪ್ರತಿ ಹಂತದಲ್ಲಿ ನನ್ನನ್ನು ಪ್ರೋತ್ಸಾಹಿಸಿ ತಪ್ಪಿದ್ದಲ್ಲಿ ಪ್ರೀತಿಯಿಂದ, ತಾಳ್ಮೆಯಿಂದ ತಿದ್ದಿ ನನ್ನ ಸಂಶೋಧನಾ ಮಹಾಪ್ರಬಂಧಕ್ಕೆ ಒಂದು ರೂಪ ಕೊಡಲು ಸೂಕ್ತ ಸಲಹೆ ಸೂಚನೆಗಳನ್ನು ಕೊಟ್ಟು ಮುನ್ನಡೆಸಿದ ನನ್ನ ಮಾರ್ಗದರ್ಶಕರಾದ ಡಾ. ಗಂಗಾಧರ ದೈವಜ್ಞ ಅವರಿಗೂ, ನನ್ನನ್ನು ಮಗನಂತೆ ಪ್ರೀತಿ ವಿಶ್ವಾಸದಿಂದ ನೋಡಿದ ಶ್ರೀಮತಿ ಸರೋಜಾ ದೈವಜ್ಞ ಅವರಿಗೂ, ಪುಟ್ಟಿ ಭಾಗೀರಥಿ ಹಾಗೂ ಕುಟುಂಬದವರೆಲ್ಲರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಅಧ್ಯಯನದ ಬಗ್ಗೆ ಸದಾ ವಿಚಾರಿಸುತ್ತಾ ಪ್ರೋತ್ಸಾಹ ನೀಡಿದ ಬುಡಕಟ್ಟು ಅಧ್ಯಯನ ವಿಭಾಗದ ಅಧ್ಯಾಪಕರುಗಳಾದ ಡಾ. ಹಿ.ಚಿ. ಬೋರಲಿಂಗಯ್ಯ, ಡಾ. ಕೆ.ಎಂ. ಮೇತ್ರಿ, ಡಾ. ಕೇಶವನ್ ಪ್ರಸಾದ್, ಡಾ. ಚಲುವರಾಜು, ಡಾ. ಎ.ಎಸ್. ಪ್ರಭಾಕರ್ ಅವರಿಗೂ ಧನ್ಯವಾದಗಳು. ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಿಗೂ ಹಾಗೂ ಡಾ. ವಾಸುದೇವ ಬಡಿಗೇರ ಅವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಸದಾ ನನ್ನ ಶ್ರೇಯಸ್ಸನ್ನೇ ಬಯಸುತ್ತ, ನನ್ನ ಓದಿಗೆ ಬೆನ್ನೆಲುಬಾಗಿ ನಿಂತು ನನ್ನ ಕನಸನ್ನು ನನಸು ಮಾಡಿದ ಪೂಜ್ಯ ತಂದೆಯವರಾದ ಸಿದ್ಧನಗೌಡ ಜೇಕಿನ್ ಮತ್ತು ತಾಯಿ ಶ್ರೀಮತಿ ಶರಭಮ್ಮ ಜೇಕಿನ್ ಅವರಿಗೆ ನಾನು ಋಣಿಯಾಗಿದ್ದೇನೆ. ಕು॥ ಸಿಂಚನಾ ಹಾಗೂ ಸದಾ ನನ್ನ ಅಧ್ಯಯನಕ್ಕೆ ಸಹಾಯ ಮತ್ತು ಸಹಕಾರ ನೀಡಿದ ಶ್ರೀಮತಿ ದೊಡ್ಡಬಸಮ್ಮ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೂ ನನ್ನ ಅಣ್ಣಂದಿರಾದ ಮಲ್ಲಿಕಾರ್ಜುನ,

ಚನ್ನಬಸವ ಸಹೋದರಿಯರಾದ ಲಿಂಗಮ್ಮ, ಚಂದ್ರಮ್ಮ ಮತ್ತು ಅತ್ತಿಗೆಯರಾದ ಮಂಜುಳಾ ಹಾಗೂ ಶಾರದಾ ಅವರಿಗೂ ವಿಶೇಷವಾದ ನಮನವನ್ನು ಸಲ್ಲಿಸುತ್ತೇನೆ. ಮಾವಂದಿರಾದ ಮಂಜನಗೌಡ ಮಾ.ಪಾ., ವಿರುಪಣ್ಣ ಹಾಗೂ ಚಿಕ್ಕಪ್ಪಂದಿರಾದ ಪಂಪನಗೌಡ, ದೇವೇಂದ್ರಗೌಡ ಮತ್ತು ಚಿಕ್ಕಮ್ಮನವರಾದ ಬಸಲಿಂಗಮ್ಮ ಮತ್ತು ಲಲಿತಮ್ಮನವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನನ್ನ ಅಧ್ಯಯನಕ್ಕೆ ಸಹಕಾರ ಮತ್ತು ಪ್ರೋತ್ಸಾಹ ನೀಡಿದ ನನ್ನ ಬಾಳ ಸಂಗಾತಿಯಾದ ಶ್ರೀಮತಿ ಶಿಲ್ಪಾ ಸೋಮಶೇಖರ ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ಪುಟಾಣಿಗಳಾದ ಸಾಯಿಜ್ಯೋತಿ, ಸಾಯಿಶ್ರೀ, ಸೊಸೆಯಂದಿರಾದ ದಿವ್ಯಶ್ರೀ, ವೇದಶ್ರೀ, ಸಿಂಧೂ ಹಾಗೂ ಅಳಿಯಂದಿರಾದ ದೇವರಾಜ್, ಸಂದೀಪ್‌ರವರನ್ನು ಪ್ರೀತಿಯಿಂದ ನೆನೆಯುತ್ತೇನೆ. ಆತ್ಮೀಯ ಸ್ನೇಹಿತರಾದ ಅಶೋಕ್ ಕೊರಿ, ರಾಘವೇಂದ್ರ, ವಾಯುಪುತ್ರ, ನಾಗರಾಜ್, ವಿಜಯ ಕೋರಿ, ಭಜರಂಗಬಲಿ, ಸಂತೋಷ್, ಶಿವಪುತ್ರಪ್ಪ, ಮಲ್ಲಿಕಾರ್ಜುನರವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿದ್ದಿಯರು ನನ್ನೊಂದಿಗೆ ಸದಾ ಸ್ನೇಹ ಹಸ್ತ ಚಾಚಿ, ಸಹಕರಿಸಿ, ಕೇಳಿದ ಪ್ರಶ್ನೆಗೆ ಮಾಹಿತಿ ಕೊಡುತ್ತ, ಬೇಕಾದ ಮಾಹಿತಿಯನ್ನು ನೀಡುತ್ತಾ ಇಂತಹದೊಂದು ಪ್ರಬಂಧ ರೂಪಗೊಳ್ಳಲು ನೆರವಾಗಿದ್ದಾರೆ. ಅಲ್ಲದೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದವರೆಲ್ಲರಿಗೂ ಪ್ರೀತಿಯಿಂದ ನೆನೆಸಿಕೊಳ್ಳುತ್ತೇನೆ.

ನನಗೆ ಅಧ್ಯಯನಕ್ಕೆ ಪ್ರೋತ್ಸಾಹಿಸಿದ ಗಂಗಾವತಿ ಶಿಕ್ಷಣ ಸಂಸ್ಥೆಯ ಶ್ರೀ ಎಚ್.ಆರ್.ಗವಿಯಪ್ಪ ಸ್ಮಾರಕ ಪ.ಪೂ. ಕಾಲೇಜಿನ ಪ್ರಾಚಾರ್ಯರಾದ ಪ್ರೊ. ಎಫ್.ಎಚ್. ಚಿತ್ರಗಾರ್, ಶ್ರೀರಾಮುಲು ಕಾಲೇಜಿನ ಪ್ರಾಚಾರ್ಯರಾದ ಪ್ರೊ. ಆರ್.ಡಿ. ಧರ್ಮಟ್ಟಿ ಹಾಗೂ ಇಲ್ಲಿನ ಹಿರಿಯ ಉಪನ್ಯಾಸಕರು, ಸಹೋದ್ಯೋಗಿ ಮಿತ್ರರಿಗೆ ಹಾಗೂ ಕಾರ್ಯದರ್ಶಿಗಳಾದ ಡಾ. ಎ. ಸೋಮರಾಜುರವರಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಮಹಾಪ್ರಬಂಧವನ್ನು ಗಣಕಯಂತ್ರದಲ್ಲಿ ಸಂಯೋಜಿಸಿದ ಡಿ.ರವಿರಾಜ್ ವಸ್ತ್ರದ್, ದರ್ಪಣ ಕಮ್ಯುನಿಕೇಶನ್, ಗಂಗಾವತಿ ಇವರಿಗೆ ಸ್ನೇಹ ಪೂರ್ವಕ ಕೃತಜ್ಞತೆಗಳು.

<u>ಶ್ರೀ ಸೋಮಶೇಖರ</u>

# ಪರಿವಿಡಿ

## ಅಧ್ಯಾಯ–೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನದ ಮಹತ್ವ

೧.೫ ಸಂಶೋಧನಾ ವಿಧಾನಗಳು

೧.೬ ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ

## ೧.೧ ಪೀಠಿಕೆ

ಪ್ರಕೃತಿಯ ರಹಸ್ಯವನ್ನು ಭೇದಿಸುತ್ತಾ ಮಾನವ ಇಂದು ಆಧುನಿಕತೆಯ ಹೊಸ್ತಿಲಲ್ಲಿದ್ದಾನೆ. ಈ ಮಾನವನಿಗೆ ಪ್ರಕೃತಿಯ ಕಾಲಗರ್ಭವನ್ನೇ ಮೆಟ್ಟಿ ನಿಲ್ಲುವ ಶಕ್ತಿ ಪ್ರಕೃತಿದತ್ತವಾಗಿ ದೊರೆತಿದೆ. ಅದನ್ನು ಮಾನವ ಅನಾದಿಕಾಲದಿಂದಲೂ ಅಳವಡಿಸಿಕೊಂಡು, ಅನುಸರಿಸಿಕೊಂಡು ಬರುತ್ತಿದ್ದಾನೆ. ಸೃಷ್ಟಿಯ ಒಡಲಲ್ಲಿ ಲಕ್ಷಾಂತರ ಬಗೆಯ ಜೀವಿಗಳು ಜನ್ಮ ತಾಳಿದ್ದರೂ, ಇವುಗಳಲ್ಲಿ ಮಾನವ ಪ್ರಾಣಿಯೇ ಶ್ರೇಷ್ಠವಾದುದು. ಇತರೆ ಬೇರೆ ಯಾವ ಜೀವಿಗಳಲ್ಲಿ ಇಲ್ಲದಿರುವ ಮಾತನಾಡುವ ಶಕ್ತಿ, ಆಲೋಚಿಸುವ ಶಕ್ತಿ, ಜ್ಞಾಪಕ ಶಕ್ತಿ ಮತ್ತು ಸಂತೋಷಪಡುವ ಶಕ್ತಿಯನ್ನು ಹೊಂದಿದ್ದಾನೆ. ಅಂತಹ ಬುದ್ಧಿವಂತ ಪ್ರಾಣಿ ಎನಿಸಿಕೊಂಡಿರುವ ಮಾನವ ದಿನದಿಂದ ದಿನಕ್ಕೆ ವೈವಿಧ್ಯತೆಯನ್ನು ಸೃಷ್ಟಿಸಿಕೊಳ್ಳುತ್ತಾ ಸಾಗಿದ್ದಾನೆ. ವೈವಿಧ್ಯತೆಯ ಜೊತೆಗೆ ಮಾನವ ಇತಿಹಾಸವು ಕಂಡರಿಯದ ಘೋರವಾದ ವಿದ್ಯಮಾನಗಳಿಗೆ ಕಾರಣವಾಗಿದ್ದಾನೆ. ಪ್ರಬಲರು ದುರ್ಬಲರನ್ನು ಹೀನಾಯವಾಗಿ ನಡೆಸಿಕೊಂಡು ಬಂದಿರುವುದು ಇತಿಹಾಸದಿಂದ ಪ್ರಸ್ತುತದವರೆಗೆ ತಿಳಿದು ಬರುತ್ತದೆ.

ಭಾರತ ಹಲವು ಸಂಸ್ಕೃತಿಗಳ, ವೈವಿಧ್ಯಮಯ ಜೀವನ ವಿಧಾನಗಳನ್ನು ರೂಪಿಸಿಕೊಂಡಿರುವ ಸಮುದಾಯಗಳನ್ನು ಒಳಗೊಂಡಿರುವ ದೇಶವಾಗಿದೆ. ಸಾಂಸ್ಕೃತಿಕ ವೈವಿಧ್ಯತೆಯು ಈ ದೇಶದ ಮಹತ್ವದ ಸಂಗತಿಗಳಲ್ಲಿ ಒಂದಾಗಿದೆ. ಈ ವೈವಿಧ್ಯತೆಯ ಆಳದಲ್ಲಿ ಸಾಮಾಜಿಕ ಸ್ತರವಿನ್ಯಾಸ ವ್ಯವಸ್ಥೆಯ ಏಣಿ–ಶ್ರೇಣಿ ವಿಷಮತೆಯು ಜೀವಂತವಾಗಿದೆ. ಸಾಂಸ್ಕೃತಿಕ ವೈವಿಧ್ಯತೆಯು ಸಾಮಾಜಿಕ ವಿದ್ವಾಂಸರನ್ನು ರೋಮಾಂಚನಗೊಳಿಸುತ್ತದೆ. ಆದರೆ ಆಳದ ಶ್ರೇಣೀಕೃತ ವ್ಯವಸ್ಥೆಯು ಮಾತ್ರ ಶತಶತಮಾನಗಳಿಂದ ತನ್ನ ವಿನ್ಯಾಸವನ್ನು ಬದಲಿಸಿಕೊಳ್ಳುತ್ತಲೇ

ಜ್ವಲಂತತೆಯನ್ನು ಜೀವಂತವಾಗಿರಿಸಿಕೊಳ್ಳುತ್ತಾ ಬಂದಿದೆ. ಪ್ರಾಚೀನ ಕಾಲದಿಂದ ಇತ್ತೀಚಿನ ವರೆಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಧಿಕಾರಗಳು ಒಂದು ವರ್ಗಕ್ಕೆ ಮಾತ್ರ ಸೀಮಿತಗೊಳ್ಳುತ್ತ ಬಂದಿರುವುದು ತಿಳಿಯುತ್ತದೆ. ಪ್ರಬಲ ವರ್ಗಗಳು ಮಾತ್ರ ಸಮಾಜದ ಮುಖ್ಯ ವಾಹಿನಿಯಲ್ಲಿದ್ದುಕೊಂಡು ಎಲ್ಲ ಬಗೆಯ ಸೌಲಭ್ಯಗಳನ್ನು ಅನುಭವಿಸುತ್ತಾ ಬಂದಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ದುರ್ಬಲ ವರ್ಗಗಳು ಮಾತ್ರ ಸಮಾಜದ ಎಲ್ಲ ಸೌಲಭ್ಯಗಳಿಂದ ವಂಚಿತವಾಗುತ್ತಾ ಬಂದಿವೆ. ಏಣಿ-ಶ್ರೇಣಿ ವ್ಯವಸ್ಥೆಯಿಂದಾಗಿ ಕೆಲವು ಸಮುದಾಯಗಳು ನಿರ್ಗತಿಕವಾಗಿ ಬದುಕುತ್ತಿವೆ.

ಭಾರತೀಯ ಹಿಂದೂ ಸಾಮಾಜಿಕ ವ್ಯವಸ್ಥೆಯ ಪ್ರಾಚೀನ ಕಾಲದಲ್ಲಿ ಪ್ರಾರಂಭವಾದ ನಾಲ್ಕು ವರ್ಣಗಳ ವ್ಯವಸ್ಥೆಯು, ಇಂದಿನ ದಿನದಲ್ಲಿ ಸಾವಿರಾರು ಜಾತಿ, ಉಪಜಾತಿಗಳಾಗಿ ರೂಪಗೊಂಡಿವೆ. ಈ ಜಾತಿ-ಉಪಜಾತಿಗಳಲ್ಲಿ ಪ್ರಬಲವಾದ ಜಾತಿಗಳು ಒಂದೆಡೆ ಕಂಡುಬಂದರೆ, ಮತ್ತೊಂದೆಡೆ ಅತ್ಯಂತ ಹಿಂದುಳಿದ ಜಾತಿಗಳು ಕೂಡಾ ಕಂಡುಬರುತ್ತವೆ. ವೈವಿಧ್ಯಮಯ ವ್ಯವಸ್ಥೆಯಿಂದ ಕೂಡಿದ ಭಾರತೀಯ ಸಮಾಜದಲ್ಲಿ ಹಲವಾರು ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ. ಈ ಸಮುದಾಯಗಳು ನಮ್ಮ ಪಾರಂಪರಿಕ ಸಮಾಜದ ಆಚೆಗೆ ಬದುಕುತ್ತಿವೆ. ಅಂದರೆ ಅರಣ್ಯಗಳಲ್ಲಿ ತಮ್ಮ ನೆಲೆಗಳನ್ನು ಕಂಡುಕೊಂಡಿವೆ. ಇವುಗಳು ತಮ್ಮ ಪಾರಂಪರಿಕ ಜೀವನ ವಿಧಾನವನ್ನು ಬಿಟ್ಟುಕೊಡದೆ, ತಮ್ಮದೇ ಆದ ಕುಟುಂಬ, ವಿವಾಹ, ರೂಢಿ-ಸಂಪ್ರದಾಯಗಳು, ಆಚಾರ-ವಿಚಾರ ಮುಂತಾದವುಗಳನ್ನು ಉಳಿಸಿಕೊಂಡು ಜೀವನ ನಿರ್ವಹಿಸುತ್ತಿವೆ. ಆದಿವಾಸಿಗಳು ಈ ದೇಶದ ಯಾವ ಪಾರಂಪರಿಕ ನಿಯಮಗಳಿಗೂ ಒಗ್ಗದೆ ಆದಿಮ ಜೀವನ ವಿಧಾನವನ್ನು ಅಳವಡಿಸಿಕೊಂಡೇ ಬದುಕುತ್ತಾ ಬಂದಿವೆ. ಪ್ರಬಲ ವರ್ಗಗಳಿಂದ ಮತ್ತು ಪ್ರಭುತ್ವದಿಂದ ಘಾಸಿಗೊಂಡರೂ ಸಹ ತಮ್ಮ ಅನನ್ಯತೆಗಳನ್ನು ಉಳಿಸಿಕೊಂಡು ಬಂದಿವೆ. ಬುಡಕಟ್ಟುಗಳು ತಾವಾಯಿತು, ತಮ್ಮ ಬದುಕಾಯಿತು ಎಂದು ಕಾಡಲ್ಲಿ ಮುಗ್ಧವಾಗಿ ಜೀವನ ಸಾಗಿಸುತ್ತಾ ಬರುತ್ತಿವೆ.

ಭಾರತೀಯ ಸಂಸ್ಕೃತಿಯ ಜೀವಂತ ಪಳೆಯುಳಿಕೆಗಳಾದ ಬುಡಕಟ್ಟುಗಳ ಸಮಸ್ಯೆಗಳು ಭಿನ್ನವಾಗಿ ಕಂಡರೂ, ಅವು ಅನುಭವಿಸುವ ಸ್ವರೂಪ ಒಂದೇ ಆಗಿರುತ್ತದೆ. ಪ್ರಾದೇಶಿಕ ವೈವಿಧ್ಯತೆಗೆ ಅನುಗುಣವಾಗಿ ಸಮಸ್ಯೆಗಳ ಸ್ವರೂಪ ಸೃಷ್ಟಿಯಾಗಿದ್ದರೂ ಅವು ತೀರಾ ಭಿನ್ನವಾದವೇನಲ್ಲ. ಆದ್ದರಿಂದಲೇ ಭಾರತೀಯ ವೈವಿಧ್ಯಮಯ ಏಣಿ-ಶ್ರೇಣಿ ಪದ್ಧತಿಯ ವಿಷಮ ಸಮಾಜದಲ್ಲಿ ಅನೇಕ ಅಸಮಾನತೆಗಳಿವೆ. ಈ ರೀತಿಯ ವಿಷಮ ಪರಿಸ್ಥಿತಿಯ ಮಧ್ಯೆಯೂ ಬುಡಕಟ್ಟು ಸಮುದಾಯಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಪ್ರಯತ್ನ ಸಾಗಿದೆ. ಅಂತಹ ಪ್ರಯತ್ನದಲ್ಲಿ ಸಿದ್ದಿ ಬುಡಕಟ್ಟು ಸಹ ಒಂದಾಗಿದೆ. ಕರ್ನಾಟಕದ ಉತ್ತರ

ಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಸಿದ್ದಿ ಬುಡಕಟ್ಟು ಸಮುದಾಯ ಹಲವಾರು ವೈಶಿಷ್ಟ್ಯತೆಯನ್ನು ಹೊಂದಿದೆ. ಮೂಲತಃ ಗುಲಾಮರಾಗಿ ಬಂದ ನೀಗ್ರೋಗಳು ಇಂದು ಸಿದ್ದಿಯರಾಗಿ ಹೊಸ ಜೀವನದ ಕಡೆ ಮುಖಮಾಡಿ ನಿಂತಿದ್ದಾರೆ. ಆಫ್ರಿಕಾದಿಂದ ಬಂದ ಇವರು ಇಂದು ಭಾರತೀಯರಾಗಿ ರೂಪಗೊಂಡಿದ್ದಾರೆ. ಜೀವಿಗಳ ಉಗಮದ ಪ್ರಮುಖ ತೊಟ್ಟಿಲು ಎಂದು ಬಿಂಬಿತವಾಗಿರುವ ಆಫ್ರಿಕಾ ಖಂಡವು ನೀಗ್ರೋಗಳ ಮೂಲ ಸ್ಥಾನವಾಗಿದೆ. ಸ್ವಚ್ಛಂದವಾಗಿ ಕಾಡಿನಲ್ಲಿ ಬದುಕುತ್ತಿದ್ದಂತಹ ಈ ನೀಗ್ರೋಗಳನ್ನು ಅರಬರು, ಪೋರ್ಚುಗೀಸರು ಮತ್ತು ಬ್ರಿಟೀಷರು ಇವರನ್ನು ಬಂಧಿಸಿ, ವಿಶ್ವದ ನಾನಾ ದೇಶಗಳಿಗೆ ಕೊಂಡೊಯ್ದು ಮಾರಾಟ ಮಾಡುತ್ತಿದ್ದರು. ದೃಢಕಾಯಸ್ಥರಾಗಿದ್ದರಿಂದ ಇವರನ್ನು ಗುಲಾಮರನ್ನಾಗಿ ಮಾರಾಟ ಮಾಡಲಾಗುತ್ತಿತ್ತು. ಹೀಗೆ ವಿಶ್ವದ ನಾನಾ ದೇಶಗಳಿಗೆ ನೀಗ್ರೋಗಳು ಗುಲಾಮರಾಗಿ ಮಾರಲ್ಪಟ್ಟರು. ಅದೇ ರೀತಿಯಾಗಿ ಗೋವಾ ಮೂಲಕ ಭಾರತೀಯ ಸಮಾಜಕ್ಕೆ ಪರಿಚಿತರಾದರು. ಬಂಡವಾಳಶಾಹಿಗಳು, ಭೂಮಾಲಿಕರು ನೀಗ್ರೋ ಗುಲಾಮರನ್ನು ಕೊಂಡುಕೊಂಡರು. ಇವರನ್ನು ಕೊಂಡುಕೊಳ್ಳಬೇಕಾದರೆ ಮಾರುಕಟ್ಟೆಯಲ್ಲಿ ಬೆತ್ತಲೆಯಾಗಿಸಿ, ಬಹಿರಂಗವಾಗಿ ಹರಾಜು ಕೂಗಿ ಕೊಂಡುಕೊಳ್ಳುತ್ತಿದ್ದರು. ಇವರನ್ನು ಖರೀದಿಸಿದ ಮಾಲಿಕರು ಅತ್ಯಂತ ಅಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದರು. ಮಾಲಿಕ ಸಮುದಾಯದವರಿಂದ ತೀವ್ರವಾದ ಮಾನಸಿಕ, ದೈಹಿಕ ಹಿಂಸೆಗೆ ಒಳಗಾಗುತ್ತಿದ್ದರು. ಮಾಲಿಕರ ಅತಿಯಾದ ಹಿಂಸೆಯನ್ನು ಸಹಿಸಲಾಗದೆ ಅವರಿಂದ ತಪ್ಪಿಸಿಕೊಂಡು ದಟ್ಟವಾದ ಅರಣ್ಯವನ್ನು ಪ್ರವೇಶಸಿದರು. ಅರಣ್ಯವನ್ನು ಪ್ರವೇಶಿಸುವ ಸಂದರ್ಭದಲ್ಲಿ ತಮ್ಮ ಜೊತೆಗೆ ಮಾಲಿಕರ ಸಂಸ್ಕೃತಿಯನ್ನು ಹೊತ್ತು ತಂದರು. ಅಂದರೆ ಹಿಂದೂ ಧರ್ಮದ ಮಾಲಿಕನ ಹತ್ತಿರ ಗುಲಾಮನಾದ ವ್ಯಕ್ತಿಯು ಹಿಂದೂ ಸಂಸ್ಕೃತಿಯನ್ನೂ, ಮುಸ್ಲಿಂ ಧರ್ಮದ ಮಾಲಿಕನ ಹತ್ತಿರ ಗುಲಾಮನಾದ ವ್ಯಕ್ತಿಯು ಇಸ್ಲಾಂ ಸಂಸ್ಕೃತಿಯನ್ನೂ, ಕ್ರೈಸ್ತ ಧರ್ಮದ ಮಾಲಿಕನ ಹತ್ತಿರ ಸೇರಿದ ಗುಲಾಮನು ಕ್ರಿಶ್ಚಿಯನ್ ಸಂಸ್ಕೃತಿಯನ್ನು ರೂಢಿಸಿಕೊಂಡರು. ವಿವಿಧ ಧರ್ಮಗಳ ಮಾಲಿಕರ ಹತ್ತಿರ ಸೇವೆಯನ್ನು ಸಲ್ಲಿಸುತ್ತಾ ಆಯಾ ಧರ್ಮಗಳ ಸಂಸ್ಕೃತಿಯನ್ನು ರೂಢಿಸಿಕೊಂಡು ಅರಣ್ಯವನ್ನು ಪ್ರವೇಶಿಸಿದರು. ಈ ರೀತಿಯಾಗಿ ಮಾಲಿಕರಿಂದ ತಪ್ಪಿಸಿಕೊಂಡು ಅರಣ್ಯವನ್ನು ಪ್ರವೇಶಿಸಿದವರೇ ಇಂದು ಸಿದ್ದಿಯರೆಂದು ಕರೆಯಿಸಿಕೊಳ್ಳುತ್ತಿರುವ ಸಮುದಾಯವಾಗಿದೆ.

ಸಿದ್ದಿಯರಲ್ಲಿ ಹಿಂದೂ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳನ್ನು ಕಾಣಬಹುದಾಗಿದೆ. ವಿಭಿನ್ನ ಧರ್ಮಗಳನ್ನು ಅನುಸರಿಸುತ್ತಿದ್ದರೂ ಸಹ ಇವರಲ್ಲಿ ಧಾರ್ಮಿಕ ತಾರತಮ್ಯವಿಲ್ಲ. ನಾವೆಲ್ಲರೂ ಒಂದೇ ಎನ್ನುವ ಐಕ್ಯತೆಯನ್ನು ಹೊಂದಿದ್ದಾರೆ. ಒಂದೇ ಕುಟುಂಬದಲ್ಲಿ ಮೂರೂ

ಧರ್ಮಕ್ಕೆ ಸಂಬಂಧಿಸಿದ ವ್ಯಕ್ತಿಗಳು ಕಾಣಸಿಗುತ್ತಾರೆ. ವಿಶ್ವದ ಪ್ರಮುಖ ಜನಾಂಗಗಳಲ್ಲಿ ಒಂದಾದ ನೀಗ್ರೋ ಜನಾಂಗವು ಇಂದು ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡುಬರುತ್ತದೆ. ಆದರೆ ಈ ಸಮುದಾಯದವರು ಬಡತನ ರೇಖೆಗಿಂತ ಕೆಳಗಿದ್ದಾರೆ. ಅರಣ್ಯವನ್ನು ಪ್ರವೇಶಿಸಿದ ಸಂದರ್ಭದಲ್ಲಿ ಅರಣ್ಯದಲ್ಲಿ ದೊರೆಯುವ ಗೆಡ್ಡೆ-ಗೆಣಸು, ಹಣ್ಣು-ಹಂಪಲುಗಳನ್ನು ಇಲ್ಲವೇ ಕಾಡಿನಲ್ಲಿ ದೊರೆಯುವ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡಿ ಜೀವನ ನಿರ್ವಹಿಸುತ್ತಿದ್ದರು. ಅರಣ್ಯವನ್ನು ಪ್ರವೇಶಿಸಿದ ಅದೆಷ್ಟೋ ವರ್ಷಗಳವರೆಗೆ ನಾಗರಿಕ ಸಮಾಜದವರನ್ನು ಕಂಡರೆ ಓಡಿ ಹೋಗುತ್ತಿದ್ದರು. ನಂತರ ಒಂದೆಡೆ ಸ್ಥಿರವಾಗಿ ನೆಲೆಸುವ ಪ್ರಯತ್ನ ಮಾಡಿದರು. ಮುಂದುವರೆದ ಸಮುದಾಯಗಳ ಉಪಟಳ ಮತ್ತು ಪ್ರಜಾಪ್ರಭುತ್ವ ಆಡಳಿತದ ಅರಣ್ಯ ನೀತಿ ಕಾಯ್ದೆಗಳು ಅವರ ಸ್ವಾತಂತ್ರ್ಯವನ್ನು ಕಿತ್ತುಕೊಂಡವು. ಅದರ ಫಲವಾಗಿ ಜೀವನ ನಿರ್ವಹಣೆಯ ಸಲುವಾಗಿ ಇಂದು ತೋಟದ ಮಾಲಿಕರ ಹತ್ತಿರ ಕೂಲಿ ಮಾಡಿ ಬದುಕುತ್ತಿದ್ದಾರೆ.

ಸಿದ್ದಿಯರು ದಟ್ಟವಾದ ಅರಣ್ಯದಲ್ಲಿ ವಾಸವಾಗಿರುವುದರಿಂದ ಅರಣ್ಯದ ಪ್ರತಿಯೊಂದು ಭಾಗದ ಸಂಪೂರ್ಣ ಪರಿಚಯವನ್ನು ಹೊಂದಿದ್ದಾರೆ. ಯಾವ ಸ್ಥಳದಲ್ಲಿ ಏನಿದೆ? ಏನಿಲ್ಲ? ಏನಾಗುತ್ತಿದೆ? ಎಂದು ಗ್ರಹಿಸುವ ಅಗಾಧವಾದ ಶಕ್ತಿಯನ್ನು ಹೊಂದಿದ್ದಾರೆ. ಇವರು ಅರಣ್ಯದ ಮಧ್ಯದ ಬಯಲು ಭೂಮಿಯಲ್ಲಿ ಚಿಕ್ಕ ಪ್ರಮಾಣದ ಪಾರಂಪರಿಕ ಕೃಷಿ ವೃತ್ತಿಯನ್ನು ಅನುಸರಿಸುತ್ತಿದ್ದಾರೆ. ಕೃಷಿ ಇವರಿಗೆ ಲಾಭದಾಯಕವಾಗಿಲ್ಲ. ಕೂಲಿಯೇ ಇವರ ಮುಖ್ಯ ವೃತ್ತಿಯಾಗಿದೆ. ಜೊತೆಗೆ ಲ್ಯಾಂಪ್ಸ್ ಸೊಸೈಟಿಗಳು ಪ್ರಸಿದ್ಧವಾಗಿರುವುದರಿಂದ ಇತ್ತೀಚೆಗೆ ಇವುಗಳ ಮೂಲಕ ಅರಣ್ಯದ ಕಿರು ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುತ್ತಿರುವುದು ತಿಳಿದುಬರುತ್ತಿದೆ. ಆದರೆ ಇದು ಅಷ್ಟೊಂದು ಲಾಭದಾಯಕವಾಗಿ ಪರಿಣಮಿಸಿಲ್ಲ. ಕಾರಣವೆಂದರೆ ಅರಣ್ಯ ನೀತಿ ಕಾಯ್ದೆಯು ಇವರ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದೆ ಎಂದು ಹೇಳಬಹುದು. ದೇಶಕ್ಕೆ ಸ್ವಾತಂತ್ರ್ಯ ಬಂದು ಆರು ದಶಕಗಳು ಗತಿಸಿದರೂ ಅದು ಬುಡಕಟ್ಟು ಸಮುದಾಯಗಳ ಪಾಲಿಗೆ ದಕ್ಕಿಲ್ಲವೆಂದೇ ಹೇಳಬಹುದು. ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿಪಡಿಸಿ ಮುಖ್ಯ ವಾಹಿನಿಗೆ ತರಬೇಕೆನ್ನುವ ಘೋಷಣೆಗಳು ಕೇವಲ ಆಶ್ವಾಸನೆಗಳಾಗಿಯೇ ಉಳಿದಿವೆ. ದೇಶದ ಅಭಿವೃದ್ಧಿ ನೀತಿಯು ಬಂಡವಾಳಶಾಹಿ, ವಸಾಹತುಶಾಹಿಗಳಿಗೆ ಅನುಗುಣವಾಗಿ ರೂಪಗೊಳ್ಳುತ್ತಿವೆ. ಜಾಗತೀಕರಣದ ಫಲವಾಗಿ ನವೀನ ತಂತ್ರಜ್ಞಾನದಿಂದ ಬಂದಂತಹ ಯಂತ್ರಗಳು ಮತ್ತು ದುರಾಡಳಿತ ನೀತಿಯೂ ಸೇರಿ ಅರಣ್ಯದಲ್ಲಿನ ಸಮುದಾಯವನ್ನು ಒಕ್ಕಲೆಬ್ಬಿಸಿದವು. ಪರಿಣಾಮವಾಗಿ ವಸಾಹತು ನೀತಿ, ಆಡಳಿತ ನೀತಿಯು ಭಾರತೀಯ ಸಮಾಜದ ನೈಸರ್ಗಿಕ ಸಂಪತ್ತನ್ನು ದೋಚಲು

ಪ್ರಾರಂಭಿಸಿದವು. ಅಲ್ಲದೇ ಅಲ್ಲಿ ವಾಸಿಸುವ ಸಮುದಾಯಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು ಗುಲಾಮರನ್ನಾಗಿ ಮಾಡಿತು. ಪರಿಣಾಮವಾಗಿ ಬುಡಕಟ್ಟು ಸಮುದಾಯಗಳು ಕಾಡಿನಿಂದ ಹೊರಬಿದ್ದವು. ನಿಲ್ಲಲಿಕ್ಕೆ ನೆಲೆ ಇಲ್ಲದೆ ಬೀದಿಗೆ ಬರುವಂತಾಯಿತು. ಸಮುದಾಯಗಳ ಪಾರಂಪರಿಕ ಕೃಷಿಯ ಪ್ರದೇಶಗಳು ಬ್ರಿಟೀಷರ ಎಸ್ಟೇಟ್‌ಗಳಾಗಿ ರೂಪಗೊಂಡವು. ಇಂದಿಗೂ ಅತ್ಯಂತ ಕಡಿಮೆ ಪ್ರಮಾಣದ ಕೂಲಿ ಹಣಕ್ಕೆ ಹೆಚ್ಚಿನ ಪ್ರಮಾಣದ ಶ್ರಮವನ್ನು ವ್ಯಯಿಸುವ ಮತ್ತು ಸ್ವಂತ ಜಮೀನಿನ ಪ್ರಮಾಣವು ಕಡಿಮೆ ಇರುವ ಇಂತಹ ಸಮುದಾಯಗಳು ಆರ್ಥಿಕವಾಗಿ ಸಬಲರಾಗುವುದು ಹೇಗೆ ಎನ್ನುವ ಯಕ್ಷಪ್ರಶ್ನೆ ಎದುರಾಗುತ್ತದೆ.

ಸಿದ್ದಿಯರು ಇಂದು ಆಧುನಿಕತೆ, ನಗರೀಕರಣ, ಜಾಗತೀಕರಣ, ವೈಜ್ಞಾನಿಕರಣಗಳಿಗೆ ನೇರವಾಗಿ ಒಳಗಾಗದಿದ್ದರೂ, ಪರೋಕ್ಷವಾಗಿ ಅವರ ಜೀವನದ ಮೇಲೆ ಪ್ರಮುಖ ಪ್ರಭಾವ ಬೀರುತ್ತಿವೆ. ಕೃಷಿಯಲ್ಲಿ ಆಧುನಿಕತೆಯ ಅಳವಡಿಕೆಯಿಂದಾಗಿ ಕೂಲಿಯ ಪ್ರಮಾಣವೂ ತಗ್ಗುವುದರ ಮುಖಾಂತರ ಸಿದ್ದಿಯರು ವಿವಿಧ ವೃತ್ತಿಗಳನ್ನು ಅರಸಿಕೊಂಡು ಹೋಗುವಂತೆ ಮಾಡಿದೆ. ಇತ್ತೀಚಿನ ದಿನಗಳಲ್ಲಿ ಇವರು ಕೃಷಿ ಕೂಲಿಯ ಜೊತೆಗೆ ವಿವಿಧ ಬಗೆಯ ವೃತ್ತಿಯನ್ನು ಅನುಸರಿಸುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಶತಶತಮಾನಗಳಿಂದ ದಬ್ಬಾಳಿಕೆಗೆ ಒಳಗಾದ ಸಿದ್ದಿಯರು ಇಂದಿಗೂ ಸರಿಯಾದ ಸೂರಿಲ್ಲದೆ ಮಾನ ಮುಚ್ಚಿಕೊಳ್ಳಲು ಮೈತುಂಬ ಬಟ್ಟೆ ಇಲ್ಲದೆ ಮತ್ತು ಎರಡು ಹೊತ್ತು ಗಂಜಿಗೂ ಗತಿಯಿಲ್ಲದೆ ಬಡತನದ ಬೇಗೆಯಲ್ಲಿ ತೊಳಲಾಡುತ್ತಿರುವುದು ಸಾಮಾನ್ಯವಾಗಿದೆ. ತೋಳುಗಳಲ್ಲಿ ಸಾಕಷ್ಟು ಬಲವಿದ್ದರೂ ದುಡಿಯುವ ಕೈಗಳಿಗೆ ಸರಿಯಾದ ಕೆಲಸವಿಲ್ಲ. ಸಿದ್ದಿಯರ ಸ್ಥಿತಿ ಅತಂತ್ರದ್ದಾಗಿದೆ.

ನಮ್ಮ ಭಾರತ ದೇಶವು ಸ್ವಾತಂತ್ರ್ಯಗೊಂಡ ನಂತರ ೧೯೫೦ ರಲ್ಲಿ ಸಂವಿಧಾನವನ್ನು ಜಾರಿಗೆ ತಂದಿತು. ಅದು ಆದಿವಾಸಿಗಳ ಪಾಲಿಗೆ ಒಂದು ರೀತಿಯಲ್ಲಿ ಅತ್ಯಂತ ದುರದೃಷ್ಟಕರವಾದ ದಿನವೆಂದು ಹೇಳಬಹುದು. ಆದಿವಾಸಿಗಳು ವಾಸಿಸುವ ಅವರ ತಾಯ್ನೆಲವನ್ನು ಪ್ರಭುತ್ವದ ಸುಪರ್ದಿಗೆ ಒಳಪಡಿಸುವುದರ ಮುಖಾಂತರ ಆದಿವಾಸಿಗಳನ್ನು ಅಕ್ರಮ ನೆಲೆಸಿಗರೆಂಬಂತೆ ಕಾಣಲಾಯಿತು. ಅವರಿಗೆ ಮತದಾನದ ಹಕ್ಕನ್ನು ನಿಡುವ ನೆಪದಲ್ಲಿ ಸ್ವಾಂತ್ರತ್ಯದ ಹಕ್ಕನ್ನು ಕಸಿದುಕೊಳ್ಳಲಾಯಿತು. ಇಂತಹ ವ್ಯವಸ್ಥೆಯಿಂದಾಗಿ ಸಿದ್ದಿಯರು ಕಾಡಿನಲ್ಲಿ ನೆಮ್ಮದಿಯಾಗಿ ಬಾಳಲು ಸಾಧ್ಯವಿಲ್ಲದೆ, ಈ ಕಡೆ ನಾಗರಿಕ ಸಮಾಜದೊಂದಿಗೂ ಬೆರೆಯಲು ಸಾಧ್ಯವಾಗದೆ ಅತಂತ್ರ ಸ್ಥಿತಿಯನ್ನು ಹೊಂದಿದ್ದಾರೆ. ಸಮುದಾಯದಲ್ಲಿ ಬಹುತೇಕರು ಅನಕ್ಷರಸ್ಥರಾಗಿರುವುದರಿಂದ ಸರ್ಕಾರದ ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಳ್ಳಲು

ಸಾಧ್ಯವಾಗುತ್ತಿಲ್ಲ. ಇತ್ತೀಚಿನ ಕೆಲವು ವರ್ಷಗಳ ಹಿಂದೆ ಸಿದ್ದಿಯರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದೆ. ಆದರೆ ನಿರೀಕ್ಷಿತ ಪ್ರಮಾಣದ ಅಭಿವೃದ್ಧಿಯನ್ನು ಸಾಧಿಸಲಾಗಿಲ್ಲವೆಂದು ಹೇಳಬೇಕಾಗುತ್ತದೆ. ಸಮುದಾಯದಲ್ಲಿ ಹಲವಾರು ಸಮಸ್ಯೆಗಳು ಪ್ರಮುಖವಾಗಿ ಗೋಚರಿಸುತ್ತಿವೆ.

ಭಾರತದ ಸಮಾಜದಲ್ಲಿ ಚಾರಿತ್ರಿಕ ವಿಕಾಸದ ಯಾವುದೇ ಹಂತದಲ್ಲಿ ನೆಲೆ ತಪ್ಪಿಹೋದ ಸಿದ್ದಿಗಳ ಬದುಕು ಅನೇಕ ಜಟಿಲ ಸಮಸ್ಯೆಗಳಿಗೆ ಕಾರಣವಾಗಿದೆ. ವರ್ತಮಾನದಲ್ಲಿ ಸರಕಾರ ರೂಪಿಸುವ ಯಾವುದೇ ಯೋಜನೆಗಳು ಪ್ರತಿ ಹಂತದಲ್ಲೂ ರಾಜಕೀಯ ನುಸುಳುವಿಕೆ ಇಲ್ಲವೇ ಅನುಷ್ಠಾನದಲ್ಲಿರುವ ಲೋಪಗಳಿಂದಾಗಿ ಮತ್ತು ಕೆಲವು ಭ್ರಷ್ಟ ಅಧಿಕಾರಿಗಳಿಂದಾಗಿ ಈ ಬಗೆಯ ಸಮುದಾಯಗಳನ್ನು ತಲುಪುತ್ತಿಲ್ಲ. ಇಲ್ಲಿನ ವೈವಿಧ್ಯಮಯ ಸಮುದಾಯಗಳ ಸಂಕೀರ್ಣ ಜೀವನ ವಿಧಾನಗಳನ್ನು ಉತ್ತಮ ಮಾದರಿಯ ತತ್ವ ಯೋಜನೆಗಳು ಮಾತ್ರ ತಲುಪಬಲ್ಲವು. ಅನುಷ್ಠಾನದ ವಿಧಾನಗಳು ಸಹ ಉತ್ತಮ ರೀತಿಯಿಂದ ಕೂಡಿದ್ದರೆ ಮಾತ್ರ ಯೋಜನೆಗಳು ಸದುಪಯೋಗವಾಗುತ್ತವೆ. ಆದ್ದರಿಂದ ಸಮುದಾಯಗಳ ಬಗೆಗೆ ಸಂಪೂರ್ಣ ಅಧ್ಯಯನ ಮಾಡಿ ನಂತರ ಯೋಜನೆಗಳನ್ನು ರೂಪಿಸಿದರೆ ಉತ್ತಮ ಫಲಿತಾಂಶ ಹೊರಹೊಮ್ಮುವುದರ ಜೊತೆಗೆ ಸಮುದಾಯದ ಏಳಿಗೆ ಸಾಧ್ಯವಾಗುತ್ತದೆ. ಸಿದ್ದಿಯರಿಗೆ ಸರಕಾರದ ಕೆಲವು ಸೌಲಭ್ಯಗಳು ದೊರೆತಿವೆಯಾದರೂ ನಿರೀಕ್ಷಿತ ಪ್ರಮಾಣದಲ್ಲಿ ಅದು ಸಾಧ್ಯವಾಗಿಲ್ಲ. ಕೆಲವು ಪ್ರಮಾಣದ ಸೌಲಭ್ಯಗಳು ಮಾತ್ರ ದೊರೆತಿವೆ. ಆದರೆ ಅವುಗಳು ಅವರ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಸಫಲವಾಗಿಲ್ಲವೆಂಬುದು ಮೇಲ್ನೋಟಕ್ಕೆ ತಿಳಿದುಬರುತ್ತದೆ.

ಸಿದ್ದಿಯರು ಹಲವಾರು ವೈಶಿಷ್ಟ್ಯತೆಗಳನ್ನು ಹೊಂದಿರುವ ಸಮುದಾಯವಾಗಿದೆ. ತಮ್ಮದೇ ಆದ ಕೆಲವು ಸ್ವಂತಿಕೆಯ ಕಲೆಗಳು, ಆಚಾರ-ವಿಚಾರಗಳು, ಮೌಖಿಕ-ಸಾಹಿತ್ಯ, ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ತಮ್ಮ ಮೂಲ ನೆಲೆ, ಸಂಸ್ಕೃತಿಯನ್ನು ಕಳೆದುಕೊಂಡು ಬಂದವರಾಗಿದ್ದರೂ ಸಹ ವಿಶಿಷ್ಟಮಯವಾದ ಸಂಸ್ಕೃತಿಯನ್ನು ಅಳವಡಿಸಿಕೊಂಡು ಉತ್ಕೃಷ್ಟವಾದ ಸಾಂಸ್ಕೃತಿಕ ಜೀವನವನ್ನು ರೂಪಿಸಿಕೊಂಡಿದ್ದಾರೆ. ಸಿದ್ದಿಯರ ಸ್ವಂತಿಕೆಯನ್ನು ಬಿಂಬಿಸುವ ಡಮಾಮಿ ಕುಣಿತ ವರ್ಣಿಸಲು ಅಸಾಧ್ಯವಾದುದು. ಆಧುನಿಕತೆಯ ಪ್ರಭಾವದಿಂದಾಗಿ ಸಮುದಾಯದಲ್ಲಿ ಇಂದು ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಸ್ಥಿತ್ಯಂತರಗಳಾಗುತ್ತಿವೆ ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಭಾರತೀಯ ಸಮಾಜ ಪ್ರಾಚೀನ ಕಾಲದಿಂದ ಇಂದಿನವರೆಗೆ ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಿರುವ ದೇಶವಾಗಿದೆ. ಭಾರತೀಯ ಸಮಾಜದಲ್ಲಿ ವರ್ಣ ವ್ಯವಸ್ಥೆಯಿಂದ ಪ್ರಾರಂಭವಾಗಿ ನಂತರ ವರ್ಗವಾಗಿ ರೂಪಗೊಂಡು ಜಾತಿಯಾಗಿ ಬೆಳೆದುಕೊಂಡು ಬಂದಿದೆ. ಸಾವಿರಾರು ಜಾತಿ–ಉಪಜಾತಿಗಳು, ಹಲವಾರು ಭಾಷೆಗಳು, ವಿವಿಧ ಧರ್ಮಗಳು, ವಿವಿಧ ಜನಾಂಗಗಳನ್ನು ಹೊಂದಿದ್ದರೂ ಎಲ್ಲರಿಗೂ ಸಮಾನತೆಯನ್ನು ಕಲ್ಪಿಸಿದೆ. ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬ ಸಮಾನ ಭಾವನೆಯನ್ನು ನಿರ್ಮಿಸಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮನ್ನು ನಿರ್ಧಿಷ್ಟ ಗುರಿಯ ಕಡೆಗೆ ಕರೆದುಕೊಂಡು ಹೋಗುವುದು ಶಿಕ್ಷಣದಿಂದ ಮಾತ್ರ ಸಾಧ್ಯ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಯಶಸ್ವಿಯಾಗಬೇಕಾದರೆ ಎಲ್ಲರಿಗೂ ಶಿಕ್ಷಣ ಅಗತ್ಯ. ಯಾವುದೇ ವರ್ಗ, ವರ್ಣ, ಜನಾಂಗ, ಲಿಂಗ, ಧರ್ಮ ಮೊದಲಾದವುಗಳನ್ನು ಪರಿಗಣಿಸದೇ ಸಮಾನತೆಯನ್ನು ಅನುಷ್ಠಾನಗೊಳಿಸಬೇಕಾಗಿದೆ. ಸಂವಿಧಾನದಲ್ಲಿ ಉಲ್ಲೇಖವಿರುವ ಸಮಾನತೆಯ ಅಂಶವು ಕೇವಲ ಅಕ್ಷರ ರೂಪದಲ್ಲಿ ಉಳಿಯದೆ ಜಾರಿಯಾಗಬೇಕಾದ ಅನಿವಾರ್ಯತೆ ಇದೆ. ಅದರಲ್ಲೂ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಸರ್ಕಾರ ಮಾತ್ರವಲ್ಲದೆ ಸರ್ಕಾರೇತರ ಸಂಘ ಸಂಸ್ಥೆಗಳೂ ಮತ್ತು ಸಾರ್ವಜನಿಕರೂ ಸಹ ಕೈಜೋಡಿಸಿದಾಗ ಮಾತ್ರ ಯಶಸ್ಸನ್ನು ಸಾಧಿಸಬಹುದಾಗಿದೆ.

ಸಮಾಜವು ನಿಂತ ನೀರಿನಂತಿರದೆ ಸದಾ ಹರಿಯುವ ನೀರಿನಂತೆ ನಿತ್ಯ ಪರಿವರ್ತನಾಶೀಲವಾದುದು. ಸಮುದಾಯಗಳು ಪರಿವರ್ತನೆಗೆ ಒಗ್ಗಿಕೊಳ್ಳುತ್ತಿರುತ್ತವೆ. ಪ್ರಸ್ತುತ ಅಧ್ಯಯನವು ಅಂತರ್‌ಶಿಸ್ತೀಯ ಅನೇಕ ಅಂಶಗಳನ್ನು ಹೊಂದಿದ್ದು, ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು 'ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳ'ನ್ನು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ಸಿದ್ದಿಯರ ಹಿನ್ನೆಲೆಯನ್ನು ತಿಳಿಯುವುದು.

೨. ಸಮುದಾಯದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಸ್ಥಿತ್ಯಂತರಗಳನ್ನು ತಿಳಿಯುವುದು.

೩. ವರ್ತಮಾನದಲ್ಲಿ ಸಮುದಾಯ ಎದುರಿಸುತ್ತಿರುವ ಸಮಸ್ಯೆಗಳು ಯಾವ ಬಗೆಯದು ಎಂದು ತಿಳಿಯುವುದು.

## ೧.೩ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಉತ್ತರ ಕನ್ನಡ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಸಿದ್ದಿಯರು ಕಂಡುಬರುವ ತಾಲೂಕುಗಳೆಂದರೆ ಅಂಕೋಲ, ಜೋಯಿಡಾ,

ಹಳಿಯಾಳ, ಕಾರವಾರ, ಮುಂಡಗೋಡ, ಶಿರಸಿ, ಯಲ್ಲಾಪುರ. ಈ ಜಿಲ್ಲೆಯು ಇನ್ನೂ ಕೆಲವು ತಾಲೂಕುಗಳನ್ನು ಒಳಗೊಂಡಿದೆಯಾದರೂ ಅಲ್ಲಿ ಸಿದ್ದಿಯರು ನೆಲೆಸಿಲ್ಲದಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬರುತ್ತದೆ. ಸಿದ್ದಿಯರು ಮುಖ್ಯವಾಗಿ ದಟ್ಟವಾದ ಅರಣ್ಯಗಳಲ್ಲಿ ವಾಸಿಸುತ್ತಿದ್ದಾರೆ. ನಾಗರಿಕ ಸಮಾಜದ ಸಂಪರ್ಕ ದುಸ್ತರವೆಂದೇ ಹೇಳಬೇಕಾಗುತ್ತದೆ. ಸಮುದಾಯದವರು ವಾಸಿಸುವ ಕೆಲವೊಂದು ಪ್ರದೇಶಗಳಿಗೆ ಸಂಪರ್ಕವೇ ಇಲ್ಲ. ಪ್ರಾಥಮಿಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಆದ್ದರಿಂದ ಈ ಸಮುದಾಯವನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಸಿದ್ದಿಯರನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇನ್ನುಳಿದಂತೆ ಈ ಸಮುದಾಯದವರು ಬೆಳಗಾವಿ ಜಿಲ್ಲೆಯ ಖಾನಾಪುರ ಮತ್ತು ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕುಗಳಲ್ಲಿ ಕಂಡುಬರುತ್ತಾರೆ. ಆದರೆ ಈ ಪ್ರದೇಶದಲ್ಲಿನ ಸಮುದಾಯದವರನ್ನು ಅಧ್ಯಯನಕ್ಕೆ ಪರಿಗಣಿಸಲಾಗಿಲ್ಲ. ಉತ್ತರಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುವುದರಿಂದ ಪ್ರಸ್ತುತ ಸಂಶೋಧನೆಯ ಅಧ್ಯಯನದ ಕಾರ್ಯ ವ್ಯಾಪ್ತಿಯನ್ನಾಗಿ ಆಯ್ಕೆ ಮಾಡಿಕೊಂಡು ಮಹಾಪ್ರಬಂಧವನ್ನು ರಚಿಸಲಾಗಿದೆ.

### ೧.೪ ಅಧ್ಯಯನದ ಮಹತ್ವ

ಬುಡಕಟ್ಟುಗಳನ್ನು ದೇಶದ ಮೂಲ ನಿವಾಸಿಗಳೆಂದು ಕರೆಯುತ್ತೇವೆ. ಅವರನ್ನೇ ಮರೆತರೆ ಒಂದು ದೇಶದ ಮೂಲ ಸಂಸ್ಕೃತಿಯನ್ನು ಮರೆತ ಹಾಗೆ. ಅಂತಹ ಬುಡಕಟ್ಟು ಸಮುದಾಯಗಳಲ್ಲಿ ಸಿದ್ದಿಯರೂ ಸಹ ಒಂದಗಿದ್ದಾರೆ. ಇವರು ಮೂಲತಃ ಆಫ್ರಿಕಾ ದೇಶದವರಾಗಿದ್ದಾರೆ. ನಮ್ಮ ದೇಶಕ್ಕೆ ಪೋರ್ಚುಗೀಸರು, ಬ್ರಿಟೀಷರು ವ್ಯಾಪಾರಕ್ಕಾಗಿ ಬಂದದ್ದು ನಮಗೆ ಗೊತ್ತಿದೆ. ಅರಬರು, ಪೋರ್ಚುಗೀಸರು, ಬ್ರಿಟೀಷರು ವ್ಯಾಪಾರಕ್ಕಾಗಿ ಆಫ್ರಿಕಾ ದೇಶದ ಕಾಡನ ಜನರನ್ನು ಇಲ್ಲಿಗೆ ಎಳೆದು ತಂದರು. ದಬ್ಬಾಳಿಕೆಗೆ ಒಳಗಾಗಿ ಗುಲಾಮರಾಗಿ ಬಂದವರೇ ಈ ಸಿದ್ದಿಯರು. ಮಾಲಿಕ ವರ್ಗದವರ ಹತ್ತಿರ ಗುಲಾಮರಾಗಿ ಸಾಕಷ್ಟು ಹಿಂಸೆಯನ್ನು ಅನುಭವಿಸಿದರು. ಹಿಂಸೆಯನ್ನು ತಾಳಲಾರದೆ ಮಾಲಿಕರ ಕಪಿಮುಷ್ಟಿಯಿಂದ ತಪ್ಪಿಸಿಕೊಂಡು ದಟ್ಟವಾದ ಅರಣ್ಯ ಪ್ರವೇಶಿಸಿದರು. ನಿರ್ಗತಿಕರಂತೆ ಅರಣ್ಯ ಪ್ರವೇಶಿಸಿದ ಇವರು ಕಾಡಿನಲ್ಲಿ ದೊರೆಯುವ ಗೆಡ್ಡೆ-ಗೆಣಸು, ಹಣ್ಣು-ಹಂಪಲು ಮತ್ತು ಕೈಗೆ ದೊರೆಯುವ ಪ್ರಾಣಿ ಪಕ್ಷಿಗಳನ್ನು ಆಹಾರವಾಗಿ ಬಳಸಿಕೊಂಡರು. ಕಾಲ ಗತಿಸಿದಂತೆಲ್ಲ ತೋಟದ ಕೂಲಿ ಕಾರ್ಮಿಕರಾಗಿ ಜೀವನವನ್ನು ರೂಪಿಸಿಕೊಂಡರು.

ಸಿದ್ದಿಯರು ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಮೂರು ಧರ್ಮಗಳಲ್ಲಿ ಹಂಚಿಹೋಗಿದ್ದರೂ ಸಹಬಾಳ್ವೆಯನ್ನು ನಡೆಸುತ್ತಿದ್ದಾರೆ. ಧರ್ಮಕ್ಕಾಗಿ ಕಿತ್ತಾಡುವ ಈ

ಸಂದರ್ಭದಲ್ಲಿ ಇವರ ಜೀವನ ಪ್ರಸ್ತುತ ಸಮಾಜಕ್ಕೆ ಆದರ್ಶಮಯವಾಗಿದೆ ಎನ್ನುವ ಮಹತ್ವವನ್ನು ತಿಳಿಸಿಕೊಡುತ್ತದೆ. ಅನ್ಯ ದೇಶದಿಂದ ಬಂದವರಾಗಿದ್ದರೂ ಇಲ್ಲಿಯ ಭಾಷೆ, ಕಲೆ, ಸಾಹಿತ್ಯಕ್ಕೆ ವಿಶಿಷ್ಟ ಮೆರಗು ನೀಡಿದ್ದಾರೆ. ಸಮುದಾಯದವರು ಕಷ್ಟದ ಮಧ್ಯೆಯೂ ತಮ್ಮ ಇರುವಿಕೆಯನ್ನು ಗುರುತಿಸಿಕೊಂಡಿರುವುದೂ ಅಲ್ಲದೆ ಸಮುದಾಯದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಮಹತ್ವವನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಸಮುದಾಯದವರು ಪ್ರಗತಿಯತ್ತ ನೆಟ್ಟಿರುವ ದೃಷ್ಟಿಕೋನದ ಬಗೆಗೆ ವಿವರಣೆಯನ್ನು ನೀಡುವಲ್ಲಿ ಅಧ್ಯಯನವು ಮುಖ್ಯವಾಗಿದೆ.

**೧.೫ ಅಧ್ಯಯನದ ವಿಧಾನಗಳು**

ಅರಣ್ಯವಾಸಿಗಳಾದ ಸಿದ್ದಿ ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದಂತೆ ಸಮುದಾಯದವರು ನೆಲೆಗೊಂಡ ಪ್ರದೇಶಗಳಲ್ಲಿ ಸಂಚರಿಸಿ, ಸಮುದಾಯದವರ ಮತ್ತು ವಿದ್ವಾಂಸರ ಮೂಲಕ ಮಾಹಿತಿ ಪಡೆಯಲಾಗಿದೆ. ವಿಷಯಕ್ಕೆ ಸಂಬಂಧಿಸಿದ ಕೃತಿಗಳು, ಲೇಖನಗಳು, ಅನುಭವಗಳು ಹಾಗೂ ವಿಷಯಗಳನ್ನು ಅರಿತುಕೊಂಡು ವಿವಿಧ ಸಂಪನ್ಮೂಲ ಮತ್ತು ವಿಧಾನಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಮಹಾಪ್ರಬಂಧವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಅವಲೋಕನ ವಿಧಾನ**

ಸಿದ್ದಿ ಬುಡಕಟ್ಟು ಸಮುದಾಯದ ಮಾಹಿತಿ ಪಡೆಯಲು ಕ್ಷೇತ್ರಕಾರ್ಯದಲ್ಲಿ ಅವಲೋಕನ ವಿಧಾನವು ಮುಖ್ಯವಾದುದು. ಅವಲೋಕನವು ಸಾಮಾಜಿಕ ಸಂಶೋಧನೆಯಲ್ಲಿ ಮಾಹಿತಿ ಸಂಗ್ರಹಣೆಗಾಗಿ ಬಳಸಲಾಗುತ್ತಿರುವ ಮುಖ್ಯ ತಂತ್ರ ಸಾಧನಗಳಲ್ಲೊಂದು. ಪ್ರಶ್ನಾವಳಿ ಮತ್ತು ಸಂದರ್ಶನ ಅವಧಿಯಲ್ಲಿ ಕಂಡುಬರಬಹುದಾದ ಕೆಲವು ಸಮಸ್ಯೆಗಳನ್ನು ಅವಲೋಕನದ ಮೂಲಕ ಬಗೆಹರಿಸಿಕೊಳ್ಳಲು ಸಾಧ್ಯವಾಗುತ್ತದೆ. ಸಿದ್ದಿಯರ ಜೊತೆಯಲ್ಲಿ ಸಹಭಾಗಿಯಾಗಿ ಸಮುದಾಯದ ಅಂತರಾಳದಲ್ಲಿ ಹುದುಗಿರುವ ಮಾಹಿತಿ ಮತ್ತು ಇವರ ಬದುಕಿನ ಸವಾಲುಗಳನ್ನು ಕುರಿತು ಮಾಹಿತಿಯನ್ನು ತಿಳಿದು ಅಧ್ಯಯನಕ್ಕೆ ಪೂರಕವಾಗಿ ರೂಪಿಸಿಕೊಳ್ಳಲಾಗಿದೆ.

**ಪ್ರಶ್ನಾವಳಿ ವಿಧಾನ**

ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯ ಅವಲೋಕನೆಯಿಂದ ಅರಣ್ಯವಾಸಿಗಳಾದ ಸಿದ್ದಿಯರ ಅಧ್ಯಯನ ಮಾಡಲು ಮತ್ತು ಮಾಹಿತಿ ಪಡೆಯಲು ಪ್ರಶ್ನಾವಳಿಯು ಪ್ರಮುಖ ಪಾತ್ರ ವಹಿಸುತ್ತದೆ. ಅಧ್ಯಯನದ ಮುಖ್ಯ ಉದ್ದೇಶಗಳಿಗೆ ಅನುಗುಣವಾಗಿ ವಿವಿಧ ಆಯಾಮಗಳಲ್ಲಿ ಹಲವಾರು ಪ್ರಶ್ನೆಗಳನ್ನು ಹೊಂದಿರುವ ಸೂಕ್ತ ಪ್ರಶ್ನಾವಳಿಯನ್ನು

ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಆ ಮೂಲಕ ಸಮುದಾಯದವರ ಮುಖಾಮುಖಿ ಸಂದರ್ಶನ ಮಾಡಿ ಮಾಹಿತಿಯನ್ನು ಸಂಗ್ರಹಣೆ ಮಾಡಲಾಗಿದೆ. ಇದರ ಮೂಲಕ ನಿಜವಾದ ಚಿತ್ರಣವನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ.

**ಸಂದರ್ಶನ ವಿಧಾನ**

ಸಂದರ್ಶನ ವಿಧಾನ ಎನ್ನುವುದು ಸಾಮಾಜಿಕ ಸಂಶೋಧನೆಯ ಕ್ಷೇತ್ರದಲ್ಲಿ ಮಾಹಿತಿ ಸಂಗ್ರಹಿಸಲು ಹೆಚ್ಚು ಪರಿಣಾಮಕಾರಿ ಹಾಗೂ ಯಶಸ್ವಿ ವಿಧಾನವಾಗಿದೆ. ಸಂದರ್ಶನ ಎಂದ ಕೂಡಲೇ ಕೇವಲ ಸಂಭಾಷಣೆಯಲ್ಲ. ಇದು ಅಭಿಪ್ರಾಯವನ್ನು ವಿನಿಮಯ ಮಾಡಿಕೊಳ್ಳುವ ಮತ್ತು ಮಾಹಿತಿಯನ್ನು ಸಂಗ್ರಹಿಸುವ ಉದ್ದೇಶದ್ದಾಗಿದೆ. ಸಿದ್ದಿ ಸಮುದಾಯದವರು ಶತಶತಮಾನಗಳಿಂದ ಶೋಷಣೆಗೆ ಒಳಗಾಗಿ ಬಳಲಿದವರಾಗಿದ್ದಾರೆ. ಇವರ ಸಂಪೂರ್ಣ ಮಾಹಿತಿಯನ್ನು ಪಡೆಯುವುದರ ಸಲುವಾಗಿ ಸಮುದಾಯದವರನ್ನು ವೈಯಕ್ತಿಕವಾಗಿ ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ. ಅಲ್ಲದೆ ಕೆಲವು ಸಂಪನ್ಮೂಲ ವ್ಯಕ್ತಿಗಳನ್ನು ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ. ಈ ವಿಧಾನವು ಯಾವುದೇ ರೀತಿಯ ಸಂಶೋಧನೆಗೆ ಅತ್ಯವಶ್ಯಕವಾಗಿ ಬೇಕಾಗಿರುವಂತಹ ವಿಧಾನವಾಗಿರುವುದರಿಂದ ಸಂಶೋಧನೆಯ ವಸ್ತುನಿಷ್ಠತೆ ಕಾಯ್ದುಕೊಳ್ಳಲು ಉಪಯುಕ್ತವಾಗುತ್ತದೆ.

**ಐತಿಹಾಸಿಕ ವಿಧಾನ**

ಸಿದ್ದಿ ಬುಡಕಟ್ಟು ಇಡೀ ರಾಜ್ಯದಲ್ಲಿಯೇ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಆದ್ದರಿಂದ ಐತಿಹಾಸಿಕವಾಗಿ ಇವರನ್ನು ಕುರಿತು ಹೇಳುವ ಮತ್ತು ಇತರ ವಿವರವನ್ನು ನೀಡುವ ಕೃತಿಗಳಿಂದ ಮತ್ತು ಲೇಖನಗಳಿಂದ ವಿವಿಧ ರೀತಿಯ ಮಾಹಿತಿ ಪಡೆದುಕೊಂಡು ಅಧ್ಯಯನದ ವಿಷಯಕ್ಕೆ ಶಕ್ತಿ ತುಂಬಿ ಮಹಾಪ್ರಬಂಧವನ್ನು ಕಟ್ಟಿಕೊಡಲಾಗಿದೆ.

**ಧ್ವನಿಮುದ್ರಣ ಮತ್ತು ಛಾಯಾಚಿತ್ರ ವಿಧಾನ**

'ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳು' ಎಂಬ ಅಧ್ಯಯನದಲ್ಲಿ ಸಮುದಾಯದವರಿಂದ ಹಾಗೂ ಇತರ ಸಂಪನ್ಮೂಲ ವ್ಯಕ್ತಿಗಳಿಂದ ಮಾಹಿತಿ ಪಡೆಯುವ ಸಮಯದಲ್ಲಿ ಮೂಲಭೂತ ಸಾಧನಗಳಾದ ಟೇಪ್‌ರೆಕಾರ್ಡರ್ ಮತ್ತು ಕ್ಯಾಮೆರಾವನ್ನು ಬಳಸಿಕೊಳ್ಳಲಾಗಿದೆ. ಸಮುದಾಯದ ಒಟ್ಟಾರೆ ವಿವರಣೆಯನ್ನು ಒಳಗೊಂಡ ಸಂದರ್ಶನದ ಅವಧಿಯಲ್ಲಿ ಧ್ವನಿಮುದ್ರಣ ಮಾಡಿ ಪರಿಷ್ಕರಿಸಿ ಅಧ್ಯಯನಕ್ಕೆ ಪೂರಕವಾಗುವಂತೆ ಮಾಹಿತಿಯನ್ನು ಜೋಡಿಸಿ ಮಹಾಪ್ರಬಂಧವನ್ನು ರಚನೆ ಮಾಡಲಾಗಿದೆ. ಹಾಗೂ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮುದಾಯದವರ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗಿದೆ.

### ೧.೬ ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ

ನಮ್ಮ ಜ್ಞಾನ ವೃದ್ಧಿಗಾಗಿ ಪುಸ್ತಕಗಳು ಅವಶ್ಯವಾಗಿ ಬೇಕೇಬೇಕು. ಒಂದು ಸಂಶೋಧನೆಯು ಯಶಸ್ಸನ್ನು ಸಾಧಿಸಲು ಮೂಲಾಧಾರಗಳು ಅತ್ಯಾವಶ್ಯಕ. ಕ್ಷೇತ್ರಕಾರ್ಯವು ನಮ್ಮ ಸಂಶೋಧನೆಗೆ ಸ್ಪಷ್ಟವಾದ ಚಿತ್ರಣವನ್ನು ನಿಡುವ ದಾರಿದೀಪ. ಇದಲ್ಲದೆ ಪುಸ್ತಕಗಳು ಕೂಡಾ ಸಹಕಾರಿಯಾಗುತ್ತವೆ. 'ಸಿದ್ದಿಯರ ಸಾಮಾಜಿಕ ಸ್ಥಿತ್ಯಂತರಗಳು' ಎನ್ನುವ ಈ ಒಂದು ಅಧ್ಯಯನದ ಸಂಶೋಧನಾ ಪ್ರಬಂಧಕ್ಕೆ ಅನುಕೂಲಕರವಾಗುವಂತಹ ಇನ್ನಿತರ ಕೃತಿಗಳು ಮತ್ತು ಲೇಖನಗಳು ರಚಿತವಾಗಿವೆ. ಇದುವರೆಗೂ ಸಿದ್ದಿ ಬುಡಕಟ್ಟು ಸಮುದಾಯವನ್ನು ಕುರಿತು ಕೆಳಕಂಡ ಸಂಶೋಧನೆಗಳು ಮತ್ತು ಅಧ್ಯಯನಗಳನ್ನು ಸಮಾಜಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು, ಮನೋಶಾಸ್ತ್ರಜ್ಞರು, ಸಮಾಜವಿಜ್ಞಾನಿಗಳು ಕೈಗೊಂಡಿರುವುದನ್ನು ಗಮನಿಸಬಹುದಾಗಿದೆ.

- ಎನ್.ಆರ್.ನಾಯಕ್ ಅವರ 'ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ' ಎಂಬ ಪುಸ್ತಕದಲ್ಲಿ ಉತ್ತರಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಸಿದ್ದಿ ಸಮುದಾಯವನ್ನು ಕುರಿತು ವಿವರಿಸುತ್ತದೆ. ಭಾರತೀಯ ಸಮಾಜಕ್ಕೆ ವಿದೇಶಿಯರ ಆಗಮನ ಹೊಸದೇನಲ್ಲ. ಆದರೆ ಹೊರಗಿನಿಂದ ಬಂದ ಎಲ್ಲ ಸಮುದಾಯಗಳು ತಾವಾಗಿಯೇ ಇಷ್ಟಪಟ್ಟು ಬಂದಂತಹ ಸಮುದಾಯಗಳಾಗಿವೆ. ಆದರೆ, ಆಫ್ರಿಕಾ ಮೂಲಕ ಸಿದ್ದಿಯರು ಮಾತ್ರ ಭಾರತಕ್ಕೆ ಗುಲಾಮರಾಗಿ ಬಂದರು. ಈ ರೀತಿಯ ಪ್ರಸ್ತಾವನೆಯೊಂದಿಗೆ ಸಮುದಾಯದ ದೈಹಿಕ ಲಕ್ಷಣ, ಉಡುಗೆ-ತೊಡುಗೆ, ಭಾಷೆ, ಆಹಾರ, ಉದ್ಯೋಗ, ಆಚಾರ-ವಿಚಾರ, ಆಚರಣೆಗಳು, ಸಂಪ್ರದಾಯ, ಕಲೆಗಳ ಬಗೆಗೆ ಮಹತ್ವಪೂರ್ಣವಾದ ವಿವರಣೆಯನ್ನು ಒದಗಿಸುತ್ತದೆ.
- ಹಿ.ಚಿ.ಬೋರಲಿಂಗಯ್ಯರವರುರವರ 'ಸಿದ್ದಿಯರ ಸಂಸ್ಕೃತಿ' ಎಂಬ ಕೃತಿಯಲ್ಲಿ ಸಿದ್ದಿಯರು ಸ್ವಚ್ಛಂದ ಬದುಕಿನಿಂದ ಗುಲಾಮಗಿರಿಗೆ ನಡೆದುಬಂದ ದಾರಿಯನ್ನು ತಿಳಿಸುತ್ತದೆ. ಅರಬರು, ಪೋರ್ಚುಗೀಸರು, ಬ್ರಿಟೀಷರು ಇವರನ್ನು ಗೋವಾ ಬಂದರಿನ ಮೂಲಕ ಭಾರತದಲ್ಲಿ ಮಾರಾಟ ಮಾಡಿದ ಬಗೆ, ನಂತರದಲ್ಲಿ ಸಿದ್ದಿಯರು ಸ್ವತಂತ್ರ ಜೀವನದ ಕಡೆ ಮುಖಮಾಡಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಜೀವನವನ್ನು ರೂಪಿಸಿಕೊಂಡಿರುವುದರ ಬಗೆಗೆ ಮಹತ್ವದ ವಿವರಣೆಯನ್ನು ನೀಡುತ್ತದೆ. ಅಲ್ಲದೆ ತಮ್ಮದೇ ಆದ ಕಥೆಗಳು, ಒಗಟುಗಳು, ಹಾಡುಗಳನ್ನು ಒಳಗೊಂಡಂತೆ ಸಾಹಿತ್ಯವನ್ನು ರೂಪಿಸಿಕೊಂಡ ಬಗೆಯನ್ನು ಈ ಕೃತಿಯು ವಿವರಿಸುತ್ತದೆ.

- ರಾ.ಯ.ಧಾರವಾಡಕರ್‌ರವರ 'ಅಮೇರಿಕನ್ ನೀಗ್ರೋ ಕಥೆಗಳು' ಎನ್ನುವ ಕೃತಿಯ ಪ್ರಸ್ತಾವನೆಯಲ್ಲಿ ಸಮುದಾಯಕ್ಕೆ ಸಂಬಂಧಿಸಿದ ವಿವರಣೆ ದೊರೆಯುತ್ತದೆ. ಈ ಕೃತಿಯು ಪ್ರಮುಖವಾಗಿ ಏಳು ಕಥೆಗಳನ್ನು ಹೊಂದಿದೆ. ಈ ಕಥೆಗಳು ನೀಗ್ರೋಗಳ ಶೋಷಣೆಯನ್ನು ಪ್ರಮುಖವಾಗಿ ಬಿಂಬಿಸುತ್ತವೆ. ಅಮೇರಿಕಾ ದೇಶದಲ್ಲಿ ಬಿಳಿಯರು ಮತ್ತು ಕರಿಯರು ಎನ್ನುವ ತಾರತಮ್ಯ ಯಾವ ರೀತಿಯದ್ದಾಗಿತ್ತೆಂದು ತಿಳಿಸುತ್ತದೆ. ಕರಿಯರಾದ ನೀಗ್ರೋಗಳು ಬಲಿಪಶುಗಳಂತೆ ಯಾವ ರೀತಿಯಾದ ನರಕಯಾತನೆಯನ್ನು ಅನುಭವಿಸುತ್ತಿದ್ದರು ಎನ್ನುವುದನ್ನು ತಿಳಿಸುತ್ತದೆ.

- ಪ್ರೊ. ಹೆಚ್.ಜೆ.ಲಕ್ಕಪ್ಪಗೌಡ (ಪ್ರ.ಸಂ.) 'ಕರ್ನಾಟಕ ಬುಡಕಟ್ಟುಗಳು' ಸಂಪುಟ-೧ ಈ ಕೃತಿಯು ಕರ್ನಾಟಕದಲ್ಲಿನ ಹಲವಾರು ಬುಡಕಟ್ಟು ಸಮುದಾಯಗಳನ್ನು ಕುರಿತು ವಿವರಿಸುತ್ತದೆ. ಪ್ರತಿಯೊಂದು ಬುಡಕಟ್ಟು ಸಮುದಾಯಗಳು ಹೊಂದಿರಬಹುದಾದ ಸಂಸ್ಕೃತಿಯ ಬಗ್ಗೆ ವಿವರಣೆ ನೀಡುತ್ತದೆ. ಅದೇ ರೀತಿಯಾಗಿ ಉತ್ತರಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಸಿದ್ದಿ ಆದಿವಾಸಿ ಸಮುದಾಯದವರನ್ನು ಕುರಿತು ವಿವರಿಸುತ್ತದೆ. ಸಮುದಾಯದವರ ಊಟೋಪಚಾರಗಳು, ಕಾಡಿನೊಂದಿಗೆ ಇವರು ಹೊಂದಿರುವ ಸಂಬಂಧ, ಭಾಷೆ, ಸಮುದಾಯದವರು ಅನುಸರಿಸುವ ಧಾರ್ಮಿಕತೆಯ ಬಗೆಗೆ ಬೆಳಕು ಚೆಲ್ಲುತ್ತದೆ. ಸಿದ್ದಿಯರು ಹೊಂದಿರುವ ಕೌಟುಂಬಿಕ ವ್ಯವಸ್ಥೆ, ವಿವಾಹ ಪದ್ಧತಿ, ಬಂಧುತ್ವದ ಮಹತ್ವವನ್ನು ವಿವರಿಸುತ್ತದೆ. ಇವರ ಪ್ರಮುಖ ಕಲೆ, ಸಾಹಿತ್ಯ, ಸಂಗೀತದ ಶ್ರೀಮಂತಿಕೆಯನ್ನು ಬಿಂಬಿಸುತ್ತದೆ. ಕಾಲಾನುಗತಿಯಲ್ಲಿ ಸಮುದಾಯದ ಸಾಮಾಜಿಕ ಬದಲಾವಣೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ.

- ಹಿ.ಚಿ.ಬೋರಲಿಂಗಯ್ಯರವರ 'ನಮ್ಮೊಳಗೊಂದು ಪುಟ್ಟ ಆಫ್ರಿಕಾ' ಎರಡು ಭಾಗಗಳನ್ನು ಹೊಂದಿರುವ ಈ ಕೃತಿಯ ಮೊದಲನೆ ಭಾಗವು ಸಂಪೂರ್ಣವಾಗಿ ಸಿದ್ದಿಯರ ಬಗೆಗೆ ವಿವರಣೆಯನ್ನು ನೀಡುತ್ತದೆ. ಮಾನವನ ಉಗಮ ಸ್ಥಾನಗಳಲ್ಲೊಂದಾದ ದಕ್ಷಿಣ ಆಫ್ರಿಕಾದ ಕಾಡಿನಲ್ಲಿ ಸ್ವಚ್ಛಂದ ಬದುಕನ್ನು ಸಾಗಿಸುತ್ತಿದ್ದ ನೀಗ್ರೋಗಳನ್ನು ಅರಬರು, ಪೋರ್ಚುಗೀಸರು, ಬ್ರಿಟೀಷರು ಪ್ರಾಣಿಗಳನ್ನು ಬೇಟೆಯಾಡುವಂತೆ ಇವರನ್ನು ಬೇಟೆಯಾಡಿದರು. ನೀಗ್ರೋಗಳನ್ನು ತಮ್ಮ ಕೈವಶ ಮಾಡಿಕೊಂಡು ಅವರನ್ನು ಪ್ರಪಂಚದ ಹಲವಾರು ದೇಶಗಳಿಗೆ ಸಾಗಿಸಿ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡುತ್ತಿದ್ದರು. ಅದರ ಪರಿಣಾಮವಾಗಿ ಬಂಧಿಸಲ್ಪಟ್ಟ ನೀಗ್ರೋಗಳನ್ನು ಭಾರತದ ಗೋವಾ ಬಂದರಿನ ಮೂಲಕ ಇಲ್ಲಿಗೆ ಸಾಗಿಸಲಾಯಿತು. ಅದರ ಫಲವಾಗಿ ನಮ್ಮ

ಕರ್ನಾಟಕ ರಾಜ್ಯದೊಳಗೆ ನೆಲೆಸಿದ ನೀಗ್ರೋಗಳು ಸಿದ್ದಿಯರಾಗಿ ರೂಪಾಂತರಗೊಂಡರು. ಇವರು ನೆಲೆಸಿದ ಪ್ರದೇಶವು ಒಂದು ಪುಟ್ಟ ಆಫ್ರಿಕಾವಾಗಿ ಸೃಷ್ಟಿಯಾದಂತಾಯಿತು. ಶತಶತಮಾನಗಳವರೆಗೆ ಶೋಷಣೆಗೆ ಒಳಗಾಗಿದ್ದರೂ, ಆರ್ಥಿಕವಾಗಿ ಹಿಂದುಳಿದಿದ್ದರೂ, ಸಾಂಸ್ಕೃತಿಕವಾಗಿ ಶ್ರೀಮಂತಿಕೆಯನ್ನು ಹೊಂದಿದ್ದಾರೆ ಎನ್ನುವ ವಿವರಣೆಯನ್ನು ಈ ಕೃತಿಯು ಒಳಗೊಂಡಿದೆ.

- ಎಂ.ಆರ್.ಕಮಲರವರ 'ಕಪ್ಪು ಹಕ್ಕಿಯ ಬೆಳಕಿನ ಹಾಡು' ಎನ್ನುವ ಕೃತಿಯು ಗುಲಾಮಿ ಪದ್ಧತಿಯ ವಿರುದ್ಧ ಸೆಣಸಿದ ಕಪ್ಪು ಮಹಿಳೆಯರ ಆತ್ಮಕಥನಗಳನ್ನು ಒಳಗೊಂಡಿದೆ. ಪೃಥ್ವಿಯ ಮೇಲೆ ಲಾಭದ ಮೋಹಕ್ಕಾಗಿ ಒಬ್ಬ ಮನುಷ್ಯನು ಮತ್ತೊಬ್ಬ ಮನುಷ್ಯನನ್ನು ಮಾರಾಟ ಮಾಡುತ್ತಿದ್ದುದು ನಾಚಿಕೆಗೇಡಿತನದ ವಿಷಯವಾಗಿದೆ. ಈ ರೀತಿಯ ಅಮಾನವೀಯ ಪದ್ದತಿಯಸ್ನು ವಿರೋಧಿಸಿ ಗುಲಾಮರು ಸ್ವಾತಂತ್ರ್ಯದ ಕಡೆ ಗಮನಹರಿಸಿದರು. ಸಾಕಷ್ಟು ಜನ ಮಹಿಳೆಯರು ಗುಲಾಮಿತನದಿಂದ ಮುಕ್ತರಾಗಿ ಬಂದುದನ್ನು ವಿವರಿಸಲಾಗಿದೆ. ಕೆಲವು ಗುಲಾಮಿ ಮಹಿಳೆಯರು ಸೇನಾ ಶಿಬಿರದಲ್ಲಿ ತಾವು ಅನುಭವಿಸಿದ ಯಾತನೆಯ ನೆನಪುಗಳ ಮೆಲುಕು ಹಾಕುತ್ತದೆ. ಚಿಕ್ಕ ವಯಸ್ಸಿನಲ್ಲಿ ಅನುಭವಿಸಿದ ನೋವುಗಳನ್ನು ವಿವರಿಸುವ ಕಥೆಗಳಿವೆ. ವಿಶ್ವದ ಹಿರಿಯಣ್ಣನೆಂದು ಬೀಗುತ್ತಿರುವ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿನ ಗುಲಾಮಿ ಪದ್ಧತಿಯ ಇತಿಹಾಸವನ್ನು ಕುರಿತು ವಿವರಿಸುತ್ತದೆ. ಒಟ್ಟಾರೆಯಾಗಿ ಈ ಕೃತಿಯು ನೀಗ್ರೋ ಗುಲಾಮರ ಆತ್ಮಕಥೆಗಳನ್ನು ಹೊಂದಿರುವ ಒಂದು ಅತ್ಯುತ್ತಮ ಗ್ರಂಥವಾಗಿದೆ.

- ಎಂ.ಆರ್.ಕಮಲರವರ 'ಕಪ್ಪು ಹಕ್ಕಿಯ ಬೆಳಕಿನ ಹಾಡು-೨' ಎಂಬ ಕೃತಿಯು ಆಫ್ರಿಕನ್-ಅಮೇರಿಕನ್ ಗುಲಾಮಿ ಮಹಿಳೆಯರ ಕಥನಗಳನ್ನು ಒಳಗೊಂಡಿರುವ ಒಂದು ಅತ್ಯಮೂಲ್ಯವಾದ ಕೃತಿಯಾಗಿದೆ. ಈ ಕೃತಿಯು ಗುಲಾಮಿ ಮಹಿಳೆಯರು ತಾವು ಗುಲಾಮತನದಲ್ಲಿ ಅನುಭವಿಸಿದ ಅನುಭವಗಳನ್ನು ಮನಮುಟ್ಟುವ ರೀತಿಯಲ್ಲಿ ಚಿತ್ರಿಸುವ ಒಂದು ಅತ್ಯುತ್ತಮ ಕೃತಿಯಾಗಿದೆ. ಗುಲಾಮಿ ಮಹಿಳೆಯರು ಗುಲಾಮತನದಿಂದ ಬಿಡುಗಡೆಯಾಗಿ ಸ್ವತಂತ್ರವಾಗಿ ಬದುಕುವ ತುಡಿತವನ್ನು ವಿವರಿಸುತ್ತದೆ. ಮಾಲಿಕರು ಗುಲಾಮರನ್ನು ಅಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದಾಗ ಗುಲಾಮರು ಈ ಪದ್ದತಿಯಿಂದ ಹೊರಬರುವ ಮತ್ತು ತಾವು ಅನುಭವಿಸಿದ ಯಾತನೆಯ ಬಗೆಗೆ ಈ ಕೃತಿಯು ಪ್ರಮುಖವಾಗಿ ವಿವರಿಸುತ್ತದೆ.

- ಎಂ.ಕೆ.ಗಿರೀಶ್‌ಕುಮಾರ್ (ಸಂಶೋಧಕ), ಮಾರ್ಗದರ್ಶಕರು: ಹಿ.ಚಿ.ಬೋರಲಿಂಗಯ್ಯ, 'ಕರ್ನಾಟಕದ ಬುಡಕಟ್ಟು ಚಿತ್ರಕಲೆ', ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨. (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ). ಈ ಸಂಶೋಧನಾ ಪ್ರಬಂಧವು ಗೌಳಿಗರು, ಸಿದ್ದಿಯರು, ಕುಣುಬಿಯರು, ಹಾಲಕ್ಕಿ ಒಕ್ಕಲಿಗರ ಸಮುದಾಯಗಳ ಚಿತ್ರಕಲೆಯನ್ನು ಒಳಗೊಂಡ ಅಧ್ಯಯನವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಿದ್ದಿಯರ ಚಿತ್ರಕಲೆಯ ಬಗೆಗೆ ಹೆಚ್ಚಿನ ವಿವರಣೆ ದೊರೆಯುತ್ತದೆ. ಸಿದ್ದಿಯರು ಹಬ್ಬ ಹರಿದಿನಗಳಲ್ಲಿ ಮತ್ತು ವಿಶೆಷ ಸಂದರ್ಭದಲ್ಲಿ ಚಿತ್ರಕಲೆಯನ್ನು ಸೊಗಸಾಗಿ ಚಿತ್ರಿಸುತ್ತಾರೆ. ಹಿಂದೂ ಸಿದ್ದಿಯರು ಮದುವೆಯ ಸಂದರ್ಭದಲ್ಲಿ ಗೋಡೆಯ ಮೇಲೆ ಹಸೆ ಬರೆಯುವ ಪದ್ಧತಿಯನ್ನು ಕುರಿತು ವಿವರಿಸುತ್ತದೆ. ನೆಲದ ಮೇಲೆ, ಗೋಡೆಯ ಮೇಲೆ ಮತ್ತು ಗೃಹೋಪಯೋಗಿ ವಸ್ತುಗಳ ಮೇಲೆ ಚಿತ್ರಿಸುವುದು ವಿಶೇಷ. ಇವರ ಚಿತ್ರಕಲೆಯಲ್ಲಿ ತೋರಣಗಳು ಪ್ರಮುಖ ಸ್ಥಾನವನ್ನು ಹೊಂದಿವೆ. ಸಮುದಾಯದಲ್ಲಿನ ಹಲವಾರು ವಿವಿಧ ರೀತಿಯ ಚಿತ್ರಕಲೆಯನ್ನು ಕುರಿತು ಈ ಸಂಶೋಧನಾ ಪ್ರಬಂಧವು ವಿವರಿಸುತ್ತದೆ.
- R.E.Enthovenರವರ 'The Tribes and Castes of Bombay – Vol.3rd' ಕೃತಿಯು ಇಂಗ್ಲೀಷ್ ವರ್ಣಮಾಲೆಯ 'M' ನಿಂದ 'V'ವರೆಗೆ ಬರುವ ಸಮುದಾಯಗಳ ಬಗೆಗೆ ವಿವರಿಸುತ್ತದೆ. ಅದರಲ್ಲಿ ಸಿದ್ದಿ ಸಮುದಾಯವೂ ಸಹ ಒಂದಾಗಿದೆ. ಈ ಸಂಪುಟದಲ್ಲಿ ಆಫ್ರಿಕಾ ಮೂಲ ನಿವಾಸಿಗಳಾದ ಸಿದ್ದಿ ಸಮುದಾಯದವರ ಬಗೆಗೆ ಮಹತ್ವಪೂರ್ಣವಾದ ವಿವರಣೆಯನ್ನು ನೀಡುತ್ತದೆ. ೧೯೦೧ ರಲ್ಲಿ ಬಾಂಬೆ ಪ್ರದೇಶದಲ್ಲಿ ಆಫ್ರಿಕಾ ಮೂಲದ ಸಿದ್ದಿಯರು ಒಟ್ಟು ೧೨,೮೪೮ ಜನಸಂಖ್ಯೆಯನ್ನು ಹೊಂದಿರುವುದನ್ನು ತಿಳಿಸುತ್ತದೆ. ಅದರಲ್ಲಿ ೬೭೬೭ ಪುರುಷರು ಮತ್ತು ೬೦೮೧ ಮಹಿಳೆಯರ ಅಂಕಿ-ಸಂಖ್ಯೆಯನ್ನು ನೀಡುತ್ತದೆ. ಉಳಿದಂತೆ ಗುಜರಾತ್ ಮತ್ತು ಕರ್ನಾಟಕದ ಕೆನರಾ ಜಿಲ್ಲೆಯ ಸಿದ್ದಿಯರ ಬಗೆಗೆ ತಿಳಿಸುತ್ತದೆ. ಸಮುದಾಯದ ಧರ್ಮ, ವೃತ್ತಿ, ವಿವಾಹ ಕ್ರಮ, ಹಿರಿಯರ ಆಚರಣೆ, ಸಾವಿನ ಆಚರಣೆ, ಆಹಾರ ಮುಂತಾದ ವಿಷಯಗಳ ಬಗೆಗೆ ಪ್ರಮುಖವಾದ ಮಾಹಿತಿಯನ್ನು ಒದಗಿಸುತ್ತದೆ.
- ಡಾ. ಎಲ್.ಆರ್.ಹೆಗಡೆರವರ 'ಸಿದ್ದಿಯರ ಕಥೆಗಳು' ಎನ್ನುವ ಗ್ರಂಥದಲ್ಲಿ ಸಿದ್ದಿಯರ ಹಿನ್ನೆಲೆಯನ್ನು ವಿವರಿಸಲಾಗಿದೆ. ಈ ಕೃತಿಯು ಸಮುದಾಯದ ಜೀವನ ವಿಧಾನದ ಬಗೆಗೆ ಮಾಹಿತಿ ಒದಗಿಸುತ್ತದೆ. ಅಲ್ಲದೆ ಸಿದ್ದಿಯರ ವೈವಿಧ್ಯಮಯವಾದ ಕಥೆಗಳ ಬಗೆಗೆ ಸಂಪೂರ್ಣ ಚಿತ್ರಣವನ್ನು ನೀಡುತ್ತಧೆ.

- Miss. Manjula .S, 'Anthropological Demography of Siddi of Uttar Kannada District-Karnataka', Karnataka University, Dharwad, 2008 (Ph.D. Thesis). ಕರ್ನಾಟಕ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗದಲ್ಲಿ ಸಿದ್ದಿಯರ ಜನಸಂಖ್ಯೆಯನ್ನು ಕುರಿತು ಮಾಹಿತಿ ನೀಡುವ ಸಂಶೋಧನಾ ಪ್ರಬಂಧವನ್ನು ೨೦೦೮ ರಲ್ಲಿ ಮಂಡಿಸಲಾಗಿದೆ.
- Mr. Prabhakar .P. Pawate, 'Morpho-genetic Study of the Siddi's of Karnataka', 1985, Karnataka University, Dharwad (Ph.D. Thesis).

ಅಲ್ಲದೆ, ಹಿ.ಚಿ.ಬೋರಲಿಂಗಯ್ಯರವರ 'ಕರ್ನಾಟಕ ಜನಪದ ಕಲೆಗಳ ಕೋಶ', ಚನ್ನಬಸಪ್ಪ .ಗೋ.ರು.ರವರ 'ಕರ್ನಾಟಕ ಜನಪದ ಕಲೆಗಳು', ನಾಯಕ್ .ಎನ್.ಆರ್.ರವರ 'ಕಾರವಾರ ಜಿಲ್ಲೆಯ ಜನಪದ ಗೀತೆಗಳು' ಎನ್ನುವ ಕೃತಿಗಳು ಸಿದ್ದಿಯರ ಪ್ರಮುಖ ಕಲೆಯಾದ ಡಮಾಮಿ ಕುಣಿತದ ಬಗೆಗೆ ವಿವರಣೆಯನ್ನು ನೀಡುತ್ತವೆ.

## ಅಧ್ಯಾಯ–೨

# ಸಮುದಾಯದ ಪರಿಚಯ

೨.೧ ಸಮುದಾಯದ ಹಿನ್ನೆಲೆ

೨.೨ ಭೌಗೋಳಿಕ ಪರಿಚಯ

೨.೩ ಜನಸಂಖ್ಯೆ

೨.೪ ಪದ ನಿಷ್ಪತ್ತಿ

೨.೫ ಸೃಷ್ಟಿ ಪುರಾಣಗಳು

## ೨.೧ ಹಿನ್ನೆಲೆ

**ಸೃಷ್ಟಿ**ಯ ಒಡಲಲ್ಲಿ ಸಾವಿರಾರು, ಲಕ್ಷಾಂತರ ಬಗೆಯ ಜೀವಿಗಳು ಜನ್ಮ ತಳೆದಿವೆ. ಇವುಗಳಲ್ಲಿ ಮಾನವ ಪ್ರಾಣಿಯು ಶ್ರೇಷ್ಠವಾದುದು. ಇತರೆ ಪ್ರಾಣಿಗಳಿಗಿಂತ ಮಾನವ ಭಿನ್ನವಾಗಿದ್ದಾನೆ. ಇತರೆ ಬೇರೆ ಯಾವ ಜೀವಿಗಳಲ್ಲಿರದಿರುವ ಮಾತನಾಡುವ ಶಕ್ತಿ, ಆಲೋಚಿಸುವ ಶಕ್ತಿ ಮತ್ತು ಜ್ಞಾಪಕ ಶಕ್ತಿಯನ್ನು ಹೊಂದಿದ್ದಾನೆ. ಆದ್ದರಿಂದ ಮಾನವನನ್ನು ಬುದ್ಧಿವಂತ ಪ್ರಾಣಿ ಎಂದು ಕರೆಯಲಾಗುತ್ತದೆ. ಮಾನವನು ಇಂದು ಸೃಷ್ಟಿಯನ್ನೇ ಮೆಟ್ಟಿ ನಿಲ್ಲಬಹುದಾದ ಸಾಮರ್ಥ್ಯವನ್ನು ಹೊಂದಿದವನಂತೆ ಭಾಸವಾಗುತ್ತದೆ. ಬುದ್ಧಿವಂತಿಕೆ ಮತ್ತು ಚುರುಕುತನವನ್ನು ದಿನದಿಂದ ದಿನಕ್ಕೆ ಹೆಚ್ಚಿಸಿಕೊಳ್ಳುತ್ತಾ ನಡೆದಿದ್ದಾನೆ. ಆದರೆ ಇತರೆ ಪ್ರಾಣಿಗಳಲ್ಲಿರುವಂತೆ ಸಹಬಾಳ್ವೆಯನ್ನು ಮರೆತಿದ್ದಾನೆ. ಮನುಷ್ಯರನ್ನು ಮನುಷ್ಯರೇ ಹಿಂಸಿಸಿ ವ್ಯಾಪಾರ ಮಾಡುತ್ತಿರುವುದು ದುರಂತವೇ ಸರಿ. ಮಾನವ ಭೂಮಿಯ ಮೇಲೆ ಸೃಷ್ಟಿಯಾದ ದಿನದಿಂದ ಇಂದಿನವರೆಗೂ ನಿರಂತರವಾಗಿ ಸಂಘರ್ಷಗಳು ನಡೆದಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಬಲಿಷ್ಠನಾದವನು ಅಸಮರ್ಥನನ್ನು ಅವ್ಯಾಹತವಾಗಿ ಹಿಂಸಿಸುತ್ತಾ ಬಂದಿರುವುದು ತಿಳಿದುಬರುತ್ತದೆ.

ವಿಶ್ವದ ಪ್ರತಿಯೊಂದು ರಾಷ್ಟ್ರಗಳಲ್ಲಿ ಅಮಾನುಷ ಕೃತ್ಯಗಳು ಸರ್ವೇ ಸಾಮಾನ್ಯವಾಗಿವೆ. ಶಾಂತಿಯ ನಾಡು, ಸಂಸ್ಕೃತಿಯ ಬೀಡು ಎಂದು ಹೆಸರುವಾಸಿಯಾದ ಭಾರತವೂ ಸಹ ಇದಕ್ಕೆ ಅಪವಾದವಲ್ಲ. ಭಾರತೀಯ ಸಮಾಜದ ಜಾತಿ ವ್ಯವಸ್ಥೆಯನ್ನು ಗಮನಿಸುವುದಾದರೆ, ಬ್ರಿಟೀಷರು ಭಾರತಕ್ಕೆ ಬರುವುದಕ್ಕೆ ಮುಂಚೆ ಅಮಾನವೀಯ ಆಚರಣೆಗಳನ್ನು ಹೊಂದಿತ್ತು. ಪ್ರಬಲ ವರ್ಗಗಳು ದುರ್ಬಲ ವರ್ಗದವರನ್ನು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದರು. ಪ್ರಸ್ತುತ ಸಮಾಜದಲ್ಲಿ ಅಷ್ಟೊಂದು ತಾರತಮ್ಯವನ್ನು ಹೊಂದಿಲ್ಲವಾದರೂ, ಗ್ರಾಮೀಣ ಸಮುದಾಯದಲ್ಲಿ

ಇದರ ಬೇರುಗಳು ಇನ್ನೂ ಜೀವಂತವಾಗಿರುವುದು ಗೋಚರಿಸುತ್ತಿದೆ. ಆಫ್ರಿಕಾದಿಂದ ಎಳೆದು ತಂದಂತಹ ಗುಲಾಮರನ್ನು ಭಾರತೀಯ ಸಮಾಜದಲ್ಲಿಯೂ ಬಹಿರಂಗವಾಗಿ ಹರಾಜು ಮಾಡುತ್ತಿದ್ದುದು ತಿಳಿದುಬರುತ್ತದೆ.

ವಿಶ್ವದ ಭೂ ಖಂಡಗಳಲ್ಲಿ ಆಫ್ರಿಕಾ ಖಂಡವು ಹಲವಾರು ವೈಶಿಷ್ಟ್ಯತೆಗಳನ್ನು ಹೊಂದಿದೆ. ಜೀವ ವೈವಿಧ್ಯಕ್ಕೆ ಹೆಸರುವಾಸಿಯಾಗಿದೆ. ಜಗತ್ತಿನ ಪುರಾತನ ಜೀವಿಗಳ ಪ್ರಮುಖ ನೆಲೆ ಎನ್ನುವುದು ತಿಳಿಯುತ್ತದೆ. ವಿಶ್ವದಲ್ಲಿಯೇ ವಜ್ರ ವ್ಯವಹಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ. ಇದನ್ನು ಕಗ್ಗತ್ತಲೆಯ ಖಂಡ ಎಂತಲೂ ಕರೆಯಲಾಗುತ್ತದೆ. ನಾಗರಿಕ ಸಮಾಜದ ದೃಷ್ಟಿಗೆ ಗೋಚರಿಸದೆ ಸ್ವಚ್ಛಂದವಾಗಿತ್ತು. ಆದರೆ, ಯಾವಾಗ ನಾಗರಿಕ ಸಮಾಜದ ಕಣ್ಣಿಗೆ ಕಾಣಿಸಿಕೊಂಡಿತೋ ಅಂದಿನಿಂದ ಈ ಖಂಡವು ಭೀಭತ್ಸ ಘಟನೆಗೆ ಕಾರಣವಾಯಿತು. ನಾಗರಿಕ ಸಮಾಜದವರು ಈ ಖಂಡದ ಮೇಲೆ ಹಸಿದ ಹೆಬ್ಬುಲಿಗಳಂತೆ ಎರಗಿ, ಇಡೀ ಮಾನವ ಕುಲವೇ ಊಹಿಸಲಾರದ ಘಟನೆಗೆ ಸಾಕ್ಷಿಯಾಯಿತು. ಅರಬ್ ವರ್ತಕರು ಈ ಖಂಡದವರ ಮೇಲೆ ಎರಗಿ ಗುಂಡಿನ ಮಳೆಗರೆದರು. ಕಂಡ ಕಂಡವರನ್ನು ಗುಂಡು ಹಾರಿಸಿ ಕೊಂದರು, ಉಳಿದವರನ್ನು ಪಶುಗಳಂತೆ ಎಳೆದು ತಂದರು. “ಜಾಂಜಿಬಾರ್, ಆಫ್ರಿಕಾ ಭೂ ಖಂಡದಿಂದ ಕೇವಲ ೨೦ ಮೈಲುಗಳಷ್ಟು ದೂರವಿರುವ ಒಂದು ಚಿಕ್ಕ ದ್ವೀಪ. ಇದನ್ನು ಒಬ್ಬ ಸುಲ್ತಾನ ಆಳುತ್ತಿದ್ದ. ಆಫ್ರಿಕಾ ಖಂಡದಲ್ಲಿ ನಡೆಯುತ್ತಿದ್ದ ಎಲ್ಲ ಅನಾಚಾರ, ದೌರ್ಜನ್ಯ ಮುಂತಾದವುಗಳಿಗೆ ಆಗ ಜಾಂಜಿಬಾರ್ ತವರುಮನೆಯಾಗಿತ್ತು.”[೧] ಅರಬ್ ವರ್ತಕರಿಗೆ ಪ್ರತಿ ವರ್ಷ ಸಾವಿರಾರು ಗುಲಾಮರನ್ನು ಸುಲ್ತಾನನು ಒದಗಿಸುತ್ತಿದ್ದ. ಅರಬ್ ವರ್ತಕರು ನೀಡುವ ಹೆಂಡ ಮತ್ತು ಆಧುನಿಕ ವಸ್ತುಗಳ ಸಲುವಾಗಿ ದೃಢಕಾಯರಾದ ಸಿದ್ದಿಯರನ್ನು ಗುಲಾಮರನ್ನಾಗಿ ಎಳೆದುಕೊಂಡು ಹೋಗುವುದಕ್ಕೆ ಸಹಕರಿಸುತ್ತಿದ್ದ. ಅರಬರು ಇವರನ್ನು ಎಳೆದು ತಂದು ವಿವಿಧ ಪ್ರದೇಶಗಳಲ್ಲಿ ಬಹಿರಂಗವಾಗಿ ಮಾರಾಟ ಮಾಡುತ್ತಿದ್ದರು.

ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಸಿದ್ದಿಯರು ಮೂಲತಃ ಆಫ್ರಿಕಾದವರಾಗಿದ್ದಾರೆ. ಇವರು ಭಾರತೀಯ ಸಮಾಜಕ್ಕೆ ಗುಲಾಮರಾಗಿ ಪರಿಚಯವಾದರು. ಅರಬರು ಮೊದಲಿಗೆ ಸಾಗರದ ಸಾಮಿತ್ವವನ್ನು ಹೊಂದಿದ್ದರು. ಇವರು ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವ್ಯಾಪಾರವನ್ನು ನಡೆಸುತ್ತಿದ್ದರು. ಆ ಸಂದರ್ಭದಲ್ಲಿ ದೃಢಕಾಯರಾದ ಸಿದ್ದಿಯರ ಮೇಲೆ ಅರಬರ ಕಣ್ಣು ನೆಟ್ಟಿತು. ಪರಿಣಾಮವಾಗಿ ಅರಬರು ತಮ್ಮ ವ್ಯಾಪಾರ ವ್ಯವಹಾರದ ಸರಕುಗಳ ಜೊತೆಗೆ ಸಿದ್ದಿಯರನ್ನು ಗುಲಾಮರನ್ನಾಗಿ ಎಳೆದು ತಂದು ಮಾರಾಟ ಮಾಡಲು ಪ್ರಾರಂಭಿಸಿದರು.[೨] ಅರಬರ ಮೂಲಕ ಆರಂಭವಾದ ಈ ರೀತಿಯ ಅಮಾನುಷ ಕೃತ್ಯ ಪೋರ್ಚುಗೀಸರು, ಡಚ್ಚರು ಮತ್ತು ಬ್ರಿಟೀಷರ ಅವಧಿಯವರೆಗೆ ಅವ್ಯಾಹತವಾಗಿ

ಮುಂದುವರೆದುಕೊಂಡು ಬಂದಿತು. ಗುಲಾಮರನ್ನಾಗಿ ಎಳೆದುತಂದ ನಂತರ ಇವರನ್ನು ಮಾರುಕಟ್ಟೆಯಲ್ಲಿ ಬಹಿರಂಗವಾಗಿ ಹರಾಜು ಹಾಕಿ ಕೊಂಡುಕೊಳ್ಳಲಾಗುತ್ತಿತ್ತು. ಹರಾಜು ಪ್ರಕ್ರಿಯೆಯ ವಿವರಣೆಯನ್ನು ಭಿತ್ತಿಪತ್ರಗಳ ಮೂಲಕ ಇಲ್ಲವೇ ಡಂಗೂರವನ್ನು ಸಾರ್ವಜನಿಕವಾಗಿ ಸಾರುವ ಮೂಲಕ ತಿಳಿಸಲಾಗುತ್ತಿತ್ತು. "ಆಫ್ರಿಕಾದ ಪವನ ಕರಾವಳಿಯಿಂದ ಇದೀಗ ಬಂದಿರುವ 'ಇಬ್ಬರು ಸೋದರರು' ಹಡಗು ಅಪೂರ್ವ ಮ್ಹಾಲನ್ನು ತಂದಿದೆ. ಬಹಳ ಸೊಗಸಾದ ಒಳ್ಳೆಯ ಸ್ಥಿತಿಯಲ್ಲಿರುವ ತಕ್ಷಣವೇ ದುಡಿಮೆಗೆ ತಕ್ಕವರಾದ ದಷ್ಟಪುಷ್ಟ ಗಂಡಸರು ಮತ್ತು ಹೆಂಗಸರು. ಷರತ್ತುಗಳು: ಅರ್ಧ ಬೆಲೆ ನಗದಾಗಿ ಅಥವಾ ಧಾನ್ಯರೂಪದಲ್ಲಿ ಈಗ ಸಂದಾಯ. ಉಳಿದರ್ಧ ಜನವರಿ ಮೊದಲ ದಿನ ಅಗತ್ಯವೆನಿಸಿದರೆ ಸಾಲಪತ್ರ–ಭದ್ರತಾ ಪತ್ರಗಳನ್ನು ಬರೆದುಕೊಡಬೇಕು. ಕೊಲ್ಲಿಯಲ್ಲಿರುವ ಶ್ರೀ ಬೋರ್ಡೋ ಅವರ ತೋಟದಲ್ಲಿ (ನಂ.೪೮) ಪ್ರತಿ ದಿನ ಬೆಳಿಗ್ಗೆ ೧೦:೦೦ ಗಂಟೆಗೆ ಮಾರಾಟ ಆರಂಭ.

ಮೇ ೧೯, ೧೭೮೪ ಜಾನ್ ಮಿಷಲ್."[೨] ಹೀಗೆ ಬಹಿರಂಗವಾಗಿ ಹರಾಜು ಹಾಕಲಾಗುತ್ತಿತ್ತು.

ಸಿದ್ದಿಯರನ್ನು ಗುಲಾಮರನ್ನಾಗಿ ತರುವ ಸಂದರ್ಭದಲ್ಲಿ ರಕ್ತಪಾತವೇ ಆಗಿತ್ತು. ಅರಬರು 'ಜಾಂಬೇಸಿಯಾ', 'ಹಬಸೀ' ದ್ವೀಪಗಳಲ್ಲಿ ಕಂಡಕಂಡವರಿಗೆ ಗುಂಡಿಟ್ಟು ಕೊಲ್ಲಲು ಪ್ರಾರಂಭಿಸಿದರು. ಅರಬರ ಗುಂಡಿನ ಮಳೆಗೆ ಹೆದರಿ ಓಡಿ ಹೋಗುತ್ತಿದ್ದವರನ್ನು ಹಿಡಿದು, ಬಡಿದು, ಬಲೆಯಲ್ಲಿ ಕೆಡವಿ, ಹೆಡೆಮುರಿ ಕಟ್ಟಿ ಎಳೆದು ತರಲಾಗುತ್ತಿತ್ತು. ಆಗ ಸಾವಿರಾರು ಗುಲಾಮರು ಗುಂಡಿನ ಬಲೆಗೆ ಆಹುತಿಯಾಗಿರುವುದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಈ ರೀತಿಯಾಗಿ ಬೇಟೆಯಾಡಿ ಉಳಿದವರನ್ನು ಹಡಗಿನ ಮುಖಾಂತರ ಸರಕುಗಳಂತೆ ಸಾಗಿಸಲಾಗುತ್ತಿತ್ತು. ಸಾಗರ ದಾಟುವ ವೇಳೆಗೆ ಹಲವಾರು ಗುಲಾಮರು ಮರಣವನ್ನು ಹೊಂದಿರುತ್ತಿದ್ದರು. ಈ ಗುಲಾಮರನ್ನು ಹಡಗಿನ ಕೆಳ ಕೋಣೆಯಲ್ಲಿ ಸರಪಳಿಯಿಂದ ಬಿಗಿದು ಕಟ್ಟುತ್ತಿದ್ದರು. ಸಣ್ಣ ಪ್ರಮಾಣದ ಕೋಣೆಯಲ್ಲಿ ಇವರನ್ನು ಕುರಿಗಳಂತೆ ತುಂಬುತ್ತಿದ್ದರು. ಕೆಲವೇ ಜನರಿಗೆ ಮಾತ್ರ ಸಾಕಾಗುವಷ್ಟು ಆಹಾರವನ್ನು ಮೇಲಿನಿಂದ ಇವರಿಗೆ ಎಸೆಯಲಾಗುತ್ತಿತ್ತು. ಆ ಊಟ ಯಾರಿಗೂ ಸಾಲದಾಗುತ್ತಿತ್ತು. ಅಲ್ಲದೇ ಇವರು ಅದೇ ಸ್ಥಳದಲ್ಲಿಯೇ ಊಟ, ವಿರಾಮ ಮತ್ತು ಮಲ–ಮೂತ್ರಗಳನ್ನು ಮಾಡಬೇಕಾಗುತ್ತಿತ್ತು. ಇಂತಹ ಅಮಾನುಷ ವಾತಾವರಣದಿಂದಾಗಿ ಹಡಗು ನಿಗದಿತ ಸ್ಥಳ ತಲುಪುವುದರೊಳಗೆ ಹಲವಾರು ಗುಲಾಮರು ಮರಣವನ್ನು ಹೊಂದುತ್ತಿದ್ದರು. ಕೆಲವರು ಅನಾರೋಗ್ಯಕ್ಕೂ ತುತ್ತಾಗಿರುತ್ತಿದ್ದರು. ಅಳಿದುಳಿದವರನ್ನು ಮಾರುಕಟ್ಟೆಗೆ ತಂದು ಹರಾಜು ಕೂಗಿ ಮಾರಾಟ ಮಾಡಲಾಗುತ್ತಿತ್ತು. ಇವರು ದಷ್ಟಪುಷ್ಟರಾಗಿರುವುದರಿಂದ ಕಠಿಣಕರವಾದ ಕೆಲಸವನ್ನು ಮಾಡುತ್ತಾರೆ ಎನ್ನುವ

ಉದ್ದೇಶದಿಂದ ಇವರನ್ನು ಎಳೆದು ತರಲಾಯಿತು. ಇವರ ಶಾರೀರಿಕ ಗಡಸುತನ ಇವರನ್ನು ಹಲವಾರು ವೃತ್ತಿಯಲ್ಲಿ ತೊಡಗುವಂತೆ ಮಾಡಿತು. "ಶಕ್ತಿಶಾಲಿಗಳಾದ ನೀಗ್ರೋ ಗುಲಾಮರನ್ನು ಪೋರ್ಚುಗೀಸರು ಸೈನಿಕ ಕಾರ್ಯಾಚರಣೆಗೂ ಬಳಸಿಕೊಂಡಿದ್ದಿದೆ. ಆಫ್ರಿಕಾದಿಂದ ಗುಲಾಮರಾಗಿ ಭಾರತಕ್ಕೆ ಬಂದ ಸಿದ್ದಿಯರು ಇಲ್ಲಿ ಕೂಲಿಗಳಾಗಿ, ಕೃಷಿ ಕಾರ್ಮಿಕರಾಗಿ, ಸೈನಿಕರಾಗಿ ಸೇವೆಯನ್ನು ಸಲ್ಲಿಸಿ ಕ್ರಮೇಣ ಶಕ್ತಿಶಾಲಿಗಳಾಗಿ ಭಾರತದ ಒಂದು ಪುಟ್ಟ ರಾಜ್ಯದ ದೊರೆಗಳೂ ಆದ ಉಲ್ಲೇಖಗಳಿವೆ."[೩] ಈ ರೀತಿಯಾಗಿ ಹಲವಾರು ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿರುವ ಇವರು ಗುಲಾಮಗಿರಿಯಿಂದ ತಪ್ಪಿಸಿಕೊಂಡು ಇಂದು ದಟ್ಟವಾದ ಅರಣ್ಯದ ಮಧ್ಯೆ ವಾಸವಾಗಿದ್ದಾರೆ.

ಗುಲಾಮರಾಗಿ ಪರಿಚಯವಾದ ಇವರು ಮಾಲಿಕರ ಚಿತ್ರ ಹಿಂಸೆಗೆ ಒಳಗಾಗಿ ಅರಣ್ಯವನ್ನು ಪ್ರವೇಶಿಸಿದರು. ಸಿದ್ದಿಯರನ್ನು ಖರೀದಿಸಿದ ಮಾಲಿಕರು ಇವರನ್ನು ಬಹಳಷ್ಟು ಹಿಂಸಿಸಿ ಹೆಚ್ಚಿನ ಕೆಲಸವನ್ನು ಮಾಡಿಕೊಳ್ಳುತ್ತಿದ್ದರು. ಸಿದ್ದಿ ಮಹಿಳೆಯರನ್ನು ಮಾಲಿಕರು ದೈಹಿಕವಾಗಿ ಅಕ್ರಮ ಸಂಭೋಗಕ್ಕೆ ಬಳಸಿಕೊಳ್ಳುತ್ತಿದ್ದುದು ತಿಳಿಯುತ್ತದೆ. ಮಾಲಿಕರ ಮನೆಯ ಕೆಲವು ಮಹಿಳೆಯರು ಗುಲಾಮರಾದ ಸಿದ್ದಿ ಪುರುಷರನ್ನು ಅಕ್ರಮ ಸಂಭೋಗಕ್ಕೆ ಬಳಸಿಕೊಳ್ಳುತ್ತಿದ್ದರು. ಈ ವಿಷಯ ಮಾಲಿಕನಿಗೆ ತಿಳಿದರೆ ಗುಲಾಮನಿಗೆ ಶಿಕ್ಷೆ ನೀಡಲಾಗುತ್ತಿತ್ತು, ಇಲ್ಲವೇ ಕೊಲ್ಲಲಾಗುತ್ತಿತ್ತು. ಈ ಪರಿಯಾಗಿ ಹಿಂಸೆಗೆ ಒಳಗಾದ ಗುಲಾಮರು ಮಾಲಿಕರ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ಓಡಿಹೋಗಿ ದಟ್ಟವಾದ ಅರಣ್ಯವನ್ನು ಸೇರಿದರು. ನಾಗರಿಕ ಸಮಾಜದಲ್ಲಿ ಹಲವಾರು ಬಗೆಯ ಹಿಂಸೆಯನ್ನು ಅನುಭವಿಸಲಾಗದೆ, ಈ ಸಮಾಜದಿಂದ ಬಹುದೂರ ಹೋಗಿ ವಾಸಿಸಲು ನಿರ್ಧರಿಸಿದರು. ಮಾಲಿಕರಿಂದ ಹೀಗೆ ಅನ್ಯಾಯಕ್ಕೆ ಒಳಗಾದವರು ಒಬ್ಬೊಬ್ಬರಾಗಿ ತಪ್ಪಿಸಿಕೊಂಡು ದಟ್ಟವಾದ ಅರಣ್ಯ ಸೇರಿದರು. ಹತ್ತು ಹಲವಾರು ರೀತಿಯ ಅಮಾನುಷ ಹಿಂಸೆಗೆ ಒಳಗಾದ ಇವರು ನಾಗರಿಕ ಸಮಾಜದವರನ್ನು ಕಂಡರೆ ಹೆದರಿ ಓಡಿ ಹೋಗುತ್ತಿದ್ದರು. ಇಂದಿಗೂ ಸಹ ಕೆಲವು ಸಿದ್ದಿಯರಲ್ಲಿ ಆ ಭಯದ ಕರಿನೆರಳು ಮಾಸಿಲ್ಲದಿರುವುದು ತಿಳಿದುಬರುತ್ತದೆ. ಅದೆಷ್ಟೋ ವರ್ಷಗಳವರೆಗೆ ನಾಗರಿಕ ಸಮಾಜದೊಂದಿಗೆ ಬೆರೆಯದೆ ಕಾಡಿನಲ್ಲಿಯೇ ತಮ್ಮ ಜಗತ್ತನ್ನು ಸೃಷ್ಠಿಸಿಕೊಂಡರು. ಇಂದಿಗೂ ಸಹ ಅದರ ಫಲವೇ ಎನ್ನುವಂತೆ ಅನೇಕರು ದಟ್ಟವಾದ ಕಾಡಿನ ಮಧ್ಯದಲ್ಲಿಯೇ ತಮ್ಮ ಜೀವನವನ್ನು ರೂಪಿಸಿಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ನಾಗರಿಕ ಸಮಾಜದೊಂದಿಗೆ ಬೆರೆತುಕೊಳ್ಳುತ್ತಿದ್ದಾರೆ. ಈ ಸಮುದಾಯವು ಸಮಾಜದ ಮುಖ್ಯ ವಾಹಿನಿಯಿಂದ ಇನ್ನೂ ಬಹುದೂರದಲ್ಲಿದೆ. ಸಮುದಾಯದ ಕೆಲವರು ತಮ್ಮ ಸಮುದಾಯದ ಏಳಿಗೆಗೆ ಪ್ರಯತ್ನ ಪಡುತ್ತಿದ್ದಾರೆ. ಆದರೆ ಈ ಪ್ರಯತ್ನ ಯಾವುದಕ್ಕೂ ಸಾಲದಾಗಿದೆ. ಕಾರಣ ಬೆರಳೆಣಿಕೆಯಷ್ಟು

ಜನ ಮಾತ್ರ ಈ ರೀತಿಯಾದ ಪ್ರಯತ್ನವನ್ನು ಮಾಡುತ್ತಿದ್ದಾರೆ. ಅಲ್ಲದೆ ನಾಗರಿಕ ಸಮಾಜದ ಪರಿಚಯವಿಲ್ಲದಿರುವುದರಿಂದ ಸರಿಯಾದ ಮಾರ್ಗ ಅವರಿಗೆ ತಿಳಿದಿಲ್ಲವೆನ್ನಬೇಕಾಗುತ್ತದೆ.

ಗುಳ್ಳಾಪುರದ ಸಿದ್ದಿ ಸಮುದಾಯದ ಹಿರಿಯ ತಿಳುವಳಿಕೆದಾರ ವ್ಯಕ್ತಿಯು ತನ್ನ ಕಹಿ ನೆನಪಿನ ಬುತ್ತಿಯನ್ನು ಈ ರೀತಿಯಾಗಿ ಬಿಚ್ಚಿಡುತ್ತಾನೆ. ಮಾಲಿಕರಿಂದ ತಪ್ಪಿಸಿಕೊಂಡು ಓಡಿ ಬರುವಾಗ ತೊಟ್ಟ ಬಟ್ಟೆಯಲ್ಲಿ (ಬರಿಗೈಯಲ್ಲಿ) ಬಂದೆವು. ಆಗ ಕಾಡಿನಲ್ಲಿ ಸಿಗುವ ಹಣ್ಣು-ಹಂಪಲು, ಗೆಡ್ಡೆ-ಗೆಣಸುಗಳನ್ನು ತಿಂದು ಮರದ ಬುಡದಲ್ಲಿ, ಗುಹೆಯಲ್ಲಿ, ಬಂಡೆಯ ಮೇಲೆ ಜೀವನ ಕಳೆದೆವು. ಗೆಡ್ಡೆ-ಗೆಣೆಸು, ಹಣ್ಣು-ಹಂಪಲು ದೊರೆಯದಿದ್ದಾಗ/ದೊರೆತಿದ್ದಾಗಲೂ ಬೇಟೆಯಾಡಿ ಹಸಿ ಮಾಂಸವನ್ನು ತಿಂದು ಬದುಕಿದ ದಾರುಣ ಪ್ರಸಂಗವನ್ನು ನೆನಪಿಸಿಕೊಳ್ಳುತ್ತಾರೆ. ತಮ್ಮ ಹಿರಿಯರ ಪ್ರಕಾರ ಆಫ್ರಿಕಾದಿಂದ ಇವರನ್ನು ಬೇಟೆಯಾಡಿ ಹಡಗಿನ ಮಖಾಂತರ ತಂದು ಮಾರುಕಟ್ಟೆಯಲ್ಲಿ ಬಹಿರಂಗವಾಗಿ ಹರಾಜು ಹಾಕುತ್ತಿದ್ದರು ಎನ್ನುವ ಧಾರುಣ ಕತೆಯನ್ನು ವಿವರಿಸುತ್ತಾರೆ. ಈ ರೀತಿ ಹರಾಜು ಹಾಕುವಾಗ ಗುಲಾಮರಾದ ಸಿದ್ದಿಯರ ಪುರುಷ ಮತ್ತು ಮಹಿಳೆಯರನ್ನು ಬೆತ್ತಲೆ ಮಾಡಲಾಗುತ್ತಿತ್ತು. ಗುಲಾಮರನ್ನು ಬೆತ್ತಲೆ ಮಾಡಿ ಬಹಿರಂಗವಾಗಿ ಹರಾಜು ಹಾಕುತ್ತಿದ್ದುದು ಅಮಾನುಷ ಕೃತ್ಯದ ಪ್ರತೀಕವಾಗಿದೆ. ಈ ಗುಲಾಮರು ಹರಾಜಿನಲ್ಲಿ ಇತರೆ ಸರಕುಗಳಿಗಿಂತ ಕಡಿಮೆ ಬೆಲೆಯಲ್ಲಿ ಮಾರಾಟವಾಗುತ್ತಿದ್ದರು. ಅಂದರೆ ಒಂದು ಕುದುರೆಗೆ ದೊರೆತ ಬೆಲೆ ಈ ಗುಲಾಮರಿಗೆ ದೊರೆಯುತ್ತಿದ್ದಿಲ್ಲ. ಒಂದು ಕುದುರೆ ಬಾಳುವ ಕಿಮ್ಮತ್ತಿಗೂ ಇವರು ಬಾಳಲಿಲ್ಲ. ಇಷ್ಟು ಕಡಿಮೆ ಬೆಲೆಗೆ ಹರಾಜಾಗುತ್ತಿದ್ದರು ಎಂದರೆ ಇವರ ಸ್ಥಾನ ಮಾನ ಎಷ್ಟರ ಮಟ್ಟಿಗೆ ಇತ್ತು ಎಂಬುದನ್ನು ಊಹಿಸಬಹುದಾಗಿದೆ. ಹೀಗೆ ತನ್ನ ಅಂತರಾಳದ ಹತ್ತು ಹಲವಾರು ನೆನಪುಗಳನ್ನು ಬಿಚ್ಚಿಡುತ್ತಾ ತಾವು ಅನುಭವಿಸಿದ ಕಷ್ಟ ಯಾರಿಗೂ ಬೇಡ, ನಮ್ಮ ಮತ್ತು ನಮ್ಮ ಮುಂದಿನ ಪೀಳಿಗೆಯವರು ನಾಗರಿಕ ಸಮಾಜದೊಂದಿಗೆ ಬೆರೆತು ಮುಂದುವರೆಯುವುದಕ್ಕೆ ಅವಕಾಶ ಸಿಕ್ಕಿದೆ. ಈಗಲೂ ನಮ್ಮನ್ನು ಅದೇ ಹಳೆಯ ಭಾವನೆಯಿಂದ ನೋಡುವವರೂ ಇದ್ದಾರೆ. ಈ ಸಮುದಾಯದವರಿಗೆ ಶಿಕ್ಷಣವಿಲ್ಲ, ಆಸ್ತಿಯಿಲ್ಲ, ಬಡತನ ಕಿತ್ತು ತಿನ್ನುತ್ತಿದೆ. ಕೂಲಿಯೇ ಸಮುದಾಯದವರ ಮುಖ್ಯ ಉದ್ಯೋಗವಾಗಿದೆ ಎನ್ನುವ ಅಭಿಪ್ರಾಯವನ್ನು ಶಿವಸಣ್ಯಾ ಸಿದ್ದಿಯವರು ತಿಳಿಸುತ್ತಾರೆ.

ಹೀಗೆ ಹತ್ತು ಹಲವಾರು ಕಷ್ಟಗಳನ್ನು ಅನುಭವಿಸಿ ಇಂದು ನಾಗರಿಕ ಸಮಾಜದೊಂದಿಗೆ ಈ ಸಮುದಾಯ ಬೆರೆಯುತ್ತಿದೆ. ಸಮುದಾಯದ ಅಭಿವೃದ್ಧಿಗೆ ಸರಕಾರ, ಸಂಘ ಸಂಸ್ಥೆಗಳಲ್ಲದೆ ಸಾರ್ವಜನಿಕರು ಸಹಕರಿಸಿದಾಗ ಮಾತ್ರ ಈ ಸಮುದಾಯ ಅಭಿವೃದ್ಧಿ ಹೊಂದಿ ಮುಖ್ಯ ವಾಹಿನಿಗೆ ಬರಲು ಅವಕಾಶವಾಗುತ್ತದೆ.

## ೨.೨ ಭೌಗೋಳಿಕ ಪರಿಚಯ

ಸಿದ್ದಿಯರು ಮೂಲತಃ ಕಾಡಿನಲ್ಲಿ ವಾಸವಾಗಿರುವ ಬುಡಕಟ್ಟು ಸಮುದಾಯವಾಗಿದೆ. ಇದು ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲೊಂದಾಗಿದೆ. ಇವರು ಕರ್ನಾಟಕ ರಾಜ್ಯದ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಇನ್ನುಳಿದಂತೆ ಬೆಳಗಾವಿ ಜಿಲ್ಲೆಯ ಖಾನಾಪುರ ಮತ್ತು ಧಾರವಾಡ ಜಿಲ್ಲೆಯ ಕಲಘಟಗಿ ಮತ್ತು ಧಾರವಾಡ ತಾಲೂಕಿನಲ್ಲಿ ಕಂಡುಬರುತ್ತಾರೆ.

ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದ ವಿಶಿಷ್ಟ ಜಿಲ್ಲೆಗಳಲ್ಲೊಂದಾಗಿದೆ. ಹಸಿರು ಹಾಸಿಗೆಯ ಸಿರಿಸೊಬಗಿನಿಂದ ಕಂಗೊಳಿಸುವ ಜಿಲ್ಲೆಯಾಗಿದೆ. “ಈ ಜಿಲ್ಲೆಯ ಪ್ರಾಕೃತಿಕ ಪರಿಸರವನ್ನು ಗಮನಿಸಿದಾಗ ಇಲ್ಲಿ ಮಲೆನಾಡು, ಕರಾವಳಿ ಮತ್ತು ಬೆಳವಲ ಸೀಮೆಗಳ ಭೌಗೋಳಿಕ, ಸಾಂಸ್ಕೃತಿಕ, ಸಾಮಾಜಿಕ ಅಂಶಗಳೆಲ್ಲವೂ ಸೇರ್ಪಡೆಯಾಗಿದ್ದು ಕಂಡುಬರುತ್ತದೆ. ಕರಾವಳಿಯ ತಾಲೂಕುಗಳಾದ ಭಟ್ಕಳ, ಹೊನ್ನಾವರ, ಕುಮಟಾ, ಅಂಕೋಲ ಮತ್ತು ಕಾರವಾರಗಳ ಜೀವನ ಶೈಲಿಯೇ ಒಂದು ರೀತಿಯಾಗಿದ್ದರೆ, ಹಸಿರು ಕಾಡಿನಿಂದ ಆವೃತ್ತವಾದ ಸಿರ್ಸಿ, ಸಿದ್ದಾಪುರ, ಯಲ್ಲಾಪುರ ತಾಲೂಕುಗಳ ಜೀವನ ವಿಧಾನವೇ ಮತ್ತೊಂದು ಬಗೆಯದು. ಬಯಲು ಸೀಮೆಯ ಅಂಚಿನಲ್ಲಿರುವ ಮುಂಡಗೋಡ ಮತ್ತು ಹಳಿಯಾಳ ತಾಲೂಕುಗಳು ಭಾಷೆ, ಕಲೆ, ಆಹಾರ ಮತ್ತಿತರ ದೃಷ್ಟಿಗಳಿಂದ ಇವೆರಡೂ ಪ್ರದೇಶಗಳಿಗಿಂತಲೂ ಭಿನ್ನ.”[೪] ಈ ಜಿಲ್ಲೆಯು ರಮ್ಯ ನೋಟಕ್ಕೆ ಹೆಸರುವಾಸಿಯಾದುದಾಗಿದೆ. ಮನಸ್ಸಿಗೆ ಮುದ ನೀಡುವ ಜಲಧಾರೆಗಳು ಕಣ್ಮನಗಳನ್ನು ಉದ್ದೀಪನಗೊಳಿಸುತ್ತವೆ. ಕಾಳಿ, ಬೇಡ್ತಿ, ಗಂಗಾವಳಿ ಮತ್ತು ಅಘನಾಶಿನಿಯಂತಹ ಪ್ರಮುಖ ನದಿಗಳನ್ನು ಒಳಗೊಂಡಿದೆ. ಹಸಿರು ತೋರಣಗಳಿಂದ ಆವೃತ್ತವಾದ ತೊಟ್ಟಿಲಿನಂತಿದೆ. ಈ ಜಿಲ್ಲೆಯು ಇಡೀ ಭೂ ಮಂಡಲದ ವಿಶ್ವ ಮಾನವನ ಹಲವು ವೈಶಿಷ್ಟ್ಯ ಮತ್ತು ಗುಣಧರ್ಮಗಳನ್ನು ಒಂದೇ ಬೊಗಸೆಯಲ್ಲಿ ಹಿಡಿದಿಟ್ಟುಕೊಂಡಿರುವಂತೆ ಭಾಸವಾಗುತ್ತದೆ.

ನೈಸರ್ಗಿಕ, ಸಾಂಸ್ಕೃತಿಕ, ಜನಪದ ಸಂಪತ್ತಿನಿಂದ ಸಿರಿವಂತ ಜಿಲ್ಲೆಯಾಗಿ ಕಂಗೊಳಿಸುತ್ತಿದೆ. ಹಲವಾರು ಮಹಾನ್ ಕವಿಗಳ ಸ್ಫೂರ್ತಿಯ ಸೆಲೆಯಾಗಿದೆ. “ಈ ಜಿಲ್ಲೆಯ ಬನಸಿರಿಗೆ ಮರುಳಾದ ಆದಿಕವಿ ಪಂಪ ಇಲ್ಲಿಯ ಬನವಾಸಿಯಲ್ಲಿ ಮನುಷ್ಯನಾಗಿ ಹುಟ್ಟಲಾಗದಿದ್ದರೆ ‘ಮಱುದುಂಬಿಯಾಗಿ ಮೇಣ್‌ಕೋಗಿಲೆಯಾಗಿ ಹುಟ್ಟುವುದು ನಂದನದೊಳ್ ವನವಾಸಿ ದೇಶದೊಳ್’ ಎಂದು ಹಾರೈಸಿದ್ದಾನೆ. ಚಲುವುವೆತ್ತ ಕಾರವಾರದ ಕಡಲ ತೀರ ವಿಶ್ವಕವಿ ರವೀಂದ್ರರ ‘ಪ್ರಕೃತಿ ಪ್ರತಿಶೋಧ’ ಕೃತಿಗೆ ಸ್ಫೂರ್ತಿ ನೀಡಿದೆ.”[೫] ಈ ಜಿಲ್ಲೆಯನ್ನು ಜಲಪಾತಗಳ ಜಿಲ್ಲೆ ಎಂದು ಕರೆಯಲಾಗುತ್ತದೆ. ಕಾರಣ ಉಂಚಳ್ಳಿ ಜಲಪಾತ, ಮಾಗೋಡ

ಜಲಪಾತ, ಲಾಲಗುಳಿ ಜಲಪಾತ, ಶಿವಗಂಗಾ ಜಲಪಾತ, ಕೊಪ್ಪ ಜೋಗ, ಸುಸುಬ್ಬಿ ಜಲಪಾತ ಮುಂತಾದವುಗಳು ಪ್ರಮುಖವಾಗಿ ಕಂಡುಬರುತ್ತವೆ. ಕಾರವಾರ ಜಿಲ್ಲೆಯು ಉಪ್ಪಿನ ಸತ್ಯಾಗ್ರಹ, ಕರ ನಿರಾಕರಣೆಯಂತಹ ಚಳುವಳಿಗಳನ್ನು ಹುಟ್ಟುಹಾಕಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದೇಶಪ್ರೇಮವನ್ನು ಮೂಡಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಿದೆ. ಸಮುದ್ರ ತೀರ, ಹಳ್ಳ-ಕೊಳ್ಳ, ಕಣಿವೆಗಳು, ನದಿಗಳು, ಜಲಪಾತಗಳು ಸೌಂದರ್ಯಕ್ಕೆ ಸಾಕ್ಷಿಯಾಗಿವೆ. ಒಂದು ಕಡೆಯಿಂದ ಸಹ್ಯಾದ್ರಿಯ ಬಾಹುಗಳೂ, ಮತ್ತೊಂದು ಕಡೆ ಸಾಗರಗಳು ಪ್ರವಾಸಿಗರನ್ನು ಕೈಬೀಸಿ ಕರೆಯುತ್ತಿವೆ. ಹಸಿರಿನಿಂದ ಕಂಗೊಳಿಸುವ ವನರಾಶಿಗಳು, ಮನಸ್ಸಿಗೆ ಮುದ ನೀಡುವ ಚಿಲುಮೆಗಳು ಸಾಧಕರಿಗೆ ಹೇಳಿ ಮಾಡಿಸಿದ ತಾಣಗಳಾಗಿವೆ.

"ಮೊದಲು ಕೆನರಾ ಜಿಲ್ಲೆಯೆಂದು ಕರೆಯಲಾಗುತ್ತಿದ್ದ ಕರಾವಳಿ ಜಿಲ್ಲೆಯು ೧೮೬೨ ರಲ್ಲಿ ಉತ್ತರ ಕನ್ನಡ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯೆಂದು ವಿಭಾಗವಾಯಿತು."[೬] ೧೮೬೨ ಕ್ಕಿಂತ ಮುಂಚೆ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಒಳಗೊಂಡ ಪ್ರದೇಶವನ್ನು ಕೆನರಾ ಎಂದು ಕರೆಯಲಾಗುತ್ತಿತ್ತು. "ದಕ್ಷಿಣ ಕನ್ನಡ, ಉತ್ತರ ಕನ್ನಡ, ಕುಲಾಬಾ, ಠಾಣಾ, ರತ್ನಗಿರಿ ಜಿಲ್ಲೆಗಳನ್ನೊಳಗೊಂಡ ಕರಾವಳಿಯನ್ನು ಕೊಂಕಣಪಟ್ಟಿ ಎಂದು ಕರೆಯುತ್ತಾರೆ. ಪರಶುರಾಮನು ಸಮುದ್ರನಾಥನಿಂದ ಪಡೆದ ಪ್ರದೇಶ ಇದು. ಆದ್ದರಿಂದ ಇದು ಕೋಳ್+ಕಣ>ಕೊಳ್ಕಣ>ಕೊಂಕಣ. ತಮಿಳು ಸಾಹಿತ್ಯದಲ್ಲಿ 'ಕೊಣ್‌ಕಾನಮ್' ಎಂಬ ಪದ ಬರುತ್ತದೆ. 'ಕೊಣ್' ಎಂಬುದು 'ಕೊಳ್' ಎಂಬ ಧಾತುವಿನಿಂದ ಸಿದ್ಧಿಸಿದಂತಿದೆ. 'ಕೊಳ್ಳೈ' ಎಂಬ ಪದವು ಇದರಿಂದಲೇ ಹುಟ್ಟಿದೆ. 'ಕಾನಮ್' ಎಂದರೆ ಅಡವಿ ಪ್ರದೇಶ. ಕೊಂಕಣವೆಂದರೆ ಯಾರೊಬ್ಬರೂ ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದಾದ ಅರಣ್ಯ ಪ್ರದೇಶ."[೭]

"ಮಾನ್ಯ ಗೋವಿಂದ ಪೈ ಅವರು ಗೋಕರ್ಣವೇ ನಾಗಾನಂದನ ಕೇಂದ್ರ ಸ್ಥಾನವೆಂದು ಹೇಳಿದ್ದಾರೆ. ಇದರ ಮೇಲಿಂದ ನಾಗರ ವಾಸಸ್ಥಳವಾದ ಉತ್ತರ ಕನ್ನಡ ಜಿಲ್ಲೆಯು, ನಾಗರ ಖಂಡದ ವಾಸಸ್ಥಾನವಾಗಿತ್ತೆಂದು ಊಹಿಸಬಹುದು."[೮] ಭೌಗೋಳಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಉನ್ಮಾದ ನೀಡಲು ಈ ಜಿಲ್ಲೆಯಲ್ಲಿ ನಾಗದೇವರ ಜಗತ್ತೂ ಸಹ ಸೃಷ್ಟಿಯಾಗಿದೆ. ಅಲ್ಲದೆ "ಕ್ರಿ.ಶ. ಸುಮಾರು ೭೮ ನೇಯ ಇಸ್ವಿಯಲ್ಲಿ ಭೂತಾಳ ಪಾಂಡ್ಯನು ಬಾರಕನ್ಯಾಪುರ ಗೋಕರ್ಣ ಮಂಡಲಾಧೀಶ್ವರ ಎಂಬ ಬಿರುದು ಧರಿಸಿ ದಕ್ಷಿಣ ಹಾಗೂ ಉತ್ತರ ಕನ್ನಡದ ಕೆಲವು ಪ್ರದೇಶಗಳನ್ನು ಆಳಿದನೆಂದು ತಿಳಿದುಬರುತ್ತದೆ."[೯] ಅಂದರೆ ಈ ಜಿಲ್ಲೆಗೆ ಎರಡು ಸಾವಿರ ವರ್ಷಗಳಿಗಿಂತಲೂ ಹಿಂದಿನ ಇತಿಹಾಸವಿರುವುದು ವ್ಯಕ್ತವಾಗುತ್ತದೆ. "ಉತ್ತರ ಕನ್ನಡ ಜಿಲ್ಲಾ ಕೇಂದ್ರ ಕಾರವಾರಕ್ಕೆ ಈ ಹೆಸರು ಬರಲು ಅದರ ಬಳಿಯ ಹಳ್ಳಿ ಕಾಡವಾಡ ಕಾರಣವಂತೆ!

ಹದಿನೆಂಟನೆಯ ಶತಮಾನದಲ್ಲಿ ಬ್ರಿಟೀಷರು ಇಲ್ಲಿ ಕಾರ್ಖಾನೆಯೊಂದನ್ನು ಸ್ಥಾಪಿಸಿ ಇದನ್ನು ಕಾರವಾರವೆಂದು ಕರೆದರಂತೆ! ಮುಂಚೆ ಅದು ಸದಾಶಿವಗಡ ಎನಿಸಿಕೊಂಡಿತ್ತು. ಹಿಂದೆ ಶಿವಾಜಿಯ ಒಡೆತನದಲ್ಲಿದ್ದ ಈ ಕಡವಾಡದ ಪಶ್ಚಿಮಕ್ಕೆ ಸಮುದ್ರದಲ್ಲಿರುವ ದೇವಗಡ ನಡುಗಡ್ಡೆಯ ಮೇಲೆ ದೀಪಸ್ತಂಭ ನಿರ್ಮಿಸಲಾಗಿದೆ. ಕಾರವಾರದ ಸಮೀಪದ ಕೂರ್ಮಗಡ ದ್ವೀಪದಲ್ಲಿ ಕೋಟೆಯನ್ನು ಶಿವಾಜಿ ಕಟ್ಟಿಸಿದ್ದರಿಂದ ಇದಕ್ಕೆ ಸಿದ್ದಗಡ ಎಂದು ನಾಮಕರಣವಾಯಿತಂತೆ!

ಇದರಂತೆಯೇ ಕ್ರಿ.ಶ. ೮೦೦ ರ ಸುಮಾರಿನಲ್ಲಿ ಈ ಸ್ಥಳವನ್ನಾಳಿದ ಹೊನ್ನಮ್ಮನಿಂದ ಹೊನ್ನಾವರವೂ, ಬಿಳಗಿಯ ಸಿದ್ದಮ್ಮ ರಾಣಿಯ ಹೆಸರಿನಿಂದ ಸಿದ್ದಾಪುರವೂ ಆಯಿತಂತೆ, ಒಂದನೆಯ ಭಟ್ಟಾಕಳಂಕನಿಂದ ಭಟ್ಕಳವೆಂಬ ಹೆಸರು ಈ ಪಟ್ಟಣಕ್ಕೆ ಬಂತಂತೆ!

ಯಲ್ಲಾಪುರದ ಸುತ್ತಲಿನ ಪ್ರದೇಶದಲ್ಲಿ ರಾಮಾಯಣ, ಮಹಾಭಾರತದ ಕಾಲದಲ್ಲಿಯ ಕೆಲವು ಐತಿಹ್ಯಗಳಿವೆ. ಶೂರ್ಪಣಖಿ ಸೂಪದಲ್ಲಿ ವಾಸಮಾಡಿದ್ದಳು ಮತ್ತು ಯಲ್ಲಾಪುರದಿಂದ ಮುಂಡಗೋಡದವರೆಗೆ ರಾಜ್ಯಭಾರ ಮಾಡುತ್ತಿದ್ದಳಂತೆ."[೧೦] ಹೀಗೆ ಇನ್ನೂ ಹತ್ತು ಹಲವಾರು ಐತಿಹಾಸಿಕತೆಯನ್ನು ಈ ಜಿಲ್ಲೆಯು ಹೊಂದಿರುವುದು ತಿಳಿಯುತ್ತದೆ.

ಈ ಜಿಲ್ಲೆಯಲ್ಲಿ ಹಲವಾರು ಧರ್ಮಗಳಿಂದ ನೂರಾರು ಜಾತಿ ಉಪಜಾತಿಗಳು ನೆಲೆಸಿರುವುದು ಕಂಡುಬರುತ್ತದೆ. ಪ್ರಮುಖವಾಗಿ ಕಂಡುಬರುವ ಜಾತಿ ಉಪಜಾತಿಗಳೆಂದರೆ "ಹವ್ಯಕರು, ಗೌಡರು, ಸಾರಸ್ವತರು, ಲಿಂಗಾಯತರು, ಹಾಲಕ್ಕಿ ಒಕ್ಕಲು, ಹರಿಕಂತರು, ಅಂಬಿಗರು, ನಾಡವರು, ನಾಮಧಾರಿಗಳು, ನವಾಯಿತರು, ಕೊಮಾರ ಪಂಥರು, ಅಗೇರರು, ಸಿದ್ದಿಗಳು, ಷಿಯಾ ಹಾಗೂ ಸುನ್ನಿ ಮುಸಲ್ಮಾನರು, ಕ್ರಿಶ್ಚಿಯನ್ನರು ಮೊದಲಾದ ನೂರೆಂಟು ಉಪಜಾತಿ ಬುಡಕಟ್ಟು ಪಂಗಡಗಳು ಬೆರೆತಿವೆ."[೧೧]

ಉತ್ತರ ಕನ್ನಡ ಜಿಲ್ಲೆಯನ್ನು ಕಾರವಾರ ಜಿಲ್ಲೆ ಎಂದೂ ಸಹ ಕರೆಯಲಾಗುತ್ತದೆ. ಪ್ರಸ್ತುತ ಈ ಜಿಲ್ಲೆಯು ಹನ್ನೊಂದು ತಾಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ ಕಾರವಾರ, ಅಂಕೋಲ, ಕುಮಟಾ, ಭಟ್ಕಳ, ಹೊನ್ನಾವರ, ಸಿದ್ದಾಪುರ, ಶಿರಸಿ, ಯಲ್ಲಾಪುರ, ಹಳಿಯಾಳ, ಮುಂಡಗೋಡ ಮತ್ತು ಸೂಪಾ (ಜೋಯಿಡಾ). ಸಿದ್ದಿ ಸಮುದಾಯದವರು ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಕಂಡುಬರದೆ, ಪ್ರಮುಖ ಏಳು ತಾಲೂಕುಗಳಲ್ಲಿ ಕಂಡುಬರುತ್ತಾರೆ. ಅವುಗಳೆಂದರೆ ಹಳಿಯಾಳ, ಯಲ್ಲಾಪುರ, ಅಂಕೋಲ, ಮುಂಡಗೋಡ, ಶಿರಸಿ, ಕಾರವಾರ ಮತ್ತು ಜೋಯಿಡಾ. ಸಿದ್ದಿ ಬುಡಕಟ್ಟು ಸಮುದಾಯದವರು ವಾಸವಾಗಿರುವ ಪ್ರದೇಶಗಳನ್ನು ಈ ಕೆಳಗಿನಂತೆ ನೋಡಬಹುದು.

ತಾಲೂಕುವಾರು ಸಿದ್ದಿಯರು ವಾಸಿಸುವ ಪ್ರದೇಶಗಳು

**ಹಳಿಯಾಳ**

ಹಳಿಯಾಳ ತಾಲೂಕಿನ ಅಡಕೆಹೊಸೂರು, ಅಗಸಲಕಟ್ಟಾ, ಅಜಗರ್, ಅಲೂರು, ಬಾಲಸೆಟ್ಟಿಕೊಪ್ಪ, ಭಾಗವತಿ, ಬಿದ್ರೊಳ್ಳಿ, ಬೊಮ್ಮನಹಳ್ಳಿ, ದೊಡ್ಡಕೊಪ್ಪ, ಗದಿಗೇರ, ಗರಡೊಳ್ಳಿ, ಗೊಲೆಹಳ್ಳಿ, ಗುತ್ತಿಬೈಲ್, ಹಳಿಯಾಳ, ಹೊಸೂರು, ಜನಗಾ, ಜತಗಾ, ಜತಗಾ ಹೊಸೂರು, ಕಾಮತಿಕೊಪ್ಪ, ಕೆಗದಾಳ್, ಕಾಮದೊಳ್ಳಿ, ಕುಂಬಾರಕೊಪ್ಪ, ಮೊದಲಿಗೇರ, ಎನ್.ಎಸ್.ಕೊಪ್ಪ, ಪಂಡರುವಾಳ, ರಾಂಪುರ, ರಾಯಪಟ್ಟಣ, ಸಾಂಬ್ರಾಣಿ, ಸಿದ್ದಾಪುರ, ತಟ್ಟಿಗೇರ, ತಾವರಕಟ್ಟ, ತೆಗ್ಗಳ್ಳಿ, ತತ್ವಣಗಿ, ವಾಡ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

**ಯಲ್ಲಾಪುರ**

ಯಲ್ಲಾಪುರ ತಾಲೂಕಿನ ಅಂಬಗಾವ್, ಆನಗೋಡ್, ಆಂದ್ರಳ್ಳಿ, ಅರಬೈಲ್, ಬೈಲಂದೂರು, ಬಳಗಾರ, ಬಳಗಿಮನೆ, ಬಳಕಿ, ಬೆದ್ದೇನಹೆಕ್ಲು, ಬೆಳಕೋಡ, ಬೆಳಕೊಪ್ಪ, ಬೆಳ್ಳುಂಬಿ, ಬೆಂಡಿಗೇರಿ, ಭಾನಹಳ್ಳಿ, ಭರಣಿ, ಭರತನಹಳ್ಳಿ, ಬೀಗಾರ, ಬಿಕ್ಕಬಿಳ್ಳಿ, ಬಿಳಕಿ, ಬಿಂಬನಹಳ್ಳಿ, ಬೋರಿನೊಂದ, ಚಂದಗುಳಿ, ಚಿಕ್ಕುಮನೆ, ದೇವರಕಲ್ಲಹಳ್ಳಿ, ದೇವಿಸರ, ಗೊಟಕೋಳ, ಗುಡಂದೂರು, ಗುಳ್ಳಾಪುರ, ಗುಮಸೆಕುಂಬ್ರಿ, ಹಡ್ಲಿಗೇರಿ, ಹಲಸಿನಕೊಪ್ಪ, ಹಳ್ಳಿಗದ್ದೆ, ಹಂಸನಗದ್ದೆ, ಹರಿಗದ್ದೆ, ಹಸೆಕಳ್ಳ, ಹೆಡ್ಡಳ್ಳಿ, ಹೆಗ್ಗುಂಬ್ಳಿ, ಹಿತ್ಲಳ್ಳಿ, ಹೊಳೆಮಡು, ಹೊನ್ನಾಳಿ, ಹೊಸಳ್ಳಿ, ಹುಳಸೆಮನೆ, ಹುಣಸೆಟ್ಟಿಕೊಪ್ಪ, ಹುಟುಕಮನೆ, ಹುತ್ವಂಡಾ, ಇಡಗುಂದಿ, ಜಡಗಿನಕೊಪ್ಪ, ಜಡ್ಡಿಗದ್ದೆ, ಜಗರಮನೆ, ಜಕ್ಕೋಳಿ, ಜರಗಳ್ಳ, ಜೋಗದಮನೆ, ಕಾಗರಕೊಡ್ಲು, ಕಾಳಮ್ಮನಗರ, ಕಳಾಸೆ, ಕಣಬಾಳ, ಕಣ್ಣಿಗೇರಿ, ಕನಕನಕುಂಬ್ರಿ, ಕರೆವ್ವನಗುಡಿ, ಕಾಸಿಕೆ ಜಡ್ಡಿ, ಕೆರೆ ಹೊಸಳ್ಳಿ, ಕೆಸಿನಪ್ಪ ಜಡಿ, ಕಿರುವತ್ತಿ, ಕೂಡಿಗೆ, ಕೋಟೆಮನೆ, ಕುಂದೂರು, ಕುಂಟಗೇಣಿ, ಲಾಲ್‌ಗುಳಿ, ಲಿಂಗದಬೈಲ್, ಮದನಸರ, ಮದವಳಕೇರಿ, ಮದ್ನೂರು, ಮಂಚಿಕೇರಿ, ಮಾಗೋಡ, ಮಮ್ಮನಹಳ್ಳಿ, ಮಾವಿನಕಟ್ಟೆ, ಮೋಡಣಗಿ, ನಾಡೊಳ್ಳಿ, ನಂದಿಬಾವಿ, ಸವಣೆ, ವಣಕೆಮನೆ, ಯಲ್ಲಾಪುರ, ಪುರಲೆಮನೆ, ಸಂಡೇಬೈಲ್, ಸರಗದ್ದೆ, ಶಿರನಾಳು, ಶಿರಲೆ, ಸುಳಗಾರ, ಸುಣ್ಣಗಾರ, ಸುರಬೈಲು, ತಾಳಿಕುಂಬ್ರಿ, ತೋಟದಕಲ್ಲಹಳ್ಳಿ, ತೊಟ್ಲಲಗುಂಡಿ, ತೂಕದ ಬೈಲು, ಉಚ್ಚಿಗೇರಿ, ಉಳ್ಳರ ಮನೆ, ವಿದ್ಯಾನಗರ, ತೋಟಕಟ್ಟ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

**ಅಂಕೋಲ**

ಅಂಕೋಲ ತಾಲೂಕಿನ ಅಚಾವೆ, ಅಂಗಡಿಬೈಲ್, ದೊಡ್ಡಕೆಟ್ಟ, ಡೊಂಗ್ರಿ, ಹಳವಳ್ಳಿ, ಹಿಗ್ಗಾರ, ಕೈಗಡಿ, ಕಲ್ಲೇಶ್ವರ, ಕಮ್ಮಾಣಿ, ಕನಕನಹಳ್ಳಿ, ಕೋಡಿಗದ್ದೆ, ರೋನಾಳ್, ಸೋರ್‌ಕರ್, ಸುಕಸಾಲ, ವಂಡರ್‌ಮನೆ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

**ಮುಂಡಗೋಡ**

ಮುಂಡಗೋಡ ತಾಲೂಕಿನ ಬಸರಿಜಡ್ಡೆ, ಕೆಂದಿಲ್‌ಗೇರಿ, ಉಗ್ಗಿನಕೇರಿ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

**ಶಿರಸಿ**

ಶಿರಸಿ ತಾಲೂಕಿನ ದೇವಹನಳ್ಳಿ, ಹಗರಿಮನೆ, ಕಕ್ಕಳ್ಳಿ, ಕೆಳಗಿನಕೇರಿ, ಮತ್ತಿಘಟ್ಟ, ಮೆಣಸಿ, ಸಿರಗಣಿ, ವಾನಳ್ಳಿ ಪ್ರದೇಶಗಳಲ್ಲಿ ನೆಲೆಸಿದ್ದಾರೆ.

ಜೋಯಿಡಾ ತಾಲೂಕಿನ ಇರನೊಳ್ಳಿ ಮತ್ತು ಕಾರವಾರದ ಕಾಶಿರವಾಡದಲ್ಲಿ ವಾಸಿಸುತ್ತಿದ್ದಾರೆ.

**೨.೩ ಜನಸಂಖ್ಯೆ**

ಕರ್ನಾಟಕದ ವಿಶಿಷ್ಟ ಬುಡಕಟ್ಟುಗಳಲ್ಲೊಂದಾದ ಸಿದ್ದಿಯರು ಉತ್ತರ ಕನ್ನಡ ಜಿಲ್ಲೆಯಲ್ಲಿ ಮಾತ್ರವಲ್ಲದೆ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಯಲ್ಲಿಯೂ ಸಹ ಅಲ್ಪ ಪ್ರಮಾಣದಲ್ಲಿ ವಾಸವಾಗಿರುವುದು ಕಂಡುಬರುತ್ತದೆ. ಆದರೆ ನನ್ನ ಅಧ್ಯಯನಕ್ಕೆ ಉತ್ತರ ಕನ್ನಡ ಜಿಲ್ಲೆಯನ್ನು ಮಾತ್ರ ಒಳಪಡಿಸಿಕೊಂಡಿರುವುದರಿಂದ ಪ್ರಸ್ತುತ ಜಿಲ್ಲೆಯ ಅಧ್ಯಯನಕ್ಕೆ ಮಹತ್ವ ನೀಡಲಾಗಿರುತ್ತದೆ. ಸಿದ್ದಿ ಸಮುದಾಯದವರನ್ನು ಇತ್ತೀಚೆಗೆ ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದೆ. ಕರ್ನಾಟಕ ರಾಜ್ಯ ಪತ್ರ, ಗುರುವಾರ ಮೇ ೧೫, ೨೦೦೩ ರಂದು ಈ ಸಮುದಾಯವನ್ನು ೫೦ ನೇ ಪರಿಶಿಷ್ಟ ಪಂಗಡವಾಗಿ ಘೋಷಿಸಲಾಗಿದೆ.

"ಉತ್ತರ ಕನ್ನಡ ಜಿಲ್ಲೆಯ ಒಟ್ಟು ವಿಸ್ತೀರ್ಣ ೧೦,೨೯೧ ಚ.ಕಿ.ಮೀ. ೧೯೯೧ ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆ ೧೨,೨೦,೨೬೦ ಇವರಲ್ಲಿ ೬,೨೦,೬೯೭ ಗಂಡಸರು ಮತ್ತು ೫,೯೯,೫೬೩ ಹೆಂಗಸರು. ದಾಖಲೆಗಳಲ್ಲಿ ಕಾಣುವಂತೆ ಜಿಲ್ಲೆಯ ಒಟ್ಟು ಕ್ಷೇತ್ರದ ಪ್ರತಿಶತ ೮೦ ರಷ್ಟು ಭಾಗ ಅರಣ್ಯಗಳಿಂದ ತುಂಬಿದೆ. ಒಟ್ಟು ಪರಿಶಿಷ್ಟ ವರ್ಗದ ಜನಸಂಖ್ಯೆ ೧೦,೧೬೮ ಎಂದರೆ ಜಿಲ್ಲೆಯ ಒಟ್ಟು ಜನಸಂಖ್ಯೆಯ ೮.೩೩%. ಜಿಲ್ಲೆಯಲ್ಲಿ ಒಟ್ಟು ೬,೮೯,೨೭೮ ಸುಶಿಕ್ಷಿತರಿದ್ದಾರೆ (೫೬.೪೯%), ಜಿಲ್ಲೆಯ ಗ್ರಾಮೀಣ ಜನಸಂಖ್ಯೆ ೯,೨೫,೭೪೪ (೭೫.೮೬%), ಗ್ರಾಮೀಣ ಸಾಕ್ಷರತಾ ಮಟ್ಟವು ಪ್ರತಿಶತ ೩೯.೭೪."[೧೨]

"೨೦೦೧ ರಲ್ಲಿನ ಉತ್ತರ ಕನ್ನಡ ಜಿಲ್ಲೆಯ ಸಿದ್ದಿಯರ ಜನಸಂಖ್ಯಾವಾರು ವಿವರ

| ಕ್ರ.ಸಂ. | ತಾಲೂಕು | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೦೧ | ಅಂಕೋಲ | ೫೮೭ | ೨೯೫ | ೨೯೨ |
| ೦೨ | ಹಳಿಯಾಳ | ೨೨೮೦ | ೧೧೪೩ | ೧೧೩೭ |
| ೦೩ | ಮುಂಡಗೋಡ | ೪೯೯ | ೨೬೩ | ೨೩೬ |

| ೧೪ | ಶಿರಸಿ | ೬೮ | ೩೩ | ೩೫ |
|---|---|---|---|---|
| ೧೫ | ಸೂಪಾ | ೩೩ | ೧೬ | ೧೭ |
| ೧೬ | ಯಲ್ಲಾಪುರ | ೧೮೯೪ | ೯೮೭ | ೯೦೭ |
| ಒಟ್ಟು | | ೫೩೬೧ | ೨೭೩೭ | ೨೬೨೪ |

೨೦೦೧ ರಲ್ಲಿ ಈ ಸಮುದಾಯ ಪರಿಶಿಷ್ಟ ಪಂಗಡವಾಗಿ ಗುರುತಿಸಿಕೊಂಡಿರದಿರುವುದರಿಂದ ಜನಗಣತಿಯಲ್ಲಿ ಎಸ್.ಟಿ.ಯಾಗಿ ದಾಖಲಾಗಿರದೆ ಪ್ರವರ್ಗ–೧ ರಲ್ಲಿ ಸೇರಿತ್ತು.

ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಾರವಾರ ಜಿಲ್ಲೆಯಲ್ಲಿ ವಾಸವಾಗಿರುವ ಸಿದ್ದಿಯರ ಜನಸಂಖ್ಯೆಯನ್ನು ತಾಲೂಕುವಾರು ಈ ರೀತಿ ನೋಡಬಹುದು.

| ಕ್ರ.ಸಂ. | ತಾಲೂಕು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಂಕೋಲ | ೩೯೮ | ೩೭೮ | ೭೭೬ |
| ೨ | ಹಳಿಯಾಳ | ೧೯೪೨ | ೧೭೯೧ | ೩೭೩೩ |
| ೩ | ಜೋಯಿಡಾ | ೨೪ | ೨೪ | ೪೮ |
| ೪ | ಕಾರವಾರ | ೧೯ | ೧೩ | ೩೨ |
| ೫ | ಮುಂಡಗೋಡ | ೨೬೩ | ೨೩೧ | ೪೯೪ |
| ೬ | ಶಿರಸಿ | ೧೨೯ | ೧೩೩ | ೨೬೨ |
| ೭ | ಯಲ್ಲಾಪುರ | ೧೭೬೮ | ೧೭೦೫ | ೩೪೭೩ |
| | ಒಟ್ಟು | ೪೫೪೩ | ೪೨೭೫ | ೮೮೧೮ |

ಪ್ರಸ್ತುತ ಅಧ್ಯಯನದ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೮,೮೧೮ ಜನಸಂಖ್ಯೆ ಇದೆ. ಇದರಲ್ಲಿ ೪,೫೪೩ ಪುರುಷರು ಮತ್ತು ೪,೨೭೫ ಮಹಿಳೆಯರು ಕಂಡುಬರುತ್ತಾರೆ. ಸಿದ್ದಿಯರ ಜನಸಂಖ್ಯೆಯನ್ನು ತಾಲೂಕುವಾರು ಈ ಕೆಳಗಿನಂತೆ ವಿವರಿಸಲಾಗಿದೆ. ಅಂಕೋಲ ತಾಲೂಕಿನಲ್ಲಿ ೩೯೮ ಪುರುಷರು ಮತ್ತು ೩೭೮ ಮಹಿಳೆಯರನ್ನು ಒಳಗೊಂಡಂತೆ ಒಟ್ಟು ೭೭೬ ಜನರು ಕಂಡುಬರುತ್ತಾರೆ. ಹಳಿಯಾಳ ತಾಲೂಕಿನಲ್ಲಿ ೧,೯೪೨ ಪುರುಷರು ಮತ್ತು ೧,೭೯೧ ಮಹಿಳೆಯರು ಸೇರಿದಂತೆ ಒಟ್ಟು ೩,೭೩೩ ಜನಸಂಖ್ಯೆ ಇದೆ. ಜೋಯಿಡಾ ತಾಲೂಕಿನಲ್ಲಿ ೨೪ ಜನ ಗಂಡಸರು ಮತ್ತು ಅಷ್ಟೇ ಪ್ರಮಾಣದ ಹೆಂಗಸರನ್ನು ಒಳಗೊಂಡಂತೆ ೪೮ ಜನರಿದ್ದಾರೆ. ಕಾರವಾರ ತಾಲೂಕಿನ ಒಟ್ಟು ೩೨ ಜನಸಂಖ್ಯೆಯಲ್ಲಿ ೧೯ ಜನ ಪುರುಷರು, ೧೩ ಜನ ಮಹಿಳೆಯರಿದ್ದಾರೆ. ಮುಂಡಗೋಡ ತಾಲೂಕಿನ ಒಟ್ಟು ೪೯೪ ಜನಸಂಖ್ಯೆಯಲ್ಲಿ

೨೬೩ ಪುರುಷರು ಮತ್ತು ೨೩೧ ಮಹಿಳೆಯರಿದ್ದಾರೆ. ಶಿರಸಿ ತಾಲೂಕಿನಲ್ಲಿ ೧೨೯ ಪುರುಷರು ಮತ್ತು ೧೩೩ ಮಹಿಳೆಯರು ಸೇರಿದಂತೆ ಒಟ್ಟು ೨೬೨ ಜನಸಂಖ್ಯೆ ಕಂಡುಬರುತ್ತದೆ. ಯಲ್ಲಾಪುರ ತಾಲೂಕಿನ ಒಟ್ಟು ೩೪೭೩ ಜನಸಂಖ್ಯೆಯಲ್ಲಿ ೧,೭೬೮ ಪುರುಷರು ಮತ್ತು ೧,೭೦೫ ಮಹಿಳೆಯರು ಇರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಸಿದ್ದಿಯರ ತಾಲೂಕುವಾರು ಗ್ರಾಮಗಳ ಒಟ್ಟಾರೆ ಜನಸಂಖ್ಯೆಯನ್ನು ಅಂಕಿ ಅಂಶಗಳ ಪಟ್ಟಿ – ೧ ರಲ್ಲಿ ಗಮನಿಸಿ.

**೨.೪ ಪದ ನಿಷ್ಪತ್ತಿ**

ಸಿದ್ದಿ ಸಮುದಾಯ ವಿಶ್ವದ ಜನಾಂಗೀಯ ಸಮೂಹಗಳಲ್ಲೊಂದಾದ ನೀಗ್ರೋ ಜನಾಂಗಕ್ಕೆ ಸೇರಿದುದಾಗಿದೆ. ಹಬಸಿ, ಸಿಡಾಮೊ, ಖಾಪ್ರಿ, ಜೋಗ್ಲಿ, ಸಿದಾಮು ಎಂಬ ಇತರ ಪರ್ಯಾಯ ಪದಗಳಿವೆ. ಆದರೆ ಸಿದ್ದಿ ಎನ್ನುವ ಪದವೇ ಅತಿ ಹೆಚ್ಚು ಚಾಲ್ತಿಯಲ್ಲಿರುವುದಾಗಿದೆ. ಇತರ ಪರ್ಯಾಯ ಪದಗಳನ್ನು ಅಷ್ಟಾಗಿ ಯಾರೂ ಬಳಸುತ್ತಿಲ್ಲ. ಕೆಲವು ಜನರು ಇವರನ್ನು ಆಫ್ರಿಕಾ ಎಂದು, ಮತ್ತೆ ಕೆಲವರು ನೀಗ್ರೋ ಎಂದು ಸಂಭೋಧಿಸುವುದುಂಟು.

**ಸಿದ್ದಿ:** ಇವರು ಯಾವುದೇ ರೀತಿಯ ಕಷ್ಟದ ಕೆಲಸಗಳನ್ನು ಒಪ್ಪಿಸಿದರೂ ಪ್ರಾಮಾಣಿಕವಾಗಿ ಮಾಡುತ್ತಾರೆ. ಎಲ್ಲಾ ರೀತಿಯಿಂದಲೂ ಸಿದ್ದರಾಗಿರುವುದರಿಂದ ರಾಣಿಯು ನಮಗೆ 'ಸಿದ್ದಿ' ಎನ್ನುವ ಬಿರುದನ್ನು ನೀಡಿದರು ಎನ್ನುವ ಅಭಿಪ್ರಾಯವನ್ನು ಸಮುದಾಯದ ಹಿರಿಯ ವ್ಯಕ್ತಿಯಾದ ಡಿಯೋಗ್ ಬಿ ಸಿದ್ದಿಯವರು ತಿಳಿಸುತ್ತಾರೆ.

ಸಿದ್ದಿ ಎನ್ನುವ ಪದವನ್ನು ವಿಶ್ಲೇಷಿಸಿ ನೋಡಿದಾಗ "ಆಫ್ರೋಏಷಿಯಾ ಭಾಷೆಗಳಲ್ಲಿ ಒಂದಾದ 'ಕುಶಿಟಿಕ್' ಭಾಷಾ ಕುಟುಂಬಕ್ಕೆ ಸೇರಿದ 'ಸಿಡಾಮೊ' ಭಾಷೆ ಹಾಗೂ ಆ ಭಾಷೆಯನ್ನು ಆಡುವ ಬುಡಕಟ್ಟುಗಳು ಸಿದ್ದಿಯರ ಮೂಲ ಜನಾಂಗವಾಗಿರಬಹುದೆಂದು ನನಗೂ ಅನಿಸುತ್ತದೆ."[೧೪] ಎನ್ನುವ ಅಭಿಪ್ರಾಯವು ತಿಳಿದುಬರುತ್ತದೆ.

**ಹಬಸಿ:** 'ಹಬಸೀನಿಯಾ' ಎನ್ನುವ ಪ್ರದೇಶದಿಂದ ಬಂದಿರುವುದರಿಂದ 'ಹಬಸಿ' ಎಂದು ಕರೆಯಲಾಗುತ್ತದೆ.

"ಸಿದ್ದಿಯರನ್ನು ಪಾಶ್ಚಾತ್ಯರು 'ಸಿದಿ' ಎಂದು ಕರೆಯುತ್ತಾರೆ. 'ಸಿದಿ' ಎಂಬ ಪದವು ನೀಗ್ರೋ ಪದಕ್ಕೆ ಪರ್ಯಾಯ ಪದವೆಂದು ವಿಲಿಯಮ್ಸ್‌ನ ಈ ಕೆಳಗಿನ ಹೇಳಿಕೆಯಿಂದ ವಿಧಿತವಾಗುತ್ತದೆ: ಹಡಗಿನ ನೌಕರರಲ್ಲಿ ಏಳು ಮಂದಿ ಇಂಗ್ಲೀಷ್ ಪ್ರಧಾನ ಅಧಿಕಾರಿಗಳು, ನಲವತ್ಮೂರು ಲಾಸ್ಕರ್ ನಾವಿಕರು, ಆರು ಮಂದಿ ಇಂಗ್ಲೀಷ್ ಇಂಜಿನಿಯರರು, ಮೂವತ್ತೈದು ಮಂದಿ ಮುಸಲ್ಮಾನರು ಮತ್ತು ಹದಿನೈದು ಕಲ್ಲಿದ್ದಲು ಕೆಲಸಗಾರರಾದ ಸಿದಿಯರು ಅಥವಾ

ನೀಗ್ರೋಗಳು. ಈ ಮೇಲಿನ ಹೇಳಿಕೆಯಲ್ಲಿ ಸಿದಿ ಮತ್ತು ನೀಗ್ರೋ ಪರ್ಯಾಯ ಪದಗಳಾಗುತ್ತವೆ. 'ಸಿದಿ' ಎಂದರೆ ಕೂಲಿಕಾರರು ಎಂದು ಸರ್ ಹರ್ಬರ್ಟ್ ರಿಸ್ಲೆ ಹೇಳುತ್ತಾರೆ. 'ಸಯೀದ್' ಎಂದರೆ 'ಸರ್' ಎನ್ನುವ ಪದದಂತೆ ಗೌರವ ಸೂಚಕ ಪದವಾಗಿದೆ. ಈ ಸಯೀದ್ ಎಂಬ ಶಬ್ಧದಿಂದಲೇ 'ಸಿದ್ದಿ' ಶಬ್ದ ನಿಷ್ಪನ್ನವಾಗಿರಬಹುದೇ? ಎಂಬ ಅನುಮಾನ ಬರುತ್ತದೆ. ಆದರೆ ಇಂದು ಸಿದ್ದಿಯರು 'ಸರ್' ಇಲ್ಲವೇ 'ಸಯೀದ್' ಗೌರವದಿಂದ ವಂಚಿತರಾಗಿ ಗುಲಾಮರಂತೆ ಬಾಳುತ್ತಿದ್ದಾರೆ. ಆದರೂ ಒಂದಾನೊಂದು ಕಾಲಕ್ಕೆ ಇವರು ಗೌರವಯುತ ಬಾಳು ಬದುಕಿರಬೇಕು. 'ಸಯೀದ್' ಎಂಬ ಪದವೇ ಕ್ರಮೇಣ 'ಸಿದ್ದಿ' ಎಂದು ನಮ್ಮಲ್ಲಿ ಮಾರ್ಪಾಡಾಗಿ ಬಳಕೆಯಲ್ಲಿ ಬಂದಿರಬೇಕು."[೧೫]

ಸಿದ್ದಿಯರು ಮೂಲತಃ ಆಫ್ರಿಕಾ ದೇಶದವರು. ಆಫ್ರಿಕಾ ಖಂಡದಲ್ಲಿ 'ಶಿದಿಯಾ' ಎನ್ನುವ ಸಮುದಾಯವಿದೆ. ಶಿದಿಯಾ ಸಮುದಾಯದವರು ಬನ್ಯಾಯ್ ಪಂಗಡಕ್ಕೆ ಸೇರಿದವರಾಗಿರಬಹುದು.

"Next of Kin to the manganja are the Banayai or Banabia on the south bank of the Zanbesi and on the Umsangani. To them belong the Bambiri, often adduced as a distinct tribe. Their dwellings extend from the mouth of the Kafue to near Tete, and they are connected with their Knsfolk on Lake Nyasa as a southerly and westerly outlier. The so called Shidimas near Tete are also Banyai. To them too most probably belong the Banayoa at the lower part of Lake Mubabi, a tribe of pile dwellers who pay tribute to the Bamangwato. The colour of the Bnayai is frequently a light brown, and they are valued by the Portuguese as the handsomest and strongest peoples of Africa. Their women wear the pelele, but only of a small size and made of tin; and file a gap in upper front teeth. They are capable agriculturists, iron workers and goldminers. Nor are they unwarlike they used to carry large bows, had poinsoned arrows and massive spears. Their huts are often built on piles. They have completely adopted the Mashona language, which is the usual medium of intercourse amoung the neighbouring tribes. While their fellows of the same stock to them north and east have quite last all political individuality and independence, they live in a sort of republican feudalism. The chief is chosen from the line of his predecessor's sister. The period, often lasting long, between the death of one chief and erection of another is a

time of lawlessness, in which foreigners especially are regarded as outlaws. The new chief takes all the property of the late one, including wives s and children. Chief's children and relations cannot be sold into slavery. The children of the farmer chief often leave their ancestral village to become lards in a new home. The "King of Monomotapa" renowned for his gold and famous in story, was a praramount chief over those petty chiefs, as his dexcendants are over the petty chiefs of Katolosa, in the Bambiri stock. Their name Motape, combined with the word mono (=Moene, Mwana and so on), that I "Chief" produced this undeservedly famous name, the greatness of which can only be understood when it is regarded in the perspective of South Africa. In this sense Monomotapa covered the whole of Inner Africa. The Portuguese long paid tribute to the chief of Katolosa for trade passing through his territory, without being thereby in any way freed from the toll to the petty chiefs with even immediately above Tete was lived with the utmost impudence."[೧೬]

**೨.೫ ಸೃಷ್ಠಿ ಪುರಾಣಗಳು**

ವಿಶ್ವದ ಪ್ರತಿಯೊಂದು ಜೀವಿಗಳಿಗೆ ಸಂಬಂಧಿಸಿದಂತೆ ಸೃಷ್ಠಿ, ಸ್ಥಿತಿ ಮತ್ತು ಲಯ ಎನ್ನುವುದು ಕಂಡುಬರುತ್ತದೆ. ಸೃಷ್ಠಿ ಎಂದರೆ ಹುಟ್ಟು, ಉಗಮ ಎನ್ನುವುದಾಗಿದೆ, ಸ್ಥಿತಿ ಎಂದರೆ ಅದರ ವ್ಯವಸ್ಥೆ ಎನ್ನುವುದಾಗಿದೆ, ಲಯ ಎಂದರೆ ಅಂತ್ಯ, ಕೊನೆ, ನಾಶ ಎನ್ನುವುದಾಗಿದೆ. ಪ್ರತಿಯೊಂದು ಸಮುದಾಯವೂ ತನ್ನ ಸಮುದಾಯದ ಸೃಷ್ಠಿ ಪುರಾಣಗಳನ್ನು ಹೊಂದಿರುತ್ತವೆ. ಆ ಪುರಾಣದ ಮುಖಾಂತರ ಸಮುದಾಯದ ಸಾಂಸ್ಕೃತಿಕ ನಾಯಕರ ಹುಟ್ಟು, ಬೆಳವಣಿಗೆ, ನಂಬಿಕೆ, ದೈವತ್ವ ಮುಂತಾದ ಅಂಶಗಳು ವ್ಯಕ್ತವಾಗುತ್ತವೆ. "ಈ ಸೃಷ್ಠಿ ಪುರಾಣಗಳಲ್ಲಿ ಮನುಷ್ಯನಿಗೆ ಮೂಲಭೂತವಾಗಿ ಅವಶ್ಯವಿರುವ ಎಲ್ಲಾ ವಸ್ತುಗಳ ಬಗೆಗೆ ಮತ್ತು ಅವನಿಗೆ ಚೈತನ್ಯ ನೀಡುವ ಅನೇಕಾನೇಕ ಪುರಾಣಗಳಿದ್ದು, ಇವು ಎಲ್ಲಾ ಬಗೆಯ ಪುರಾಣಗಳಿಗಿಂತ ಹಳೆಯವು ಅಂದರೆ ಆದಿಪುರಾಣಗಳು ಎಂದು ಕರೆಸಿಕೊಂಡಿವೆ. ಕಾಲ, ಕಲ್ಪನೆಗಳನ್ನು ಪ್ರಮುಖವಾಗಿ ಒತ್ತಿ ಹೇಳುವ ಸ್ವರ್ಗ, ನರಕಗಳೆಂಬ ಲೋಕಗಳನ್ನು ಸೃಷ್ಠಿಸಿಕೊಂಡು ಯಾವ ಯಾವ ಕಾಲಕ್ಕೆ ಮನುಷ್ಯ ಹೇಗಿರಬೇಕು, ಹಾಗಿರದಿದ್ದರೆ ಏನಾಗುತ್ತದೆ? ಎಂಬ ಪರಕಾಯದ ಪುರಾಣಗಳಿವೆ ಮತ್ತು ಆಯಾ ಸಮುದಾಯಗಳ ನಾಯಕರು ಅರ್ಥಾತ್ ಸಾಂಸ್ಕೃತಿಕ ನಾಯಕ ನಾಯಕಿಯರನ್ನು ಕುರಿತು ಪುರಾಣಗಳಿರುತ್ತವೆ."[೧೭] ಈ ಪುರಾಣಗಳು ಆದಿಯಿಂದಲೂ ಬಹುತೇಕ ಇಂದಿನವರೆಗೆ ಮಾನವ ಮತ್ತು ಸಮಾಜವನ್ನು ನಿಯಂತ್ರಿಸಿ ಸನ್ಮಾರ್ಗದಲ್ಲಿ

ನಡೆಯಲು ಪ್ರಮುಖ ಪಾತ್ರವನ್ನು ವಹಿಸಿವೆ. ಮಾನವ ಜೀವನದ ಸಾರ್ಥಕತೆ, ಪಾಪ-ಪುಣ್ಯಗಳ ಅರಿವನ್ನು ಮೂಡಿಸುವ ಬಹುದೊಡ್ಡ ಸಾಧನಗಳಾಗಿ ಕಾರ್ಯನಿರ್ವಹಿಸಿವೆ.

ಸೃಷ್ಠಿ ಪುರಾಣಗಳು ಇಂದು-ನಿನ್ನೆಯವುಗಳಾಗಿರದೆ ನೂರಾರು-ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿರುತ್ತವೆ. ತಲೆ ತಲಾಂತರವಾಗಿ ಪುರಾಣಗಳ ಮಹತ್ವ ಸಾಗುತ್ತಾ ಬರುತ್ತದೆ. ಈ ಪುರಾಣಗಳನ್ನು ಕೇಳಿದಾಗ ಇವು ಸುಳ್ಳು ಮತ್ತು ಕಟ್ಟು ಕಥೆಗಳೆಂದು ಅನಿಸುತ್ತದೆ. ಆದರೆ ಒಂದು ಸಮುದಾಯದ ಹಿನ್ನೆಲೆಯನ್ನು ಕೂಲಂಕುಶವಾಗಿ ಅಧ್ಯಯನ ಮಾಡಿದಾಗ ಅದರ ವಾಸ್ತವ ಏನೆಂಬುದು ತಿಳಿದುಬರುತ್ತದೆ. ಈ ಪುರಾಣಗಳು ಮುಖ್ಯವಾಗಿ ಸಮಾಜದಲ್ಲಿ ನೀತಿ ನಿಯಮಗಳು, ಸಂಪ್ರದಾಯಗಳು, ಕಟ್ಟಳೆಗಳನ್ನು ನೆಲೆಗೊಳಿಸುವ ಉದ್ದೇಶವನ್ನು ಹೊಂದಿರುತ್ತವೆ.

ಭಾರತೀಯ ಸಮಾಜ ನಿಂತ ನೀರಲ್ಲ, ಹರಿಯುವ ನೀರಿನಂತಿದೆ. ನಿತ್ಯ ಪರಿವರ್ತನಾಶೀಲವಾದುದಾಗಿದೆ. ಭಾರತಕ್ಕೆ ಯುರೋಪಿಯನ್ನರ ಆಗಮನವಾಗುವವರೆಗೂ ನಮ್ಮ ಸಮಾಜ ಅಷ್ಟೊಂದು ಬದಲಾವಣೆಯನ್ನು ಹೊಂದಿರಲಿಲ್ಲ. ಅದರಲ್ಲಿಯೂ ಮುಖ್ಯವಾಗಿ ಬುಡಕಟ್ಟು ಸಮುದಾಯಗಳು ಸ್ವಚ್ಛಂದವಾಗಿ ಜೀವನವನ್ನು ನಿರ್ವಹಿಸುತ್ತಿದ್ದವು. ಯುರೋಪಿಯನ್ನರ ಆಗಮನದಿಂದ ಕೆಲವೊಂದು ಬುಡಕಟ್ಟು ಸಮುದಾಯಗಳ ದಿಕ್ಕೇ ಬದಲಾಗಿ ಹೋಯಿತು. "ಯುರೋಪಿಯನ್ನರು ಭಾರತಕ್ಕೆ ಆಗಮಿಸಿ ಇಲ್ಲಿಯ ಕಾಡುಗಳಲ್ಲಿ ಹೇರಳವಾಗಿ ಸಿಗುವ ಮಸಾಲೆ ಪದಾರ್ಥಗಳ ಬಗೆಗಿನ ವ್ಯಾಮೋಹ ಅತಿಯಾಗಿ ಯಾವಾಗ ವಸಾಹತುಗಳನ್ನು ಸ್ಥಾಪಿಸಲು ಪ್ರಾರಂಭಿಸಿದರೋ, ಕಾಡುಗಳು ತೋಟಗಳಾಗಿ ಪರಿವರ್ತನೆಗೊಳ್ಳತೊಡಗಿದವೋ, ಗಿರಿಜನರನ್ನು ತೋಟಗಳಲ್ಲಿ ಕೂಲಿಯಾಳುಗಳಾಗಿ ಬಳಸಿಕೊಳ್ಳತೊಡಗಿದರೋ, ಅಂದಿನಿಂದ ಈ ಗಿರಿಜನರ ಮೇಲೆ ನಾಗರಿಕತೆಯು ತನ್ನ ಪ್ರಭಾವ ಬೀರತೊಡಗಿತು. ಇಡೀ ಕಾಡೇ ನಮ್ಮದು ಎಂದು ಸ್ವಚ್ಛಂದವಾಗಿ ಬದುಕುತ್ತಿದ್ದ ಗಿರಿಜನರ ಸಂಸ್ಕೃತಿ, ಅವರ ಆಚಾರ ವಿಚಾರ, ಸಂಪ್ರದಾಯಗಳಲ್ಲಿ ಸೂಕ್ಷ್ಮ ಬದಲಾವಣೆಗಳಾಗತೊಡಗಿದವು. ಈ ಬದಲಾವಣೆಗಳು ಹಂತ ಹಂತವಾಗಿ ಬೆಳೆಯತೊಡಗಿದ್ದರಿಂದ ಅವರ ಬದುಕಿನ ಜೊತೆಗೆ ಆಚಾರ-ವಿಚಾರ, ಸಂಸ್ಕೃತಿಯಲ್ಲಿ ಸ್ಥಿತ್ಯಂತರಗಳಾಗತೊಡಗಿದವು. ಮತ್ತು ಅವರ ಬದುಕು ಅಸ್ಥಿರಗೊಳ್ಳತೊಡಗಿತು."[೧೮] ಆಧುನಿಕತೆಯ ಸುಳಿಗೆ ಸಿಲುಕಿರುವ ಬುಡಕಟ್ಟು ಸಮುದಾಯಗಳಲ್ಲಿ ವೈವಿಧ್ಯತೆ ಗೋಚರವಾಗುತ್ತಿದೆ. ಅದರಲ್ಲೂ ಇಂದಿನ ಬುಡಕಟ್ಟು ಯುವ ಪೀಳಿಗೆಯ ಎಷ್ಟೋ ಯುವಕರಿಗೆ ಸಮುದಾಯದ ಸಂಪೂರ್ಣ ಸಂಸ್ಕೃತಿ ತಿಳಿದಿಲ್ಲ. ಬುಡಕಟ್ಟು ಸಮುದಾಯಗಳ

ಹಲವಾರು ಯುವಕ ಯುವತಿಯರಿಗೆ ತಮ್ಮ ಸಮುದಾಯದ ಸೃಷ್ಟಿ ಪುರಾಣ ನೆನಪಿಲ್ಲದಿರುವ ಅಥವಾ ತಿಳಿಯದಿರುವ ವಿಷಯ ಸೋಜಿಗವೆನಿಸುತ್ತದೆ.

ಸಿದ್ದಿ ಸಮುದಾಯದ ಕೆಲವರು ತಮ್ಮ ಸಮುದಾಯದ ಸೃಷ್ಟಿ ಪುರಾಣಗಳನ್ನು ಈ ಕೆಳಗಿನಂತೆ ವಿವರಿಸುತ್ತಾರೆ.

೧. ದೇವರು ಮೊದಲು ಭೂಮಿಯನ್ನು ಸೃಷ್ಟಿಸಿದ. ನಂತರ ಭೂಮಿಯ ಮೇಲೆ ಯಾವ ರೀತಿಯಾದ ಜೀವಿಗಳೂ ಕಾಣದಿದ್ದಾಗ ಮನುಷ್ಯನನ್ನು ಸೃಷ್ಟಿಸುವ ಮನಸ್ಸು ಮಾಡುತ್ತಾನೆ. ಮಣ್ಣನ್ನು ಹದವಾಗಿ ಕಲಸಿ ಮಾನವ ಬೊಂಬೆಗಳನ್ನು ನಿರ್ಮಿಸುತ್ತಾನೆ. ಬೊಂಬೆಗಳು ಇನ್ನೂ ಹಸಿಯಾಗಿರುವುದರಿಂದ ಮಾರನೆಯ ದಿನ ಅವುಗಳಿಗೆ ಜೀವ ಕೊಡುವುದು ಸೂಕ್ತ ಎಂದು ಹೊರಡುತ್ತಾನೆ. ರಾತ್ರಿ ಸಮಯದಲ್ಲಿ ರಾಕ್ಷಸ ಬಂದು ಅವುಗಳನ್ನು ತಿಂದು ಹೋಗುತ್ತದೆ. ಹೀಗೆ ಹಲವು ಬಾರಿ ಗತಿಸುತ್ತದೆ. ಆಗ ದೇವರು ಯೋಚನೆ ಮಾಡಿ ಒಂದು ದಷ್ಟ ಪುಷ್ಟವಾದ ಬೊಂಬೆಯನ್ನು ತಯಾರಿಸಿ ಅದಕ್ಕೆ ಜೀವ ನೀಡುತ್ತಾನೆ. ನಂತರ ಇನ್ನೂ ಹಲವಾರು ಮಾನವ ಬೊಂಬೆಗಳನ್ನು ತಯಾರಿಸಿ ಅವುಗಳನ್ನು ಕಾಯಲು ಜೀವ ಪಡೆದ ಆ ದಷ್ಟಪುಷ್ಟ ಮಾನವನಿಗೆ ಆಜ್ಞೆ ಮಾಡುತ್ತಾನೆ. ಆ ರಾಕ್ಷಸನಿಂದ ಈ ಬೊಂಬೆಗಳನ್ನು ರಕ್ಷಿಸು. ಈ ಬೊಂಬೆಗಳನ್ನು ರಕ್ಷಿಸಲು ನಿನಗೆ ಏನು ಬೇಕು ಕೇಳು ಎಂದಾಗ, ಆ ವ್ಯಕ್ತಿಯು ದೇವರಲ್ಲಿ ಒಂದು ನಾಯಿ, ಡಮಾಮಿ ಮತ್ತು ಕತ್ತಿ(ಖಡ್ಗ)ಯನ್ನು ಕೇಳುತ್ತಾನೆ. ದೇವರು ಅವನು ಕೇಳಿದ ವಸ್ತುಗಳನ್ನು ನೀಡಿ ಹೊರಡುತ್ತಾನೆ. ಆ ವ್ಯಕ್ತಿ ಬೊಂಬೆಗಳನ್ನು ಕಾಯುತ್ತಿದ್ದಾಗ ಎಂದಿನಂತೆ ರಾಕ್ಷಸ ಬರುವ ಸೂಚನೆ ಕಂಡಾಗ ನಾಯಿ ಬೊಗಳಲು ಪ್ರಾರಂಭಿಸುತ್ತದೆ. ಆಗ ವ್ಯಕ್ತಿಯು ರಾಕ್ಷಸನ ಆಗಮನವಾಗುತ್ತಿದೆ ಎಂದು ಜಾಗೃತನಾಗುತ್ತಾನೆ. ನಂತರ ರಾಕ್ಷಸ ದೂರದಲ್ಲಿ ಬರುವುದನ್ನು ಗಮನಿಸಿ ಡಮಾಮಿಯನ್ನು ಬಾರಿಸಲು ಶುರು ಮಾಡುತ್ತಾನೆ. ಇಲ್ಲಿ ಯಾರೋ ಇದ್ದಾರೆಂದು ರಾಕ್ಷಸ ಹೆದರಿ ಓಡಿಹೋಗುತ್ತದೆ ಎನ್ನುವ ಕಾರಣದಿಂದ ಅದನ್ನು ಬಾರಿಸುತ್ತಾನೆ. ಡಮಾಮಿ ಶಬ್ಧಕ್ಕೆ ರಾಕ್ಷಸ ಭಯಪಟ್ಟರೂ ಸ್ವಲ್ಪ ಧೈರ್ಯಮಾಡಿ ಮುನ್ನುಗ್ಗುತ್ತದೆ. ಆಗ ಆ ವ್ಯಕ್ತಿ ರಾಕ್ಷಸನೊಂದಿಗೆ ಹೋರಾಡಿ, ಕತ್ತಿಯಿಂದ ಹೊಡೆದು ಸಾಯಿಸುತ್ತಾನೆ. ಆಗ ಮಾನವ ಬೊಂಬೆಗಳು ಹಾಳಾಗದೆ ಉಳಿಯುತ್ತವೆ. ರಾಕ್ಷಸನನ್ನು ಕೊಂದು ಮನುಕುಲದ ಬೆಳವಣಿಗೆಗೆ ಕಾರಣನಾದವನೇ ಸಿದ್ದಿ ಮನುಷ್ಯ. ಸಿದ್ದಿಯರೇ ಮನುಕುಲದ ಉದ್ಧಾರಕರು ಎನ್ನುವ ಅಭಿಪ್ರಾಯವನ್ನು ಹಳಿಯಾಳದ ಸಿದ್ದಿ ಸಮುದಾಯದ ಹಿರಿಯ ತಿಳುವಳಿಕೆದಾರರಾದ ಡಿಯೋಗ್ ಬಿ ಸಿದ್ದಿಯವರು ತಿಳಿಸುತ್ತಾರೆ.

ಮನುಕುಲ ನಿರ್ಮಾಣವಾಗಲು ಸಿದ್ದಿ ಸಮುದಾಯ ನಿರ್ಣಾಯಕ ಪಾತ್ರ ವಹಿಸಿದೆ. ಮನುಕುಲ ರಕ್ಷಣೆಯಲ್ಲಿ ಪ್ರಮುಖ ಪಾತ್ರ ವಹಿಸುವುದರ ಮುಖಾಂತರ ಭೂಮಿಯ ಮೇಲೆ

ಮಾನವ ಜನಾಂಗ ಜನ್ಮ ತಳೆಯಲು ಕಾರಣವಾಗಿದೆ. ಅಲ್ಲದೆ ಭೂಮಿಯ ಮೇಲೆ ಸಿದ್ದಿ ವ್ಯಕ್ತಿ ಜನ್ಮ ತಾಳಿದ ನಂತರ ಉಳಿದ ಜನಾಂಗದ ವ್ಯಕ್ತಿಗಳು ಜನ್ಮ ತಳೆದರು. ಆದ್ದರಿಂದ ಇವರನ್ನು ಮನುಕುಲದ ಪೂರ್ವಿಕರು ಎನ್ನುವ ಅಭಿಪ್ರಾಯವನ್ನು ಮತ್ತೊಮ್ಮೆ ಡಿಯೋಗ್ ಬಿ ಸಿದ್ದಿ ರವರು ತಿಳಿಸುತ್ತಾರೆ.

೨. ದೇವರು ಮೊದಲು ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ. ನಂತರ ಭೂಮಿಯನ್ನು ಸೃಷ್ಟಿಸಿದ. ಭೂಮಿಯ ಮೇಲೆ ಉತ್ತಮವಾದ ಮರ-ಗಿಡ, ಹಳ್ಳ-ಕೊಳ್ಳ, ಬೆಟ್ಟ-ಗುಡ್ಡ ಮುಂತಾದ ಸುಂದರ ಪರಿಸರವನ್ನು ಸೃಷ್ಟಿಸಿದ. ಇಷ್ಟೆಲ್ಲಾ ಸೃಷ್ಟಿಸಿದರೂ ಏನೋ ಕಡಿಮೆಯಾಗಿದೆ ಎನ್ನುವಂತೆ ದೇವರಿಗೆ ತೋಚಿತು. ಆಗ ಆ ದೇವರು ಭೂಮಿಯ ಮೇಲೆ ಮನುಷ್ಯನನ್ನು ಸೃಷ್ಟಿಸಿದರೆ ಚೆನ್ನಾಗಿರುತ್ತದೆ ಎಂದು ಭಾವಿಸಿ, ಒಂದು ಗಂಡು ಮತ್ತು ಒಂದು ಹೆಣ್ಣನ್ನು ಸೃಷ್ಟಿಸಿದ. ನಂತರ ಆ ಜೀವಿಗಳಿಗೆ ಜೀವ ನೀಡಿ ಮರದಲ್ಲಿರುವ ಹಣ್ಣನ್ನು ತೋರಿಸಿ ಆ ಹಣ್ಣನ್ನು ತಿನ್ನಬಾರದು. ತಿಂದರೆ ಸಾವು ಬರುತ್ತದೆ ಎಂದು ಹೇಳಿ ಮಾಯವಾಗುತ್ತಾನೆ. ಆಗ ಗಂಡು-ಹೆಣ್ಣು ತಮಗೆ ಇಷ್ಟ ಬಂದಂತೆ ಭೂಮಿಯ ಮೇಲೆ ಸ್ವಚ್ಛಂದವಾಗಿ ಓಡಾಡಿಕೊಂಡು ಇರುತ್ತಾರೆ. ಇವರಿಗೆ ಯಾವುದೇ ಬಗೆಯ ವ್ಯಾಮೋಹವಿಲ್ಲದೆ ಅಂದರೆ ಲೈಂಗಿಕ ಕ್ರಿಯೆಯಲ್ಲಿ ತೊಡಗದೆ ದಿನ ಕಳೆಯುತ್ತಿರುತ್ತಾರೆ. ದೇವರು ತೋರಿಸಿದ ಆ ಹಣ್ಣಿನ ಗಿಡದ ಹತ್ತಿರ ಹೋದ ಗಂಡು-ಹೆಣ್ಣುಗಳಿಬ್ಬರೂ ಆ ಮರದ ಹಣ್ಣನ್ನು ಕಿತ್ತು ತಿನ್ನಲು ಪ್ರಾರಂಭಿಸುತ್ತಾರೆ. ಆಗ ಆಕಾಶ ಮಾರ್ಗದಿಂದ ಒಂದು ವಾಣಿ ಕೇಳಿಸುತ್ತದೆ. ಅದೇನೆಂದರೆ ಇನ್ನು ಮುಂದೆ ನಿಮಗೆ ಆಸೆ-ಆಕಾಂಕ್ಷೆಗಳು ಹುಟ್ಟಿಕೊಳ್ಳುತ್ತವೆ. ಮತ್ತು ನಿಮಗೆ ಸಾವು ಬರುತ್ತದೆಂದು ತಿಳಿಸಿ ಮಾಯವಾಗುತ್ತದೆ. ಆಗ ಹಣ್ಣನ್ನು ತಿನ್ನುತ್ತಿದ್ದ ಗಂಡು ಹೆಣ್ಣುಗಳಿಬ್ಬರು ನಾಚಿಕೆಯಾಗಿ ತಮ್ಮ ಬೆತ್ತಲೆ ಮೈಯನ್ನು ಮುಚ್ಚಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಇಬ್ಬರಲ್ಲಿ ಲೈಂಗಿಕ ಆಕಾಂಕ್ಷೆಗಳು ಹುಟ್ಟಿಕೊಳ್ಳುವುದರ ಮುಖಾಂತರ ಸಮಾಗಮ ಹೊಂದುತ್ತಾರೆ. ಇವರಿಬ್ಬರ ಸಮಾಗಮದಿಂದ ಸಂತಾನೋತ್ಪತ್ತಿಯಾಗಿ ಮನುಕುಲದ ಬೆಳವಣಿಗೆ ಪ್ರಾರಂಭವಾಗುತ್ತದೆ. ಈ ಮನುಕುಲದ ಬೆಳವಣಿಗೆಗೆ ಕಾರಣರಾದ ಮತ್ತು ದೇವರಿಂದ ಮೊದಲಿಗೆ ಸೃಷ್ಟಿಸಲ್ಪಟ್ಟ ಗಂಡು-ಹೆಣ್ಣುಗಳೇ ಸಿದ್ದಿಯರು. ಸಿದ್ದಿ ಸಮುದಾಯದವರಿಂದಲೇ ಮನುಕುಲ ಬೆಳೆದುಕೊಂಡು ಬಂದಿತು ಎನ್ನುವ ಅಭಿಪ್ರಾಯವನ್ನು ಹಳಿಯಾಳ ತಾಲೂಕಿನ ಸಾಂಬ್ರಾಣಿ ಗ್ರಾಮದ ಹಿರಿಯ ಕ್ರೈಸ್ತ ಸಿದ್ದಿ ವ್ಯಕ್ತಿಯೊಬ್ಬ ತಿಳಿಸುತ್ತಾನೆ.

೩. ಸಿದ್ದಿನಾಸನಿಂದ ಸೃಷ್ಟಿಯಾದವರೇ ಸಿದ್ದಿಗಳು. ಸಿದ್ದಿನಾಸನ ಆರಾಧಕರೇ ಸಿದ್ದಿಗಳು ಎನ್ನುವ ಅಭಿಪ್ರಾಯ ಸಮುದಾಯದ ಬಹುತೇಕರಿಂದ ವ್ಯಕ್ತವಾಗುತ್ತದೆ. ಭೂಮಿಯ ಮೇಲೆ

ಮೊಟ್ಟ ಮೊದಲಿಗೆ ಜನ್ಮ ತಳೆದವರೆಂದರೆ ಸಿದ್ದಿಗಳು. ಅಲ್ಲದೆ ತಾವು ಮನುಕುಲದ ಪೂರ್ವಿಕರು ಎನ್ನುವುದನ್ನು ಸಮುದಾಯದ ಬಹುತೇಕ ಹಿರಿಯರು ಅಭಿಪ್ರಾಯಪಡುತ್ತಾರೆ.

ತಮ್ಮ ಮೂಲ ಪ್ರದೇಶದಿಂದ ಗುಲಾಮರಾಗಿ ಬಂದು ಚದುರಿ ಹೋಗಿದ್ದರಿಂದ ಸಮುದಾಯದ ಬಹುತೇಕರು ಸೃಷ್ಟಿ ಪುರಾಣದ ಬಗೆಗೆ ಜ್ಞಾನ ಹೊಂದಿಲ್ಲ. ಮೇಲೆ ತಿಳಿಸಿದ ಕಥೆಗಳನ್ನು ಪ್ರಮುಖವಾಗಿ ಸಮುದಾಯದ ಬಹುತೇಕರು ತಿಳಿಸುತ್ತಾರೆ.

## ಅಡಿಟಿಪ್ಪಣಿಗಳು

೧. ಹಿ.ಚಿ.ಬೋರಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೭ ಮತ್ತು ೮.

೨. ಸಂ: ನಿರಂಜನ, ಆಫ್ರಿಕಾದ ಹಾಡು, ಪುಟ ೮ ಮತ್ತು ೯.

೩. ಎನ್.ಆರ್.ನಾಯಕ, ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೩.

೪. ಪ್ರ.ಸಂ: ಪ್ರೊ. ಎಚ್.ಜೆ.ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂ.೧, ಪುಟ ೭೫.

೫. ಡಾ. ಎನ್.ಆರ್.ನಾಯಕ್, ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಪುಟ ೧೭ ಮತ್ತು ೧೮.

೬. ಪ್ರಜಾವಾಣಿ ಶುಕ್ರವಾರ ೨೧.೩.೨೦೦೮, ಪುಟ ೪.

೭. ಡಾ. ಎನ್.ಆರ್.ನಾಯಕ್, ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಪುಟ ೧೮.

೮. ಅದೇ, ಪುಟ ೧೯.

೯. ಅದೇ, ಪುಟ ೧೯.

೧೦. ಬೇದ್ರೇ ಮಂಜುನಾಥ, ದಿಕ್ಸೂಚಿ-ಕರ್ನಾಟಕ ಜಿಲ್ಲಾ ದರ್ಶನ, ೨೦೦೭, ಪುಟ ೧೦೧.

೧೧. ಪ್ರ.ಸಂ: ಪ್ರೊ.ಎಚ್.ಜೆ.ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂ.೧, ಪುಟ ೭೫.

೧೨. ಅದೇ, ಪುಟ ೭೫.

೧೩. ಸಂ: ಡಾ. ಕೆ.ಎಂ.ಮೇತ್ರಿ, ಡಾ.ಚಲುವರಾಜು, ಬುಡಕಟ್ಟು ಅಧ್ಯಯನ, ಸಂ. ೩, ಸಂಚಿಕೆ ೨, ಜುಲೈ-ಡಿಸೆಂಬರ್ ೨೦೦೬, ಪುಟ ೧೫೭.

೧೪. ಪ್ರ.ಸಂ: ಪ್ರೊ.ಎಚ್.ಜೆ.ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂ.೧, ಪುಟ ೭೭.

೧೫. ಎನ್.ಆರ್.ನಾಯಕ, ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೧ ಮತ್ತು ೨.

೧೬. ಹಿ.ಚಿ.ಬೋರಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೩೭ ಮತ್ತು ೩೮.

೧೭. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪುಟ ೧.

೧೮. ಅದೇ, ಪುಟ ೩.

## ಅಧ್ಯಾಯ–೩

# ಸಮುದಾಯದ ಸಾಮಾಜಿಕತೆ

೩.೧ ಜನನ

೩.೨ ನಾಮಕರಣ

೩.೩ ಜವುಳ

೩.೪ ಋತುಮತಿ

೩.೫ ವಿವಾಹ

೩.೬ ಸೀಮಂತ

೩.೭ ಶವಸಂಸ್ಕಾರ

೩.೭.೧ ತಿಥಿ ಕಾರ್ಯ

೩.೮ ಭಾಷೆ

೩.೯ ಕೌಟುಂಬಿಕ ವ್ಯವಸ್ಥೆ

೩.೧೦ ಉತ್ತರಾಧಿಕಾರತ್ವ

೩.೧೧ ಬಳಿಗಳು ಮತ್ತು ಕಾರ್ಯಗಳು

೩.೧೨ ರಕ್ತಸಂಬಂಧಗಳು

೩.೧೩ ಶಾರೀರಿಕ ಲಕ್ಷಣಗಳು

೩.೧೪ ಉಡುಗೆ ತೊಡುಗೆಗಳು

೩.೧೪.೧ ಪ್ರಾಚೀನ

೩.೧೪.೨ ಆಧುನಿಕ

೩.೧೫ ಮನೆಗಳ ವಿನ್ಯಾಸ

೩.೧೫.೧ ಪಾರಂಪರಿಕ ಮನೆಯ ವಿನ್ಯಾಸ

೩.೧೫.೨ ಹೆಂಚಿನ ಮನೆಗಳ ವಿನ್ಯಾಸ

೩.೧೫.೩ ಆಶ್ರಯ ಮನೆಯ ವಿನ್ಯಾಸ

ಅರಿಸ್ಟಾಟಲ್‌ರವರು ತಿಳಿಸುವಂತೆ ಮಾನವ ಒಬ್ಬ ಸಮೂಹ ಜೀವಿ, ಸಂಘ ಜೀವಿಯಾಗಿದ್ದಾನೆ. ಒಂಟಿಯಾಗಿ ಬಾಳಲಾರ ಎನ್ನುವುದು ಅಕ್ಷರ ಸಹ ಸತ್ಯ. ಮಾನವ ಸಮಾಜ ಜೀವಿಯಾಗಿ ಹಲವಾರು ಕ್ಷೇತ್ರಗಳಲ್ಲಿ ಪ್ರಾವಿಣ್ಯತೆಯನ್ನು ಹೊಂದಿದ್ದಾನೆ. ಪರಿಸರಕ್ಕೆ ಸವಾಲೆಸೆಯುವ ಮಟ್ಟಿಗೆ ಬೆಳೆದು ನಿಂತಿದ್ದಾನೆ. ಆದಾಗ್ಯೂ ಸಮೂಹಗಳೊಂದಿಗೆ ಬೆರೆಯುವ ಮೂಲಕ ನಿಜ ಮಾನವನಾಗಿದ್ದಾನೆ. ಮಾನವ ಒಟ್ಟಾರೆ ಸಾಮಾಜಿಕ ಜೀವನವೆನ್ನುವುದು ಸಮೂಹದ ಕೊಡುಗೆಯಾಗಿದೆ. ನಾನಾ ಬಗೆಯ ವೈರುಧ್ಯವನ್ನು ನಿರ್ಮಿಸುತ್ತಾ ಮುನ್ನಡೆದಿದ್ದಾನೆ. ಸಮಾಜದಲ್ಲಿ ಹಲವಾರು ಸಮುದಾಯಗಳು ಕಂಡುಬರುತ್ತಿವೆ. ಎಲ್ಲ ಸಮುದಾಯಗಳ ಸಾಮಾಜಿಕ ಸ್ಥಾನಮಾನ ಒಂದೇ ರೀತಿಯಾಗಿಲ್ಲ. ಒಂದು ಸಮುದಾಯದಿಂದ ಮತ್ತೊಂದು ಸಮುದಾಯಕ್ಕೆ ಭಿನ್ನತೆ ಇದೆ. ಭಾರತೀಯ ಸಮಾಜವು ನಾಲ್ಕು ರೀತಿಯ ವರ್ಣ ವ್ಯವಸ್ಥೆಯಿಂದ, ಇಂದು ಸಾವಿರಾರು ಜಾತಿ–ಉಪಜಾತಿಗಳನ್ನು ಒಳಗೊಂಡಿದೆ. ಸಾಮಾಜಿಕ ಏಣಿ–ಶ್ರೇಣಿಯಿಂದ ನಿರ್ಮಾಣಗೊಂಡ ಜಾತಿ ವ್ಯವಸ್ಥೆಯನ್ನು ಹೊಂದಿದೆ. ಅಂದರೆ ಮೇಲು–ಕೀಳು, ಶ್ರೇಷ್ಠ–ಕನಿಷ್ಠ, ಪ್ರಬಲ–ದುರ್ಬಲ ಎನ್ನುವ ಸಂಕೀರ್ಣತೆಯನ್ನು ಹೊಂದಿದೆ. ಸಾಮಾಜಿಕ ಸ್ತರವಿನ್ಯಾಸ ವ್ಯವಸ್ಥೆಯಲ್ಲಿ ಒಂದು ಸಮುದಾಯ ಅತ್ಯುನ್ನತ ಸ್ಥಾನದಲ್ಲಿದ್ದರೆ ಮತ್ತೊಂದು ಸಮುದಾಯ ಅತ್ಯಂತ ಕೀಳು ಸ್ಥಾನದಲ್ಲಿದೆ. ಅಂದರೆ ಭಾರತೀಯ ಸಮಾಜವು ವಿಭಿನ್ನ ರೀತಿಯ ಸಮುದಾಯಗಳನ್ನು ಒಳಗೊಂಡಿದೆ.

ಪ್ರತಿಯೊಂದು ಸಮುದಾಯವು ತನ್ನದೇ ಆದ ವಿಶಿಷ್ಟತೆಯನ್ನು ಒಳಗೊಂಡಿರುತ್ತದೆ. ಆ ವೈಶಿಷ್ಟ್ಯತೆಯಿಂದಲೇ ಗುರುತಿಸಿಕೊಂಡಿರುತ್ತದೆ. ಸಿದ್ದಿ ಸಮುದಾಯ ಹಲವಾರು ವಿಶಿಷ್ಟ ಆಚರಣೆಗಳನ್ನು ಒಳಗೊಂಡಿದೆ. ಸಿದ್ದಿಯರನ್ನು ಇಲ್ಲಿ ಸಮುದಾಯ ಎಂದು

ಸಂಭೋದಿಸುತ್ತೇವೆ. ಆದರೆ ಈ ಸಮುದಾಯದಲ್ಲಿ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಎನ್ನುವ ಮೂರು ಧರ್ಮಕ್ಕೆ ಸೇರಿದವರಿದ್ದಾರೆ. ಧರ್ಮಗಳು ಬೇರೆ ಬೇರೆಯಾದರೂ ಇವರಲ್ಲಿ ಭಿನ್ನತೆಯಿಲ್ಲ. ಒಂದೇ ಕುಟುಂಬದಲ್ಲಿ ಮೂರು ಧರ್ಮದವರನ್ನು ಕಾಣಬಹುದಾಗಿದೆ. ಇವರಿಗೆ ಧಾರ್ಮಿಕ ತೊಡಕು ಇಲ್ಲ. ಹುಟ್ಟಿನಿಂದ ಹಿಡಿದು ಸಾಯುವವರೆಗೆ ಹಲವಾರು ಸಂಸ್ಕಾರಗಳು ಆಚರಿಸಲ್ಪಡುತ್ತವೆ. ತಮ್ಮದೇ ಆದ ಕುಲಪಂಚಾಯತಿಯ ಮುಖಾಂತರ ನ್ಯಾಯ ನಿರ್ಣಯ ಮಾಡಿಕೊಳ್ಳುತ್ತಾರೆ. ಕುಲ ಮತ್ತು ಬಂಧುತ್ವಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡುತ್ತಾರೆ. ವಿವಾಹ, ಹೆರಿಗೆ, ಬಾಣಂತಿತನ, ಋತುಮತಿ, ಹಿರಿಯರ ಪೂಜೆ, ನಿಸರ್ಗ ಸಂಬಂಧಿ ಆಚರಣೆಗಳು ಹಾಗೂ ಇನ್ನಿತರ ಹಲವಾರು ರೀತಿಯ ಆಚರಣೆಯಲ್ಲಿ ವಿಶಿಷ್ಟತೆಯನ್ನು ಹೊಂದಿದ್ದಾರೆ. ಆದರೆ ನಾನು ಮೊದಲೇ ತಿಳಿಸಿದ ಹಾಗೆ ಮೂರು ಧರ್ಮದ ಸಿದ್ದಿಗಳು ಆಯಾ ಧರ್ಮದ ಪ್ರಭಾವಕ್ಕೊಳಗಾಗಿರುವುದು ಪ್ರಮುಖವಾಗಿ ಕಂಡುಬರುತ್ತದೆ. ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳು ಅನುಸರಿಸುವ ಹೆಚ್ಚಿನ ಪ್ರಮಾಣದ ಕಟ್ಟುಪಾಡುಗಳನ್ನು ಅನುಸರಿಸುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ. ಈ ಧರ್ಮಗಳು ಅವರ ಮೇಲೆ ಪ್ರಮುಖ ಪ್ರಭಾವ ಬೀರಿವೆ. ಜೊತೆಗೆ ತನ್ನದೇ ಆದ ವಿಶಿಷ್ಟ ಪದ್ಧತಿಗಳ ಮುಖಾಂತರ ಗುರುತಿಸಿಕೊಳ್ಳುತ್ತಿವೆ.

### ೩.೧ ಜನನ

ವಿವಾಹದ ಪ್ರಮುಖ ಉದ್ದೇಶವೆಂದರೆ ಲೈಂಗಿಕ ಅಪೇಕ್ಷೆಯ ಪೂರೈಕೆ ಮತ್ತು ಸಂತತಿಯನ್ನು ನೆಲೆಗೊಳಿಸುವುದು. ಸಂತತಿಯು ದೇವರು ದಯಪಾಲಿಸುವ ವರ ಎಂದು ನಂಬುತ್ತಾರೆ. ಮದುವೆಯಾದ ನಂತರ ಪ್ರತಿಯೊಬ್ಬರೂ ಸಂತತಿ ಮುಂದುವರೆಯುವ ಹೆಬ್ಬಯಕೆಯನ್ನು ಹೊಂದಿರುತ್ತಾರೆ. ಗರ್ಭಿಣಿಯಾಗುವುದನ್ನು ಕುಟುಂಬವು ಕಾತುರದಿಂದ ಕಾಯುತ್ತಿರುತ್ತದೆ. ಮಕ್ಕಳನ್ನು ಪಡೆಯುವುದು ಪುಣ್ಯದ ಫಲ. ಫಲವಂತಿಕೆ ಎನ್ನುವುದು ಎಲ್ಲರಿಗೂ ಸಿಗುವುದಿಲ್ಲ. ಅದು ದೊರೆತಾಗ ಅಥವಾ ತಾಯ್ತನದ ಭಾಗ್ಯ ದೊರೆತಾಗ ಮಾತ್ರ ಹೆಣ್ಣಿನ ಜೀವನ ಸಾರ್ಥಕವಾಗುತ್ತದೆ ಎನ್ನುವ ಅಭಿಪ್ರಾಯ ಸಿದ್ದಿ ಮಹಿಳೆಯರದ್ದಾಗಿದೆ. ಮಕ್ಕಳಾಗದಿದ್ದರೆ ಸದ್ಗತಿಯಿಲ್ಲ, ಮಕ್ಕಳಾಗದವಳನ್ನು ಬಂಜೆ ಎಂದು ಕರೆಯಲಾಗುತ್ತದೆ. ಬಂಜೆ ಪಟ್ಟ ಕಟ್ಟಿಕೊಂಡು ಬಾಳುವುದು ದುರದೃಷ್ಟಕರ ಸಂಗತಿಯಾಗಿದೆ. ಮಕ್ಕಳಾಗದಿದ್ದಾಗ ಮಹಿಳೆಯರು ಮನೆ ದೇವರಿಗೆ, ಇತರೆ ದೇವರಿಗೆ ಹರಕೆ ಕಟ್ಟಿಕೊಳ್ಳುವುದು ಸಾಮಾನ್ಯ. ಕೆಲವು ಸಾರಿ ಆಯುರ್ವೇದ ಇಲ್ಲವೇ ಗಿಡಮೂಲಿಕೆಗಳ ಸೇವನೆಯ ಮುಖಾಂತರ ಫಲವಂತಿಕೆಯನ್ನು ಪಡೆಯಲು ಪ್ರಯತ್ನಿಸುತ್ತಾರೆ. ಇಂದಿನ ದಿನಗಳಲ್ಲಿ ವೈದ್ಯರ ಮೂಲಕ ಚಿಕಿತ್ಸೆ ಪಡೆಯುವುದು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿದೆ. "ಹೆಣ್ಣಿನಲ್ಲಿರುವ ಸೃಷ್ಠಿ ಶಕ್ತಿಯನ್ನು ಗುರುತಿಸಿದ ಜನಪದರು, ಬುಡಕಟ್ಟು ಸಮುದಾಯಗಳು ಹೆಣ್ಣು ಋತುಮತಿಯಾದಾಗ, ವಿವಾಹವಾದಾಗ,

ಗರ್ಭ ಧರಿಸಿದಾಗ ಹೆಣ್ಣಿಗಾಗಿಯೇ ಅನೇಕ ಆಚರಣೆ, ಸಂಪ್ರದಾಯಗಳನ್ನು ಸೃಷ್ಟಿಸಿದರು."[೧] ಹೆಣ್ಣು ಚೊಚ್ಚಲ ಬಸರಿಯಾದಾಗ ಗಂಡನ ಮತ್ತು ತವರು ಮನೆಯವರಿಗೆ ಎಲ್ಲಿಲ್ಲದ ಸಂತೋಷದ ಸುದ್ದಿಯಾಗಿರುತ್ತದೆ. ಮೂರೂ ಧರ್ಮದ ಸಿದ್ದಿಯರಲ್ಲಿ ಗರ್ಭಿಣಿ ಮಹಿಳೆಯರಿಗೆ ಯಾವುದೇ ನಿರ್ಬಂಧಗಳಿರುವುದಿಲ್ಲ. ಸಾಮಾನ್ಯ ಸ್ತ್ರೀಯರಂತೆ ದಿನನಿತ್ಯದ ಚಟುವಟಿಕೆಗಳಲ್ಲಿ ಅಂದರೆ ಕೆಲಸ ಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅವಕಾಶಗಳಿರುತ್ತವೆ. ಗರ್ಭಿಣಿ ಮಹಿಳೆಯರು ಲವಲವಿಕೆಯಿಂದ ಓಡಾಡಿಕೊಂಡು ಸಣ್ಣ-ಪುಟ್ಟ ಕೆಲಸಗಳನ್ನು ಮಾಡುತ್ತಿದ್ದರೆ ಹೆರಿಗೆ ಸುಸೂತ್ರವಾಗಿ ಆಗುತ್ತದೆ ಎನ್ನುವುದನ್ನು ಅರಿತುಕೊಂಡಿದ್ದಾರೆ. ಈ ಸಮುದಾಯದ ಬಹುತೇಕರು ಬಡತನದಲ್ಲಿರುವುದರಿಂದ ದಿನಗಳು ತುಂಬುವವರೆಗೂ ಕೂಲಿಗೆ ಹೋಗುತ್ತಿರುವುದು ಮಾಮೂಲಿಯಾಗಿದೆ. ಅಲ್ಲದೆ, "ಗರ್ಭಿಣಿಯಾದವಳಿಗೆ ಸಿದ್ದಿಯೇತರ ಭೂತಗಳ ಬಾಧೆ ತಟ್ಟಬಾರದೆಂದು ಅವಳೊಬ್ಬಳನ್ನೇ ಮನೆಯಿಂದ ಹೊರಗೆ ದೂರ ಕಳುಹಿಸುವುದಿಲ್ಲ."[೨] ಇವಳು ಹೊರಗಡೆ ಹೋಗುವ ಸಂದರ್ಭದಲ್ಲಿ ಯಾರಾದರೊಬ್ಬರು ಜೊತೆಯಾಗಿ ಇದ್ದೇ ಇರುತ್ತಾರೆ. ಬಯಕೆ ಬುತ್ತಿ, ಸೀಮಂತ ಕಾರ್ಯ ಮುಂತಾದ ಸಂಸ್ಕಾರಗಳನ್ನು ಇವರು ಆಚರಿಸುತ್ತಾರೆ. ತಮ್ಮ ಯೋಗ್ಯತೆಗೆ ಅನುಸಾರವಾಗಿ ಈ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಇವುಗಳು ಕಡ್ಡಾಯವಾಗಿಲ್ಲದಿದ್ದರೂ ಆಚರಣೆಯಲ್ಲಿದೆ. ಇಂದಿಗೂ ಇದರ ಮಹತ್ವವನ್ನು ಉಳಿಸಿಕೊಂಡು ಬರಲಾಗಿದೆ.

ಸಮುದಾಯದಲ್ಲಿ ಚೊಚ್ಚಲ ಹೆರಿಗೆ ತವರು ಮನೆಯಲ್ಲಿ ಆಗುತ್ತದೆ. ಮದುವೆಯಾದ ಹೆಣ್ಣು ಗಂಡನ ಮನೆಗೆ ಹೊಸದಾಗಿ ಬಾಳುವೆ ಮಾಡಲು ಹೋಗಿರುತ್ತಾಳೆ. ಅಲ್ಲಿ ಮನೆಯವರೆಲ್ಲರೂ ಹೊಸಬರಂತಿರುತ್ತಾರೆ. ಅವಳು ತನ್ನ ಕಷ್ಟಗಳನ್ನು ಹೇಳಿಕೊಳ್ಳಲು ಹಿಂಜರಿಯುತ್ತಾಳೆ ಎನ್ನುವ ಉದ್ದೇಶದಿಂದ ತವರುಮನೆಯಲ್ಲಿ ಚೊಚ್ಚಲ ಹೆರಿಗೆ ಮಾಡಲಾಗುತ್ತದೆ. ತಂದೆ, ತಾಯಿ ಮತ್ತು ಕುಟುಂಬದ ಸದಸ್ಯರು ಹೆಣ್ಣುಮಕ್ಕಳ ಮೇಲೆ ವಿಶೇಷ ಪ್ರೇಮವನ್ನು ಹೊಂದಿರುತ್ತಾರೆ. ಗಂಡನ ಮನೆಗಿಂತ ತವರುಮನೆಯಲ್ಲಿ ಬಾಣಂತಿತನ ಚೆನ್ನಾಗಿ ನಡೆಯುತ್ತದೆ ಎನ್ನುವ ಉದ್ದೇಶವಿದೆ. ಗರ್ಭಿಣಿ ಹೆಂಗಸರಲ್ಲಿ ಬಯಕೆಗಳು ಸಹಜ. ಅದನ್ನು ಅತ್ತೆಯ ಮುಂದೆ ತೋರ್ಪಡಿಸುವುದಕ್ಕೆ ಹಿಂಜರಿತ. ಆದರೆ ತಾಯಿಯ ಹತ್ತಿರ ತನ್ನ ಇಷ್ಟ ಕಷ್ಟಗಳನ್ನು ಹಂಚಿಕೊಳ್ಳಲು ಅವಕಾಶವಾಗುತ್ತದೆ ಎನ್ನುವ ಉದ್ದೇಶದಿಂದ ಚೊಚ್ಚಲ ಹೆರಿಗೆ ತವರು ಮನೆಯಲ್ಲಿ ನಡೆಯುತ್ತದೆ.

ಗರ್ಭಿಣಿಗೆ ಹೆರಿಗೆ ನೋವು ಆರಂಭವಾದ ಕೂಡಲೇ ಅವಳಿಗಾಗಿಯೇ ಪ್ರತ್ಯೇಕವಾಗಿ ನಿರ್ಮಿಸಲ್ಪಟ್ಟ ಸ್ಥಳಕ್ಕೆ ಕರೆದೊಯ್ಯಲಾಗುತ್ತದೆ. ಹೆರಿಗೆಗಾಗಿ ಮನೆಗೆ ಅಂಟಿಕೊಂಡಂತೆ ಮನೆಯ ಮುಂದಿನ ಭಾಗದಲ್ಲಿ ಅಥವಾ ಮನೆಯ ಪಕ್ಕದಲ್ಲಿ ಪ್ರತ್ಯೇಕವಾದ ಗುಡಿಸಲಿನಂತಹ

ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. ಹೆರಿಗೆಯ ಸಂದರ್ಭದಲ್ಲಿ ಸೂಲಗಿತ್ತಿಯನ್ನು ಕರೆತರುವುದು ಇವರ ವಾಡಿಕೆಯಾಗಿದೆ. "ಹೆರಿಗೆಯಾದ ಕೂಡಲೇ ಹೆರಿಗೆಯ ಕೋಣೆಯಲ್ಲಿ ಪಿಶಾಚಿ ಬಾದೆಯನ್ನು ದೂರ ಮಾಡಲು ಕಬ್ಬಿಣದ ತುಂಡೊಂದನ್ನಿಡುತ್ತಾರೆ."[೩] ಹೆರಿಗೆಯಾದ ಕೋಣೆಯಲ್ಲಿ ಯಾರೂ ಪ್ರವೇಶಿಸುವಂತಿಲ್ಲ. ಬಾಣಂತಿಯ ಸಹಾಯಕ್ಕೆಂದು ಅವಳ ತಾಯಿ ಇಲ್ಲವೆ ನುರಿತ ವಯಸ್ಸಾದ ಹೆಂಗಸನ್ನು ಬಿಟ್ಟಿರುತ್ತಾರೆ. ಜನಿಸಿರುವ ಮಗು, ಬಾಣಂತಿ ಮತ್ತು ಸೂಲಗಿತ್ತಿಯರನ್ನು ಮೈಲಿಗೆಯವರೆಂದು ತಿಳಿದು, ಮೂರು ದಿನಗಳವರೆಗೆ ಅವರನ್ನು ಯಾರೂ ಮುಟ್ಟುವುದಿಲ್ಲ. ಹೆರಿಗೆಯ ನಂತರ ಮಗುವಿನ ಹೊಕ್ಕಳುಬಳ್ಳಿಯನ್ನು ಕೊಯ್ದು ಮಾಸವನ್ನು ಒಂದು ಮಡಿಕೆಯಲ್ಲಿ ಹಾಕಿ, ಮನೆಯ ಹಿರಿಯ ಹೆಂಗಸು ಮತ್ತು ಸೂಲಗಿತ್ತಿ ಸೇರಿ ಮನೆಯ ಅಕ್ಕಪಕ್ಕ ಅಥವಾ ಹಿತ್ತಲದಲ್ಲಿ ಯಾರೂ ತುಳಿಯಲಾರದಂತಹ ಸ್ಥಳದಲ್ಲಿ ಮುಚ್ಚಿಡುತ್ತಾರೆ. ಬೇರೆ ಪ್ರಾಣಿಗಳು ಕೆದರದಂತೆ ಎಚ್ಚರಿಕೆ ವಹಿಸುತ್ತಾರೆ. ಆ ಸ್ಥಳದ ಮೇಲೆ ಬಾಳೆ ಅಥವಾ ತೆಂಗಿನ ಗಿಡವನ್ನು ನೆಡಲಾಗುತ್ತದೆ. ಇದು ಸಮೃದ್ಧಿಯ ಸಂಕೇತವನ್ನು ಸೂಚಿಸುತ್ತದೆ. ಮಗುವಿನ ಜನನದ ಮೂರನೇ ದಿನಕ್ಕೆ ಬಾಣಂತಿಯು ಬಳಸಿದ ಬಟ್ಟೆಗಳು, ಹಾಸಿಗೆಗಳನ್ನು ಒಗೆದು ತಾಯಿ-ಮಗುವಿನ ಸ್ನಾನ ಮಾಡಿಸಿ ಬೂದಿಯನ್ನು ಮನೆಯ ತುಂಬೆಲ್ಲಾ ಸಿಂಪಡಿಸಲಾಗುತ್ತದೆ. ಅಲ್ಲದೆ ಮನೆಯನ್ನು ಶುದ್ಧಿಮಾಡಿಕೊಳ್ಳುತ್ತಾರೆ. ನಂತರ ಐದು, ಏಳು, ಒಂಬತ್ತು, ಹನ್ನೊಂದು, ಹನ್ನೆರಡು, ಹದಿನಾರು, ಇಪ್ಪತ್ತೊಂದು ದಿನಗಳಲ್ಲಿ ನಾಮಕರಣ ಶಾಸ್ತ್ರವನ್ನು ಆಚರಿಸುತ್ತಾರೆ. ಏಳನೇ ದಿನದಲ್ಲಿ ನಾಮಕರಣ ಮಾಡುವುದು ಹೆಚ್ಚಾಗಿ ಕಂಡುಬರುತ್ತದೆ. ಇದನ್ನು ಶಟ್‌ವೀ ಎಂತಲೂ ಕರೆಯಲಾಗುತ್ತದೆ.

**೩.೨ ನಾಮಕರಣ**

ಮಗುವನ್ನು ತೊಟ್ಟಿಲಲ್ಲಿ ಹಾಕುವುದಕ್ಕೆ ನಾಮಕರಣ ಅಥವಾ ಹೆಸರಿಡುವುದು ಎಂದು ಕರೆಯಲಾಗುತ್ತದೆ. ಇವರಲ್ಲಿ ಹೆಣ್ಣು ಮತ್ತು ಗಂಡು ಯಾವುದೇ ಮಗುವಾದರೂ ಉತ್ಸಾಹವಿರುತ್ತದೆ. ಹೆಣ್ಣು ಮಗುವೆಂದರೆ ಆಲಸ್ಯ ಅಥವಾ ಅನಿಷ್ಠ ಎನ್ನುವ ಭಾವನೆಯಿಲ್ಲ. ಆದರೂ ಗಂಡು ಮಗುವಿನ ಜನನವಾದರೆ ವಿಶೇಷ ಆಸಕ್ತಿ. ಇವರಲ್ಲಿಯೂ ಸಹ ಗಂಡು ಸಂತಾನಕ್ಕೆ ಅಪೇಕ್ಷೆ ಪಡುವುದು ಕಂಡುಬರುತ್ತದೆ. ಹೆರಿಗೆಯಾದ ಹನ್ನೊಂದನೆಯ ದಿನಕ್ಕೆ ಪಂಚಗವ್ಯವನ್ನು ತಂದು ಮನೆಯಲ್ಲೆಲ್ಲಾ ಸಿಂಪಡಿಸಲಾಗುತ್ತದೆ. ಕೆಲವು ಕಡೆ ಬ್ರಾಹ್ಮಣರೇ ಮನೆಗೆ ಬಂದು ತೀರ್ಥ ನೀಡಿ ಮನೆಯ ಮೈಲಿಗೆಯನ್ನು ಕಳೆಯುತ್ತಾರೆ. ಪಂಚಗವ್ಯವನ್ನು ಬಾಣಂತಿ ಸೇರಿದಂತೆ ಮನೆಯವರೆಲ್ಲಾ ಸೇವಿಸಿ ಶುದ್ಧಿಯನ್ನು ಪಡೆದುಕೊಳ್ಳುತ್ತಾರೆ. ನಂತರ ತಾಯಿ ಮತ್ತು ಮಗುವನ್ನು ಮನೆಯೊಳಕ್ಕೆ ಕರೆದುಕೊಳ್ಳಲಾಗುತ್ತದೆ. ಮಾರನೆಯ ದಿನ ಅಂದರೆ ಮಗು ಹುಟ್ಟಿದ ಹನ್ನೆರಡನೆಯ ದಿನಕ್ಕೆ ನಾಮಕರಣ ಕಾರ್ಯವನ್ನು ಹಮ್ಮಿಕೊಳ್ಳುತ್ತಾರೆ. ಈ

ಕಾರ್ಯವನ್ನು ಮಾಡುವುದಕ್ಕಿಂತ ಪೂರ್ವದಲ್ಲಿ ಹಿರಿಯರನ್ನು ಪೂಜಿಸಿ, ಮಗುವನ್ನು ತೊಟ್ಟಿಲಿಗೆ ಹಾಕಲಾಗುತ್ತದೆ. ಮನೆಯ ಒಳಗಡೆಯೇ ನಾಮಕರಣ ಶಾಸ್ತ್ರ ನಡೆಯುತ್ತದೆ. ತಮ್ಮ ಮನೆಯಲ್ಲಿ ಸತ್ತಿರುವ ಹಿರಿಯ ವ್ಯಕ್ತಿಗಳ ಹೆಸರನ್ನಿಡುವುದು ಪ್ರಮುಖವಾಗಿ ಇವರ ಆಚರಣೆಯಲ್ಲಿದೆ. ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮದವರು ತಮ್ಮ ತಮ್ಮ ಧರ್ಮಗಳಿಗೆ ಸಂಬಂಧಿಸಿದ ಹೆಸರುಗಳನ್ನು ಇಡುತ್ತಾರೆ.

ಹಿಂದೂ ಧರ್ಮದವರ ಹೆಸರುಗಳೆಂದರೆ ಕೃಷ್ಣ, ಚಂದ್ರೇಶ್, ಶಿವಸಣ್ಯಾ, ಗಣಪು, ಸುಬ್ಬ, ನಾಗರಾಜ, ನಾಗ್ಯಾ, ಶಾಂತರಾವ್, ಸುಕ್ರು, ದಾನೇಶ್ವರ, ನರಸಿಂಹ, ವಿನಾಯಕ, ಲಲಿತ, ದೇವಿಕಾ, ಲಕ್ಷ್ಮಿ, ಸರಸ್ವತಿ, ಶೀಲಾ, ಪುಟ್ಟಿ, ಶಾಂತಾಬಾಯಿ, ಗಣಪಿ, ಯಶೋಧ, ಪಾರ್ವತಿ, ಭಾಗೀರಥಿ, ಶಾಂತಾ ಮುಂತಾದವು.

ಮುಸ್ಲಿಂ ಧರ್ಮದ ಹೆಸರುಗಳೆಂದರೆ ಉಮರ್‌ಸಾಬ್, ಅಬ್ದುಲ್ಲಾ, ಹುಸೇನ್, ಖಾಜಾಸಾಬ್, ಸದ್ದಾಂ, ಇಮಾಮ್ ಹುಸೇನ್, ಫಾರುಖ್, ಗಫರ್, ರಾಜಾಸಾಬ್, ಯೂಸೂಫ್, ಸೈಯದ್ ಶೇಖ್, ಅನ್ವರ್, ಗುಲಾಮ್, ಸಿಖಂದರ್, ರಫಿಕ್, ರಾಜ್‌ಬಿ, ದೌಲಾಬಿ, ಮೌಲಾಬಿ, ಖಾಜಾಬಿ, ರಜಿಯಾ, ಪರ್ವೀನ್, ಮುನ್ನಿ ಮುಂತಾದವು.

ಕ್ರೈಸ್ತ ಧರ್ಮದ ಹೆಸರುಗಳೆಂದರೆ ಡಿಯೋಗ್, ಜಾನ್, ಮಾರ್ಷಲ್, ಸಾವೇರ್, ನಿಕ್ಲಾ, ರಾಬರ್ಟ್, ಮೈಕೆಲ್, ರಾಬಿನ್, ವಿಲಿಯಂ, ಮಿಂಗೆಲ್, ಇಂಥ್ರೋಜ್, ಭಾವತೀಸ್, ಆಂಥೋನಿ, ಮೇರಿ, ಲೂಸಿಯಾ, ಇದಾಲಿನ್, ರೋಜಾ, ಫ್ರಾಸ್ಸಿ, ಥೆರೇಸಾ ಮುಂತಾದವು

ಈ ರೀತಿಯಾಗಿ ಧರ್ಮಕ್ಕೆ ಅನುಗುಣವಾದ ಹೆಸರುಗಳನ್ನಿಡುತ್ತಾರೆ. ಜೊತೆಗೆ ಈ ಹೆಸರುಗಳ ಮುಂದೆ ಮೂರೂ ಧರ್ಮದವರು ಸಿದ್ದಿ ಎನ್ನುವ ಹೆಸರನ್ನು ಹೊಂದಿರುತ್ತಾರೆ. ಒಂದೇ ಮನೆಯಲ್ಲಿ ಮೂರೂ ಧರ್ಮಕ್ಕೆ ಸೇರಿದ ಅಂದರೆ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ವ್ಯಕ್ತಿಗಳು ಕಂಡುಬರುತ್ತಾರೆ. ಇವರ ಹೆಸರುಗಳನ್ನು ಗಮನಿಸಿದಾಗ ಕಂಡುಬರುವ ಅಂಶಗಳೆಂದರೆ ಧರ್ಮಗಳ ಪ್ರಭಾವ.

ನಾಮಕರಣದ ದಿನದಂದು ಮಗುವನ್ನು ತೊಟ್ಟಿಲಿಗೆ ಹಾಕಲಾಗುತ್ತದೆ. ಮನೆಯ ಒಳಗಡೆ ತೊಟ್ಟಿಲನ್ನು ಕಟ್ಟಿರುತ್ತಾರೆ. ತೊಟ್ಟಿಲನ್ನು ಹೂ ಮತ್ತು ಹೊಸಬಟ್ಟೆಗಳಿಂದ ಅಲಂಕರಿಸಲಾಗಿರುತ್ತದೆ. ಸುತ್ತಮುತ್ತಲಿನ ತಮ್ಮ ಸಮುದಾಯದವರನ್ನು ಈ ಶಾಸ್ತ್ರಕ್ಕೆ ಕರೆದಿರುತ್ತಾರೆ. ಸುತ್ತಮುತ್ತಲಿನ ಸಮುದಾಯದವರು ಬಂದು ಈ ನಾಮಕರಣದ ಶಾಸ್ತ್ರದಲ್ಲಿ ಪಾಲ್ಗೊಳ್ಳುತ್ತಾರೆ. ನಾಮಕರಣದ ದಿನದಂದು ಗಂಗೆಪೂಜೆಯನ್ನು ನೆರವೇರಿಸಲಾಗುತ್ತದೆ. ಬಾಣಂತಿಯನ್ನು ಬಾವಿ, ಹೊಳೆ, ನದಿ, ಕೆರೆಗೆ ಕರೆದುಕೊಂಡು ಹೋಗಿ ಗಂಗೆಪೂಜೆಯನ್ನು ಮಾಡಿಕೊಂಡು ತುಂಬಿದ ಕೊಡವನ್ನು ಬಾಣಂತಿಯು ಹೊತ್ತು ತರುತ್ತಾಳೆ. ಗಂಗೆಪೂಜೆ

ಮುಗಿಸಿಕೊಂಡು ಮನೆಗೆ ಬಂದಾಗ ಅವಳನ್ನು ಆರತಿ ಮಾಡಿ ಮನೆಯೊಳಗೆ ಕರೆದುಕೊಳ್ಳಲಾಗುತ್ತದೆ. ಗಂಗೆಪೂಜೆ ಮಾಡಿ ಹೊತ್ತುತಂದ ತುಂಬಿದ ಕೊಡವನ್ನು ತೊಟ್ಟಿಲಿನ ಕೆಳಗೆ ಇರಿಸಲಾಗುತ್ತದೆ. ಆಗ ತೊಟ್ಟಿಲಿಗೆ ಪೂಜೆಯನ್ನು ನೆರವೇರಿಸುತ್ತಾರೆ. ಈ ಪೂಜೆಯನ್ನು ಹಿರಿಯರು ಇಲ್ಲವೇ ಕೆಲವು ಸಂದರ್ಭಗಳಲ್ಲಿ ಹತ್ತಿರದ ಸಂಬಂಧಿಕರು ನೆರವೇರಿಸುತ್ತಾರೆ. ಮುತ್ತೈದೆಯರು ತೊಟ್ಟಿಲಿಗೆ ಆರತಿಯನ್ನು ಬೆಳಗಿ ಮಗುವಿಗೆ ಹರಸುತ್ತಾರೆ.

ಹುಟ್ಟಿದ ಮಗುವಿಗೆ ನಾಮಕರಣ ಮಾಡಬೇಕಾದರೆ ಆ ಮಗುವಿನ ಸೋದರಮಾವ ಹೆಸರನ್ನಿಡುವುದು ಇವರ ಸಂಪ್ರದಾಯ. ನಾಮಕರಣದ ಸಂದರ್ಭದಲ್ಲಿ ಮುತ್ತೈದೆಯರು ತೊಟ್ಟಿಲಿನ ಸುತ್ತ ಮುಖಾಮುಖಿಯಾಗಿ ನಿಂತು ತೊಟ್ಟಿಲನ್ನು ನಿಧಾನವಾಗಿ ತೂಗುತ್ತಿರುತ್ತಾರೆ. ಆಗ ಸೋದರಮಾವನು ಆ ಮಗುವಿನ ಜನ್ಮರಾಶಿಯೊಂದಿಗೆ ತಮಗೆ ಬೇಕಾದ ಹೆಸರುಗಳನ್ನು ಸೂಚಿಸಿ ಕರೆಯಲಾಗುತ್ತದೆ. ಹೆರಿಗೆಯಾದ ಮೂರು, ಐದು ಇಲ್ಲವೇ ಒಂಬತ್ತು ತಿಂಗಳಲ್ಲಿ ಬಾಣಂತಿಯನ್ನು ಗಂಡನ ಮನೆಗೆ ಕಳುಹಿಸಲಾಗುತ್ತದೆ. ಈ ಸಂದರ್ಭದಲ್ಲಿ ಮಗುವಿನ ಸೋದರಮಾವ ಅಥವಾ ಅಜ್ಜ-ಅಜ್ಜಿ ಕರೆದುಕೊಂಡು ಹೋಗಿ ಅವಳ ಗಂಡನ ಮನೆಗೆ ಬಿಡುವುದು ವಾಡಿಕೆ. ಈ ಸಂದರ್ಭದಲ್ಲಿ ಮಗುವಿಗೆ ತೊಟ್ಟಿಲು, ಹೊಸ ಬಟ್ಟೆ, ಕಾಲ್ಗಡಗ, ಗೆಜ್ಜೆ, ಚೈನು, ಕಿವಿಯೋಲೆ ಮತ್ತು ಆಟದ ಸಾಮಾನುಗಳನ್ನು ತೆಗೆದುಕೊಂಡು ಹೋಗಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಈ ಸಂಪ್ರದಾಯದಲ್ಲಿ ಕೆಲವು ಪ್ರಮುಖ ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಹಳೆಯ ಸಂಪ್ರದಾಯದ ಬದಲಾಗಿ ನವೀನ ರೀತಿಯಾಗಿ ಗೆಳೆಯರು, ಬಂಧುಬಾಂಧವರು ಸೇರಿ ತಾವೇ ಮನೆಯಲ್ಲಿ ಆಚರಿಸಿಕೊಳ್ಳುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ. ಆಧುನಿಕ ಶೈಲಿಯ ಹೆಸರುಗಳನ್ನಿಡುವುದು ಕಂಡುಬರುತ್ತದೆ. ಈ ಆಚರಣೆಗಳ ಶೈಲಿಯಲ್ಲಿ ಬದಲಾವಣೆಯಾಗಿದ್ದರೂ ಸಹ ಮಹತ್ವದಲ್ಲಿ ಮಾತ್ರ ಯಾವುದೇ ಬದಲಾವಣೆಯಾಗಿಲ್ಲ.

**೩.೩ ಜವುಳ**

ಈ ಆಚರಣೆಯಲ್ಲಿ ಸೋದರಮಾವ ಪ್ರಮುಖ ಪಾತ್ರವಹಿಸುತ್ತಾನೆ. ಮಗುವಿಗೆ ಒಂದು ವರ್ಷ ತುಂಬಿದಾಗ, ಸೋದರಮಾವನನ್ನು ಕರೆಯಿಸಿ ಆಹಾರವನ್ನು ಸಿದ್ದ ಮಾಡಲಾಗುತ್ತದೆ. ಆಗ ಹಿರಿಯರಿಗೆ ನೈವೇದ್ಯ ಮಾಡಿ, ಸೋದರಮಾವನ ಮುಖಾಂತರ ಮಗುವಿಗೆ ಮೊದಲ ಬಾರಿಗೆ ಊಟ ಮಾಡಿಸಲಾಗುತ್ತದೆ. ಅಂದಿನಿಂದ ಮಗುವಿಗೆ ಆಹಾರವನ್ನು ತಿನ್ನಿಸಲು ಪ್ರಾರಂಭಿಸಲಾಗುತ್ತದೆ. ಈ ಸಂದರ್ಭದಲ್ಲಿ ತಮ್ಮ ಯೋಗ್ಯತಾನುಸಾರ ಮಗುವಿನ ಮನೆಯವರು ಸೋದರಮಾವನಿಗೆ ಉಡುಗೊರೆಯನ್ನು ನೀಡುತ್ತಾರೆ. ಮಗುವಿನ ಜವುಳ ಕಾರ್ಯಕ್ರಮ ತಂದೆಯ ಮನೆಯಲ್ಲಿಯೇ ನಡೆಯುತ್ತದೆ. ಮಗು ಸ್ವಲ್ಪ ದೊಡ್ಡದಾದ ಮೇಲೆ ಜವುಳ

ಕಾರ್ಯಕ್ರಮ ಜರುಗುತ್ತದೆ. ಇವರಲ್ಲಿ ಮಗುವಿಗೆ ಮೂರು ವರ್ಷದಿಂದ ಎಂಟು ವರ್ಷದ ಒಳಗೆ ಜವುಳ ತೆಗೆಯುವ ಕಾರ್ಯಕ್ರಮ ನಡೆಯುತ್ತದೆ. ಜವುಳದ ದಿನವನ್ನು ನಿಗದಿಗೊಳಿಸಿ ಸೋದರಮಾವನನ್ನು ಕರೆಸಲಾಗುತ್ತದೆ. ಮಗುವನ್ನು ಸ್ನಾನ ಮಾಡಿಸಿ ಹಿರಿಯರಿಗೆ ಪೂಜಿಸಲಾಗುತ್ತದೆ. ಮಗುವನ್ನು ತಾಯಿಯ ತೊಡೆಯ ಮೇಲೆ ಕುಳ್ಳಿರಿಸಿ ವೀಳ್ಯದೆಲೆಯನ್ನು ಕತ್ತರಿಯಾಕಾರದಲ್ಲಿ ಮಡಚಿ ಸೋದರಮಾವನು ತಲೆಯ ಮೆಲೆ ಕೂದಲನ್ನು ಕತ್ತರಿಸಿದಂತೆ ಮಾಡುತ್ತಾನೆ. ನಂತರ ಕತ್ತರಿಯಿಂದ ಐದು ಕೂದಲುಗಳನ್ನು ಕತ್ತರಿಸುತ್ತಾನೆ. ನಂತರದಲ್ಲಿ ಹಡಪದನನ್ನು ಕರೆಯಿಸಿ ಮಗುವಿನ ಕೂದಲನ್ನು ಕತ್ತರಿಸಲಾಗುತ್ತದೆ. ಆಗ ಹಡಪದನಿಗೆ ಬೇಳೆ, ಬೆಲ್ಲ, ಹಿಟ್ಟು, ಕೊಬ್ಬರಿ, ಎಲೆ, ಅಡಿಕೆಯ ಉಡುಗೊರೆಯನ್ನು ನೀಡಲಾಗುತ್ತದೆ. ಸಿದ್ದಿಯರು ಬಡವರಾಗಿರುವುದರಿಂದ ಅಲ್ಲದೆ ದಟ್ಟವಾದ ಕಾಡಿನ ಮಧ್ಯದಲ್ಲಿ ವಾಸವಾಗಿರುವುದರಿಂದ ಹಡಪದರ ಸೇವೆ ಲಭ್ಯವಿಲ್ಲದಿದ್ದಾಗ ಉಳಿದ ಕೂದಲನ್ನು ತಾವೇ ಮನೆಯವರು ಯಾರಾದರೂ ಕತ್ತರಿಸುವುದು ಕಂಡುಬರುತ್ತದೆ. ಈ ಕಾರ್ಯಕ್ರಮಕ್ಕೆ ಹೊರಗಿನವರನ್ನು ಕರೆಯದಿದ್ದರೂ ಸಹ ಸಿಹಿ ಅಡುಗೆಯ ಊಟವನ್ನು ಮಾಡಲಾಗಿರುತ್ತದೆ. ಈ ಸಂಪ್ರದಾಯ ಹಿಂದೂ ಸಿದ್ದಿಗಳಲ್ಲಿ ಪ್ರಮುಖವಾದ ಆಚರಣೆಗಳಲ್ಲೊಂದಾಗಿದೆ.

ಮುಸ್ಲಿಂ ಸಿದ್ದಿಯರ ಸಮುದಾಯದಲ್ಲಿ ಜವುಳ ಕಾರ್ಯಕ್ರಮವಿರುವುದಿಲ್ಲ. ಬದಲಾಗಿ ಗಂಡು ಮಗುವಿಗೆ ಎಂಟು ವರ್ಷದಿಂದ ಹತ್ತುವರ್ಷದ ಒಳಗೆ ಮುಂಜಿ ಅಥವಾ ಸುನತಿಯನ್ನು ಮಾಡಲಾಗುತ್ತದೆ. ಈ ಮುಂಜಿಯನ್ನು ಮಾಡಿಸುವಾಗ ಇವರೂ ಸಹ ಮಗುವಿಗೆ ಸ್ನಾನ ಮಾಡಿಸಿ, ತಮ್ಮ ದೇವರಿಗೆ ಪೂಜಿಸಿ ಮುಲ್ಲಾನ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಮುಲ್ಲಾನು ಮಗುವಿಗೆ ಮುಂಜಿಯನ್ನು ಮಾಡಿ ಮಗುವಿನ ಕಿವಿಯಲ್ಲಿ ಮಂತ್ರಾಕ್ಷರವನ್ನು ಉಚ್ಚರಿಸುತ್ತಾನೆ. ಮುಂಜಿಯನ್ನು ಮಾಡಿದ ನಂತರ ಮನೆಗೆ ಕರೆದುಕೊಂಡು ಬರಲಾಗುತ್ತದೆ. ಮನೆಯಲ್ಲಿ ಕೆಲವು ದಿನಗಳವರೆಗೆ ಆ ಮಗುವನ್ನು ಜಾಗರೂಕತೆಯಿಂದ ನೋಡಿಕೊಳ್ಳಲಾಗುತ್ತದೆ. ಕ್ರಿಶ್ಚಿಯನ್ ಸಿದ್ದಿಯರಲ್ಲಿ ಈ ಆಚರಣೆಗಳು ಕಂಡುಬರುವುದಿಲ್ಲ.

ಈ ಜವುಳ ಕಾರ್ಯಕ್ರಮದಲ್ಲಿ ಇತ್ತೀಚೆಗೆ ಬದಲಾವಣೆ ಕಂಡುಬರುತ್ತಿದೆ. ಸೋದರಮಾವನ ಊರು ದೂರದಲ್ಲಿದ್ದರೆ, ಹತ್ತಿರದಲ್ಲೇ ಇರುವ ಮತ್ತು ಮಗುವಿನ ಮಾವನಾಗುವವನನ್ನು ಕರೆಯಿಸಿ ಕಾರ್ಯಕ್ರಮ ನೆರವೇರಿಸಲಾಗುತ್ತಿದೆ. ಈ ಕಾರ್ಯಕ್ರಮವನ್ನು ಹಿಂದೆ ಹೆಚ್ಚು ಸಡಗರದಿಂದ ಆಚರಿಸಲಾಗುತ್ತಿತ್ತು. ಆದರೆ ಇಂದು ನಾಮಕಾವಸ್ಥೆಗೆ ಎನ್ನುವಂತೆ ಆಚರಿಸಲಾಗುತ್ತಿದೆ ಎನ್ನುವ ಅಭಿಪ್ರಾಯವನ್ನು ಯಲ್ಲಾಪುರ ತಾಲೂಕಿನ ಮಾಗೋಡ ಗ್ರಾಮದ ಚಂದ್ರೇಶ್ ಸಿದ್ದಿಯವರು ತಿಳಿಸುತ್ತಾರೆ.

### ೩.೪ ಋತುಮತಿ

ಮಗು ಜನ್ಮತಾಳಿದ ನಂತರ ಹಂತಹಂತವಾಗಿ ಬೆಳೆಯುತ್ತಾ ಹೋಗುತ್ತದೆ. ಹೀಗೆ ಬೆಳೆಯುತ್ತಾ ಹೋದಂತೆಲ್ಲಾ ಹಲವಾರು ಆಚರಣೆಗಳು ಆಚರಿಸಲ್ಪಡುತ್ತವೆ. ಅವುಗಳೆಂದರೆ ನಾಮಕರಣ, ಜವುಳ, ಚೂಡಕರ್ಮ, ಋತುಮತಿ ಇತ್ಯಾದಿಗಳು. ಹೆಣ್ಣು ಋತುಮತಿಯಾದಾಗ ಮೈಲಿಗೆಯೆಂದು ಭಾವಿಸಲಾಗುತ್ತದೆ. "ಹೆಣ್ಣು ಋತುಮತಿಯಾಗುವುದು ಪ್ರಾಕೃತಿಕ ಸಹಜ ನಿಯಮ. ಒಮ್ಮೆ ಹೆಣ್ಣು ಋತುಮತಿಯಾದ ಮೇಲೆ ಮಧ್ಯ ವಯಸ್ಸಿನಲ್ಲಿ ಆಕೆಯ ಋತುಚಕ್ರ ಸ್ಥಗಿತಗೊಳ್ಳುವವರೆಗಿನ ಘಟ್ಟವನ್ನು ಫಲವಂತಿಕೆಯ ಕಾಲ ಎಂದು ಗುರುತಿಸುವುದು. ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟ ಮೊದಲ ಬಾರಿಗೆ ಜೈವಿಕ ಬದಲಾವಣೆಯಾಗುತ್ತಿರುವುದನ್ನು ಅನುಭವಿಸುತ್ತಾಳೆ."[೬] ಹೆಣ್ಣು ಋತುಮತಿಯಾದರೆ ತಾಯ್ತನದ ಸುಖವನ್ನು ಪಡೆಯಲು ಅರ್ಹತೆಯನ್ನು ಪಡೆದಂತೆ. ತಾಯ್ತನದ ಸುಖವನ್ನು ಪಡೆಯಲು ಪ್ರಕೃತಿ ನೀಡಿದ ಪ್ರಮುಖ ಕೊಡುಗೆಯಾಗಿದೆ. ಹಿಂದೂ ಸಿದ್ದಿ ಸಮುದಾಯದವರಲ್ಲಿ ಹೆಣ್ಣು ಋತುಮತಿಯಾಗುವುದಕ್ಕಿಂತ ಪೂರ್ವದಲ್ಲಿ ಕಿವಿ ಮತ್ತು ಮೂಗನ್ನು ಚುಚ್ಚಲಾಗಿರುತ್ತದೆ. ಕಿವಿ ಮತ್ತು ಮೂಗು ಚುಚ್ಚುವ ಕಾರ್ಯಕ್ರಮಗಳನ್ನು ಅಚ್ಚುಕಟ್ಟಾಗಿ ನೆರವೇರಿಸಲಾಗಿರುತ್ತದೆ. ಇದಕ್ಕಾಗಿ ಅಕ್ಕಸಾಲಿಯನ್ನು ಮನಗೆ ಕರೆತರಲಾಗಿರುತ್ತದೆ. ಗಂಡು ಮಕ್ಕಳಿಗೂ ಸಹ ಕಿವಿ ಚುಚ್ಚುವ ಪದ್ದತಿ ಇದೆ. ಹುಡುಗಿಯರು ಸಾಮಾನ್ಯವಾಗಿ ಈ ಸಮುದಾಯದಲ್ಲಿ ಹನ್ನೆರಡರಿಂದ ಹದಿನಾರನೇ ವರ್ಷ ವಯಸ್ಸಿನಲ್ಲಿ ಋತುಮತಿಯರಾಗುವುದು ಕಂಡುಬರುತ್ತದೆ. ಹಿಂದೂ ಸಿದ್ದಿಯರಲ್ಲಿ ಹುಡುಗಿಯು ಪ್ರಥಮ ಬಾರಿಗೆ ಋತುಮತಿಯಾದಾಗ ಬ್ರಾಹ್ಮಣರಂತೆ ಐದು ದಿನ ಮೈಲಿಗೆಯನ್ನು ಆಚರಿಸಲಾಗುತ್ತದೆ. ಐದು ದಿನಗಳವರೆಗೆ ಋತುಮತಿಯಾದ ಹುಡುಗಿಯನ್ನು ಹೊರಗೆ ಕೂಡಿಸಲಾಗುತ್ತದೆ. ಆ ಐದು ದಿನ ಮನೆ ಮೈಲಿಗೆಯಾಗಿರುತ್ತದೆ ಎನ್ನುವುದು ಇವರ ಭಾವನೆಯಾಗಿದೆ. ಐದನೆಯ ದಿನದಂದು ಸಮೀಪದಲ್ಲಿರುವ ಹಳ್ಳ, ಹೊಳೆ, ಕೆರೆಗೆ ಕರೆದುಕೊಂಡು ಹೋಗಿ ಸ್ನಾನ ಮಾಡಿಸಲಾಗುತ್ತದೆ. ಸ್ನಾನ ಮಾಡಿಸುವಾಗ ಅರಿಶಿಣವನ್ನು ಹಚ್ಚಲಾಗುತ್ತದೆ. ನಂತರ ಋತುಮತಿಯಾದ ಹುಡುಗಿಗೆ ಹೊಸ ಸೀರೆ ತೊಡಿಸಿ ತಲೆ ಬಾಚಿ ಹೂವು ಮುಡಿಸಿ ಅಲಂಕರಿಸಲಾಗುತ್ತದೆ. ಅಲ್ಲಿಯೇ ಆರತಿ ಕಳಶವನ್ನು ತಯಾರು ಮಾಡಿ ಹುಡುಗಿಯ ಕೈಯಲ್ಲಿ ಕೊಟ್ಟು ಗಂಗೆ ಪೂಜೆ ಮಾಡಿ ಆರತಿ ಮಾಡಿಸಲಾಗುತ್ತದೆ. ಪೂಜೆ ಮುಗಿಸಿಕೊಂಡು ಗಂಗೆಯ ಸ್ಥಳದಿಂದ ಮನೆಗೆ ಕರೆದುಕೊಂಡು ಬರಲಾಗುತ್ತದೆ. ಅಷ್ಟರಲ್ಲಿ ಮನೆಯನ್ನು ಸಾರಿಸಿ, ಪಂಚಗವ್ಯವನ್ನು ಮನೆಯ ತುಂಬೆಲ್ಲಾ ಸಿಂಪಡಿಸಿ ಶುದ್ಧಗೊಳಿಸಲಾಗಿರುತ್ತದೆ. ಕಳಶವನ್ನು ಹಿಡಿದುತಂದ ಹುಡುಗಿಯು ಅದನ್ನು ಹಿರಿಯರಿಗೆ ಬೆಳಗಿ ಅದರ ಮುಂದೆ ಇಡುತ್ತಾಳೆ. ತಮ್ಮ

ಹಿರಿಯರು ಮತ್ತು ದೇವರಿಗೆ ನಮಸ್ಕರಿಸುತ್ತಾಳೆ. ಅಂದು ಸಂಜೆ ಹುಡುಗಿಯನ್ನು ಸಿಂಗರಿಸಿ ಮುತ್ತೈದೆಯರು ಮಡಿಲು ತುಂಬಿ ಆರತಿ ಬೆಳಗುತ್ತಾರೆ. ಫಲವಂತಿಕೆಯ ಸಂಕೇತಗಳಾದ ಎಲೆ, ಅಡಿಕೆ, ತೆಂಗಿನಕಾಯಿ, ನಿಂಬೆಹಣ್ಣು ಮುಂತಾದವುಗಳಿಂದ ಅವಳಿಗೆ ಮಡಿಲು ತುಂಬಲಾಗುತ್ತದೆ. ಮುತ್ತೈದೆಯರು ಸೇರಿ ಆರತಿ ಮಾಡಿ ಹರಸುತ್ತಾರೆ.

ಕ್ರಿಶ್ಚಿಯನ್ ಸಿದ್ದಿಯರಲ್ಲಿ ಋತುಮತಿಯಾದವರನ್ನು ಈ ರೀತಿಯಾಗಿ ಹೊರಗಡೆ ಕೂಡಿಸುವ ಪದ್ಧತಿಯಿಲ್ಲ. ಋತುಮತಿಯಾದ ನಂತರ ನೀರು ಹಾಕಿದರೆ ಅಥವಾ ಸ್ನಾನ ಮಾಡಿಸಿದರೆ ಅಲ್ಲಿಗೆ ಮುಗಿಯಿತು. ಹತ್ತಿರದ ಒಂದು ಒಳ್ಳೆಯ ದಿನ ನೋಡಿಕೊಂಡು ಚರ್ಚ್‌ಗೆ ಹೋಗಿ ಪ್ರಾರ್ಥಿಸಿ ಬರುವುದು ಪ್ರಮುಖವಾಗಿ ಕಂಡುಬರುತ್ತದೆ. ಚರ್ಚ್‌ಗೆ ಹೋಗುವಾಗ ಹುಡುಗಿಯನ್ನು ಸಿಂಗರಿಸಿ, ಹೊಸ ಬಟ್ಟೆಯನ್ನು ಹಾಕಿಸಿಕೊಂಡು ಹೋಗುತ್ತಾರೆ.

ಹಿಂದೂ ಸಿದ್ದಿಯರಲ್ಲಿ ಹುಡುಗಿ ಋತುಮತಿಯಾದ ಮೂರನೇ ಅಥವಾ ಐದನೇ ದಿನಕ್ಕೆ ಸೋದರಮಾವನ ಕಡೆಯವರು ಕೊಬ್ಬರಿ, ಬೆಲ್ಲ, ಹೂವು, ಎಲೆ, ಅಡಿಕೆ, ಹೊಸ ಸೀರೆಯನ್ನು ತೆಗೆದುಕೊಂಡು ಬರುತ್ತಾರೆ.

ಋತುಮತಿಯಾದ ಹುಡುಗಿಯನ್ನು ಮನೆಯ ಮುಂದಿನ ಕಟ್ಟೆಯ ಒಂದು ಮೂಲೆಯಲ್ಲಿ ಕೂಡಿಸಲಾಗಿರುತ್ತದೆ. ಪ್ರತಿನಿತ್ಯವೂ ಅವಳನ್ನು ಸ್ನಾನ ಮಾಡಿಸಿ, ಹೂವು ಮುಡಿಸಿ ಅಲಂಕರಿಸಲಾಗುತ್ತದೆ. ಆದರೆ ಇಂದು ಆಧುನಿಕತೆಯ ಪ್ರಭಾವದಿಂದಾಗಿ ಈ ಕಾರ್ಯಕ್ರಮದಲ್ಲಿ ಅಷ್ಟೊಂದು ಬದಲಾವಣೆಗಳಾಗದಿದ್ದರೂ ಮೊದಲಿನಷ್ಟು ಸಂಭ್ರಮ ಮತ್ತು ಕಟ್ಟುನಿಟ್ಟಿನ ಆಚರಣೆ ಕಡಿಮೆಯಾಗಿದೆ ಎಂಬುದು ಹಲವು ಸಿದ್ದಿಯರ ಅಭಿಪ್ರಾಯವಾಗಿದೆ. ಪ್ರಾಚೀನ ಕಾಲದಲ್ಲಿ ಕನ್ನಡಿ ನೋಡುವುದು, ಸುಂದರವಾಗಿ ಬಾಚಿಕೊಳ್ಳುವುದು ನಿಷಿದ್ಧವಾಗಿತ್ತು. ಆದರೆ ಇಂದು ಇವುಗಳೇ ಪ್ರಮುಖ ಪಾತ್ರ ವಹಿಸುತ್ತಿವೆ. ಬುಡಕಟ್ಟು ಸಮುದಾಯಗಳಲ್ಲಿಯೂ ಸಹ ಆಧುನಿಕತೆಯ ಫ್ಯಾಷನ್ ಬಳಕೆಯಾಗುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ.

**೩.೫ ವಿವಾಹ**

ಭಾರತೀಯ ಸಮಾಜದಲ್ಲಿ ವಿವಾಹ ಸಂಸ್ಕಾರಕ್ಕೆ ಅತ್ಯಂತ ಮಹತ್ವವಿದೆ. ಸಿದ್ದಿ ಸಮುದಾಯದವರಿಗೂ ಸಹ ಮದುವೆ ಎನ್ನುವುದು ವಿಶಿಷ್ಟ ಸಂಸ್ಕಾರಗಳಲ್ಲೊಂದಾಗಿದೆ. ಇವರಲ್ಲಿ ಬಾಲ್ಯ ವಿವಾಹ ಪ್ರಮುಖವಾಗಿ ಕಂಡುಬರುತ್ತಿತ್ತು. ಆದರೆ ಇಂದು ಕಡಿಮೆಯಾಗಿದೆ. ಹುಡುಗ ಹುಡುಗಿಯರು ವಯಸ್ಕರಾದ ನಂತರ ವಿವಾಹವನ್ನು ನೆರವೇರಿಸಲಾಗುತ್ತದೆ. ಹಿಂದೂ ಧರ್ಮದ ಸಿದ್ದಿಯರ ಮದುವೆಯಲ್ಲಿ ಹಸೆ ಬರೆಯುವ ಸಂಪ್ರದಾಯ ರೂಡಿಯಲ್ಲಿದೆ. ಹಸೆಯ ಚಿತ್ತಾರಗಳನ್ನು ಮದುವೆಯ ಸಂದರ್ಭಗಳಲ್ಲಿ ಮಾತ್ರ ಬರೆಯಲಾಗುತ್ತದೆ. ಹಸೆಯ ಚಿತ್ತಾರಗಳನ್ನು ಗಂಡು ಹೆಣ್ಣನ್ನು ಕುಳ್ಳರಿಸುವ ಅದರಲ್ಲಿಯೂ ಮುಖ್ಯವಾಗಿ ಪೂರ್ವಕ್ಕೆ

ಅಭಿಮುಖವಾಗಿ ಗೋಡೆಯ ಮೇಲೆ ಬರೆಯಲಾಗುತ್ತದೆ. ಹಸೆ ಚಿತ್ರಗಳನ್ನು ಬಿಡಿಸುವುದು ಅವರ ಕಲಾತ್ಮಕತೆಗೆ ಹಿಡಿದ ಕೈಗನ್ನಡಿಯಾಗಿದೆ. ಹಸೆ ಬಿಡಿಸಿದ ಜಾಗದ ಕೆಳಗೆ ಹುತ್ತದ ಮಣ್ಣಿನಿಂದ ಚೌಕಾಕಾರದ ತೆಳುಗಾತ್ರದ ಕಟ್ಟೆಯನ್ನು ನಿರ್ಮಿಸುತ್ತಾರೆ. ಹಸೆಯನ್ನು ಚೌಕಾಕಾರದಲ್ಲಿ ಬರೆಯಲಾಗಿರುತ್ತದೆ. ಅದರಲ್ಲಿ ಗಂಡು ಹೆಣ್ಣಿನ ಬಾಸಿಂಗ ಮತ್ತು ದಂಡೆಯ ಚಿತ್ರವನ್ನು ಬರೆಯಲಾಗಿರುತ್ತದೆ. ಹಸೆಯ ಸುತ್ತ ತೋರಣಗಳ ಸಾಲು ಪ್ರಮುಖವಾಗಿರುತ್ತದೆ. ಈ ತೋರಣಗಳಲ್ಲಿ ಹೂವಿನ ಚಿತ್ರಗಳು ಅಗ್ರಮಾನ್ಯವಾಗಿವೆ. ಈ ಹಸೆಯಲ್ಲಿ ದಿಬ್ಬಣದ ಜನರನ್ನೂ ಸಹ ಚಿತ್ರಿಸಲಾಗಿರುತ್ತದೆ. ಹಿಂದೂ ಸಿದ್ದಿಗಳು ಹಸೆಯನ್ನು ಬರೆಯದೆ ವಿವಾಹ ಮಾಡುವುದಿಲ್ಲ. ಅಲ್ಲದೆ ಹಸೆಯ ಚಿತ್ರವನ್ನು ಬಿಡಿಸುವುದಕ್ಕೆ ಬಣ್ಣವನ್ನು ಸ್ವತಃ ತಾವೇ ತಯಾರಿಸಿಕೊಳ್ಳುತ್ತಾರೆ.

ಇವರಲ್ಲಿ ಸಗೋತ್ರ ವಿವಾಹಕ್ಕೆ ನಿಷೇಧವಿದೆ. ಒಂದೇ ಬಳಿ ಅಥವಾ ಬೆಡಗಿನವರು ರಕ್ತ ಸಂಬಂಧಿಗಳು ಎನ್ನುವ ಅಭಿಪ್ರಾಯವೇ ಇದಕ್ಕೆ ಪ್ರಮುಖ ಕಾರಣ. ಸಗೋತ್ರವನ್ನು ಬಿಟ್ಟು ಬೇರೆ ಯಾವುದೇ ಗೋತ್ರದ ಅಥವಾ ಸಮುದಾಯದ ಇತರೆ ಧರ್ಮದವರನ್ನೂ ವಿವಾಹವಾಗಬಹುದಾಗಿದೆ. ಸಿದ್ದಿ ಪುರುಷರು ಸಿದ್ದಿ ಸಮುದಾಯದ ಹೆಣ್ಣನ್ನು ಬಿಟ್ಟು ಬೇರೆ ಬುಡಕಟ್ಟಿನ ಅಥವಾ ಬೇರೆ ಸಮುದಾಯದವಳನ್ನು ವಿವಾಹವಾಗುವ ಪ್ರಸಂಗ ಬಂದರೆ, ಒಂದು ವಿಶಿಷ್ಟವಾದ ಆಚರಣೆಯನ್ನು ಅನುಸರಿಸುತ್ತಾರೆ. ಸಿದ್ದಿಯ ಯುವಕನನ್ನು ಮದುವೆಯಾಗಲು ಬಯಸಿದ ಅನ್ಯ ಸಮುದಾಯದ ಆ ಹೆಣ್ಣನ್ನು ಚಿಕ್ಕದಾದ ಹುಲ್ಲಿನ ಗುಡಿಸಲಿನ ಒಳಗೆ ಕೂಡಿಹಾಕಲಾಗುತ್ತದೆ. ನಂತರ ಆ ಗುಡಿಸಲಿಗೆ ಬೆಂಕಿ ಹಚ್ಚಲಾಗುತ್ತದೆ. ಆ ಹೆಣ್ಣು ಬೆಂಕಿಯಿಂದ ತಪ್ಪಿಸಿಕೊಂಡು ಹೊರಬರಬೇಕು. ಈ ಆಚರಣೆಯನ್ನು ಸಮುದಾಯದ ಬುದುವಂತ, ಕೋಲುಕಾರರ ಎದುರಿಗೆ ನಡೆಸುವುದು ಕಂಡುಬರುತ್ತದೆ. ಆ ಬೆಂಕಿಯಿಂದ ತಪ್ಪಿಸಿಕೊಂಡು ಹೊರಬಂದ ಹೆಣ್ಣಿಗೆ ಸುಟ್ಟ ಬೂದಿಯನ್ನು ಮುಖ್ಯಸ್ಥ ಇಲ್ಲವೇ ಮುಖ್ಯಸ್ಥ ಸೂಚಿಸಿದ ವ್ಯಕ್ತಿಯು ತಿನ್ನಿಸುತ್ತಾನೆ. ಅಂದರೆ ಅವಳ ಹಳೆಯ ಜಾತಿ ಸುಟ್ಟು ಅಥವಾ ಸತ್ತು ಹೊಸದಾಗಿ ಸಿದ್ದಿಯಳಾಗಿ ಪರಿವರ್ತಿತಳಾದಳು ಎನ್ನುವ ನಂಬಿಕೆಯಿದೆ. ಈ ಕಾರ್ಯಕ್ರಮ ಮುಗಿದ ನಂತರ ಬುದುವಂತ, ಕೋಲುಕಾರರಾದಿಯಾಗಿ ಕನಿಷ್ಟ ಹತ್ತು ಮಂದಿಗೆ ಸಿಹಿ ಊಟವನ್ನು ಹಾಕಿಸಿದರೆ ಅಲ್ಲಿಗೆ ದೀಕ್ಷೆ ಮುಗಿದಂತಾಗುತ್ತದೆ. ಹಳೆಯದನ್ನು ಸುಟ್ಟು ಹೊಸತನದ ಹುಟ್ಟನ್ನು ಪಡೆಯುವ ಈ ಆಚರಣೆ ನಿಜಕ್ಕೂ ಇಂದಿನ ಭಾರತೀಯ ಸಮಾಜದ ಕಲುಷಿತ ಜಾತಿ ವ್ಯವಸ್ಥೆಗೊಂದು ಉತ್ತಮ ಮಾರ್ಗದರ್ಶಕವಾಗಿದೆ.

ಹೆಣ್ಣು ಕೇಳಲು ಹೋಗಬೇಕಾದರೆ ಮೊದಲು ಭೂಮಾಲಿಕರ ಅಪ್ಪಣೆಯನ್ನು ಕೇಳಬೇಕಾಗಿತ್ತು. ಅವರ ಅಪ್ಪಣೆಯನ್ನು ಪಡೆದ ನಂತರ ಹೆಣ್ಣು ನೋಡುವ ಶಾಸ್ತ್ರ

ಆರಂಭವಾಗುತ್ತಿತ್ತು. ಮನೆಯಲ್ಲಿ ಹೆಣ್ಣು ನೋಡಬೇಕಾದರೆ ಭಟ್ಟರ ಸಲಹೆಯನ್ನು ಪಡೆಯುತ್ತಿದ್ದರು. ಯಾವ ದಿಕ್ಕಿನಿಂದ ಹೆಣ್ಣು ತರಬೇಕು? ಯಾವ ದಿಕ್ಕಿನಿಂದ ಹೆಣ್ಣು ತಂದರೆ ಒಳ್ಳೆಯದು ಎನ್ನುವುದನ್ನು ಭಟ್ಟರ ಮುಖಾಂತರ ತಿಳಿದುಕೊಂಡು ಆ ದಿಕ್ಕಿನ ಕಡೆಯ ಹೆಣ್ಣನ್ನು ನೋಡಿ ವಿವಾಹದ ಕಾರ್ಯಗಳನ್ನು ಪ್ರಾರಂಭಿಸುತ್ತಿದ್ದರು. ಈ ವ್ಯವಸ್ಥೆಯ ಮುಖ್ಯ ಉದ್ದೇಶವೆಂದರೆ ಪ್ರಭಲ ವರ್ಗಗಳಾದ ಭೂ ಮಾಲಿಕರು ಮತ್ತು ಭಟ್ಟರ ಒಲವನ್ನು ಪಡೆಯುವುದಾಗಿದೆ. ಇದರಿಂದಾಗಿ ತಮಗೆ ಅನುಕೂಲಕರ ವ್ಯವಸ್ಥೆಯಾಗುತ್ತದೆ ಎನ್ನುವ ಉದ್ದೇಶವಿರಬಹುದು. ಆದರೆ ಇಂದು ಈ ರೀತಿಯ ವ್ಯವಸ್ಥೆಯಲ್ಲಿ ಬದಲಾವಣೆಯಾಗಿದೆ. ಸಿದ್ದಿಯರು ತಾವೇ ಸ್ವತಃ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದಾರೆ. ವಿವಾಹ ಬ್ರಾಹ್ಮಣರ ಪೌರೋಹಿತ್ಯದಲ್ಲಿ ಜರುಗುತ್ತಿತ್ತು. ಇಂದು ವಿವಾಹ ಸಮಾರಂಭ ಕೋಲುಕಾರನ ನೇತೃತ್ವದಲ್ಲಿ ನಡೆಯುತ್ತದೆ.

ಸಿದ್ದಿಯರಲ್ಲಿ ಗಂಡು-ಹೆಣ್ಣು ನಿಶ್ಚಯವಾದ ನಂತರ ತಮಗೆ ಬೇಕಾದ ಅಥವಾ ಖಾಯಂ ಆಗಿ ಸಂಪರ್ಕ ಹೊಂದಿದ ಬ್ರಾಹ್ಮಣರ ಹತ್ತಿರ ಮದುವೆಯ ದಿನ ಹಾಗೂ ಮುಹೂರ್ತವನ್ನು ಕೇಳಿಕೊಂಡು ಬರುತ್ತಾರೆ. ಮದುವೆ ನಿಶ್ಚಯವಾದ ಮನೆಯ ಯಜಮಾನ ಮತ್ತು ಅವನ ಹೆಂಡತಿ ಇಬ್ಬರೂ ಸೇರಿ ಕೋಲುಕಾರನ ಮನೆಗೆ ಹೋಗುತ್ತಾರೆ. ಸಂಪ್ರದಾಯಕ್ಕೆನ್ನುವಂತೆ ವೀಳ್ಯವನ್ನಿಟ್ಟು ಮದುವೆ ನಿಶ್ಚಯದ ಸುದ್ದಿಯನ್ನು ತಿಳಿಸಿ, ವಿವಾಹಕ್ಕೆ ಕೋಲುಕಾರನನ್ನು ಆಹ್ವಾನಿಸುತ್ತಾರೆ. ಇವರ ಮದುವೆಯಲ್ಲಿ ಬುದುವಂತ ಮತ್ತು ಕೋಲುಕಾರರು ಅಗ್ರಗಣ್ಯರು.

ಹಿಂದೂ ಸಿದ್ದಿಯರ ವಿವಾಹವು ನಾಲ್ಕು ದಿನಗಳವರೆಗೆ ನಡೆಯುತ್ತದೆ. ಹೆಣ್ಣಿನ ಮನೆಯಲ್ಲಿ ಧಾರೆ ನೀರು ಹಾಕಿ, ಅಕ್ಕಿ ಇಟ್ಟು ವಿವಾಹ ನೆರವೇರಿಸಲಾಗುತ್ತದೆ. ಮೂರೂ ಧರ್ಮದ ಸಿದ್ದಿಯರಲ್ಲಿ ವರದಕ್ಷಿಣೆ ಪದ್ಧತಿ ಇಲ್ಲ. ಬದಲಾಗಿ ತೆರ ಕೊಡುವುದು ಅಂದರೆ ವಧು ದಕ್ಷಿಣೆ ಕೊಡುವ ಪದ್ಧತಿ ಇದೆ. ವಧು ದಕ್ಷಿಣೆಯಲ್ಲಿ ಹಣ, ಬಂಗಾರವಾಗಬೇಕೆಂದಿಲ್ಲ. ತಮ್ಮ ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಬೇಕಾದ ಪದಾರ್ಥಗಳನ್ನು ವರನ ಕಡೆಯವರು ವಧುವಿನ ಕಡೆಯವರಿಗೆ ನೀಡುತ್ತಾರೆ. ವಧುವಿನ ಕಡೆಯವರಿಗೆ ಶಕ್ತಿ ಇದ್ದರೆ ಅಳಿಯನಿಗೆ ವಾಚು, ಉಂಗುರ, ಚಿನ್ನದ ಸರ, ಧಾನ್ಯಗಳು, ನಿತ್ಯೋಪಯೋಗಿ ವಸ್ತುಗಳನ್ನು ನೀಡುತ್ತಾರೆ. ಮದುವೆಯ ಸಂದರ್ಭದಲ್ಲಿ ಹವ್ಯಕ ಬ್ರಾಹ್ಮಣರು ಪೌರೋಹಿತ್ಯವನ್ನು ವಹಿಸುತ್ತಾರೆ. ಈ ಬ್ರಾಹ್ಮಣರು ಮದುವೆಯ ಕೆಲ ಸಂಸ್ಕಾರಗಳನ್ನು ಮಾತ್ರ ನಡೆಸುತ್ತಾರೆ. ಉಳಿದ ಎಲ್ಲಾ ಕಾರ್ಯಗಳು ಬುದುವಂತನ ಮುಂದಾಳತ್ವದಲ್ಲಿ ಜರುಗುತ್ತವೆ. ಪುರೋಹಿತರು ಬೇಕು ಎನ್ನುವಂತಿಲ್ಲ. ಬ್ರಾಹ್ಮಣ ಪುರೋಹಿತರು ಇಲ್ಲದಿದ್ದರೂ ವಿವಾಹವು ಸರಾಗವಾಗಿ ನಡೆಯುತ್ತದೆ.

ಆದರೆ ಗೌಡ ಅಥವಾ ಬುದುವಂತ ಅವಶ್ಯವಾಗಿ ಇರಲೇಬೇಕು. ಎನ್.ಆರ್.ನಾಯಕ್‌ರವರು ತಿಳಿಸುವಂತೆ ಸಿದ್ದಿಯರ ವಿವಾಹದಲ್ಲಿ 'ಅಯಾವಾಯೋ' ಎಂದು ಕರೆಯಲಾಗುವ ಮುತ್ತೈದೆಯರು ಪ್ರಮುಖ ಪಾತ್ರ ವಹಿಸುತ್ತಾರೆ. ಮದುವೆಯಲ್ಲಿ ಹಲವಾರು ಕಾರ್ಯಗಳು ಇವರ ಮಾರ್ಗದರ್ಶನದಲ್ಲಿಯೇ ನಡೆಯುತ್ತವೆ. ಹೆಣ್ಣು ಕೇಳುವುದರಿಂದ ಹಿಡಿದು ಕೋಳುಗಂಬಕ್ಕೆ ಬಾಸಿಂಗ ಕಟ್ಟುವವರೆಗೆ ಈ ಮುತ್ತೈದೆಯರು ಪ್ರಮುಖ ಪಾತ್ರ ವಹಿಸುತ್ತಾರೆ.

ಸಿದ್ದಿಯರ ವಿವಾಹದಲ್ಲಿ ಕೋಳುಗಂಬ ಪೂಜೆ ಪ್ರಮುಖ ಆಚರಣೆಯಾಗಿದೆ. "ಹಿರಿಯರು ಹಾಗೂ ದೇವರ ಪಕ್ಕದಲ್ಲಿ ಬಾಳೆಯ ಎಲೆಯ ಮೇಲೆ ಅಯ್ದು ಸಿದ್ದೆ ಅಕ್ಕಿ, ಅದರ ಮೇಲೆ ಅರಿಶಿಣ ಬಳಿದ ಅಯ್ದು ತೆಂಗಿನಕಾಯಿ, ಅಯ್ದು ವೀಳ್ಯವನ್ನಿಟ್ಟು, ತೆಂಗಿನ ಕಾಯಿಯ ಮೇಲೆ ಹೊಸ ವಸ್ತ್ರ ಹೊದಿಸುತ್ತಾರೆ. ಬಾಸಿಂಗ ಮತ್ತು ತಾಳಿಗಳನ್ನು ಅದರ ಮೇಲಿಡುತ್ತಾರೆ. ಆಮೇಲೆ ಕರ್ತಾನು 'ಹಿರಿಯರು' ಹಾಗೂ 'ಕೂಳು'ಗಳಿಗೆ ಹೂ ಮುಡಿಸಿ, ಪೂಜಿಸಿ ವದು-ವರರ ಆಯುರಾರೋಗ್ಯ ಮತ್ತು ಸಂಪತ್ತು ಹೆಚ್ಚಲೆಂದು ಪ್ರಾರ್ಥಿಸುತ್ತಾರೆ. ವಿವಾಹವಾಗಿ ಬದುಕಿನ ಜವಾಬ್ದಾರಿಯನ್ನು ಹೊತ್ತ ವದುವರರ ಬಾಸಿಂಗ ತೊಂಡಿಲುಗಳನ್ನು 'ಕೋಳು'ಗಂಬಕ್ಕೆ ಕಟ್ಟುತ್ತಾರೆ. ಹಿಂದೂಗಳು ವಿವಾಹದ ಕೊನೆಯಲ್ಲಿ ಮನೆಯ ಭಾರವನ್ನು ಹೊತ್ತು ನಿಂತಿರುವ ಕೋಳುಗಂಬಕ್ಕೆ ಪ್ರಾಧಾನ್ಯ ಕೊಡುವುದನ್ನು ಈ ಸಂದರ್ಭದಲ್ಲಿ ನೆನೆಯಬೇಕು."[೫] ಸಿದ್ದಿಯರ ಇಡೀ ಮನೆಗೆ ಮಧ್ಯದಲ್ಲಿ ಒಂದೇ ಒಂದು ಆಸರೆ ಕಂಬವಿರುತ್ತದೆ. ಅದನ್ನೇ ಕೋಳುಗಂಬವೆಂದು ಕರೆಯಲಾಗುತ್ತದೆ. ಕಂಬವು ಮನೆಗೆ ಆಸರೆಯಿದ್ದಂತೆ, ನೀವು ಮನೆಯ ಜವಾಬ್ದಾರಿಯನ್ನು ಹೊತ್ತುಕೊಂಡು ಸಾಗಿ, ಮನೆಯ ಭಾರವನ್ನು ಹೊತ್ತುಕೊಂಡು ನೆಮ್ಮದಿಯ ಜೀವನ ನಡೆಸಿ ಎನ್ನುವುದಕ್ಕಾಗಿ ಇದರ ಆಚರಣೆ ರೂಢಿಯಲ್ಲಿದೆ.

ಇವರು ದಟ್ಟವಾದ ಕಾಡಿನ ಮಧ್ಯದಲ್ಲಿ ವಾಸವಾಗಿರುವವರಾಗಿದ್ದಾರೆ. ಇತರೆ ಹಲವಾರು ಬುಡಕಟ್ಟು ಸಮುದಾಯದವರಂತೆ ಇವರೂ ಕೂಡ ವಿಶಿಷ್ಟ ಆಚರಣೆಗಳನ್ನು ನಡೆಸುತ್ತಾರೆ. ಮದುವೆಯಲ್ಲಿ ಚೇಷ್ಟೆ ಅಥವಾ ತಮಾಷೆಗಾಗಿ ಹಲವಾರು ವಿವಿಧ ವಿನೋದಗಳನ್ನು ಏರ್ಪಡಿಸುತ್ತಾರೆ. ಮದುವೆಯ ಮುನ್ನಾ ದಿನದಂದು ಡಮಾಮಿ ನೃತ್ಯವನ್ನು ಮಾಡುತ್ತಾರೆ. ಗಂಡು-ಹೆಣ್ಣು ಎಂಬ ಬೇಧವಿಲ್ಲದೆ ತಾಳಕ್ಕೆ ತಕ್ಕಂತೆ ಹೆಜ್ಜೆಯನ್ನು ಹಾಕುತ್ತಾರೆ. ರಾತ್ರಿಯ ಸಮಯದಲ್ಲಿ ಬೆಂಕಿಯನ್ನು ಹೊತ್ತಿಸಿ ಬೆಂಕಿಯ ಸುತ್ತ ನರ್ತಿಸುತ್ತಾರೆ. ಹೀಗೆ ಒಂದೊಂದು ದಿನ ಒಂದೊಂದು ಬಗೆಯ ಆಚರಣೆಯನ್ನು ಮಾಡುತ್ತಾರೆ. ನಾಲ್ಕು ದಿನ ಮದುವೆ ನಡೆಯುವುದರಿಂದ ಆ ನಾಲ್ಕು ದಿನದವರೆಗೆ ಬೇರೆ ಬೇರೆ ರೀತಿಯ ಆಚರಣೆಗಳನ್ನು ಮಾಡಲಾಗುತ್ತದೆ. ಮದುವೆಯು ಮುಗಿದ ದಿನ ಕೆಲವು ಮಹಿಳೆಯರು ಗುಮಟೆ ವಾದ್ಯವನ್ನು

ಬಡಿಯುತ್ತಾ ಕಾಡಿನೊಳಗೆ ಪ್ರವೇಶಿಸಿ ಕೆಲವು ಬಗೆಯ ಸೊಪ್ಪು, ಏಡಿ, ಕಪ್ಪೆಗಳನ್ನು ಹಿಡಿದು ತರುತ್ತಾರೆ. ಏಡಿಯನ್ನು ಹಿಡಿದು ಗಂಡು ಆಟವಾಡಿಸಿ ಬಿಟ್ಟ ನಂತರ, ಮದುಮಗಳು ಅದನ್ನು ಹಿಡಿದು ಆಡಿಸಬೇಕು. ಕಾಡಿನಿಂದ ಹಿಡಿದುತಂದ ಕಪ್ಪೆಯನ್ನು ವರನು ತನ್ನ ಅಂಗೈಯಿಂದ ನೆಲದಲ್ಲಿ ಮುಚ್ಚಿಟ್ಟಿರುತ್ತಾನೆ. ಅಲ್ಲಿ ನೆರೆದಿರುವವರು ಅಕ್ಷತೆಯನ್ನು ವರನ ತಲೆ ಮೇಲೆ ಎರಚಿದ ತಕ್ಷಣ ಮದುಮಗ ಆ ಕಪ್ಪೆಯನ್ನು ಮದುಮಗಳ ಮೇಲೆ ಎಸೆಯಬೇಕು. ಅವಳು ಅಂಜದೆ ಆ ಕಪ್ಪೆಯನ್ನು ಹಿಡಿದು ತರಬೇಕು. ಆ ಕಪ್ಪೆಯನ್ನು ಹಿಡಿಯಲು ಹೆದರಿದರೆ, ನಾಚಿದರೆ, ತಡಮಾಡಿದರೆ ಅಲ್ಲಿ ನೆರೆದಿರುವ ಮುತ್ತೈದೆಯರು ಮತ್ತಿತರರು ಅವಳನ್ನು ಹೆದರುಪುಕ್ಕಲಿ ಅಥವಾ ಅಂಜುಬುರುಕಿ ಎಂದು ಛೇಡಿಸುತ್ತಾರೆ. ಕಾಡಿನಿಂದ ತಂದಿರುವ ಸೊಪ್ಪನ್ನು ವದು-ವರರು ಒಬ್ಬರಿಗೊಬ್ಬರು ಬಡಿಸುವ ಆಟವನ್ನು ಆಡುತ್ತಾರೆ. ವರನು ಬಡಿಸು ಎಂದ ಕೂಡಲೇ ಮದುಮಗಳು ಬಡಿಸಬೇಕು. ನಂತರ ಮದುಮಗಳು ಬಡಿಸು ಎಂದ ಕೂಡಲೇ ವರನು ಬಡಿಸಬೇಕು. ಈ ರೀತಿಯ ವಿನೋದದಿಂದ ನವ ವದುವರರಲ್ಲಿ ಅನ್ಯೋನ್ಯತೆಯನ್ನು ಮೂಡಿಸುವ ಪ್ರಯತ್ನ ಮಾಡಲಾಗುತ್ತದೆ.

ವಿವಾಹವು ನಾಲ್ಕು ದಿನಗಳವರೆಗೆ ನಡೆಯುವುದರಿಂದ ಒಂದೊಂದು ದಿನ ಒಂದೊಂದು ಬಗೆಯ ಕಾರ್ಯಕ್ರಮವಿರುತ್ತದೆ. ಸೆಟ್‌ಮುಡಿಯ ದಿನ ಹಲವಾರು ಜನ ಹಾಸ್ಯವನ್ನು ಪ್ರದರ್ಶಿಸುತ್ತಾರೆ. ಆ ಹಾಸ್ಯ ಅಥವಾ ತಮಾಷೆಯನ್ನು ನೋಡಿ ವದುವರರು ನಗಬಾರದು. ನಗಲಾರದೆ ಗಂಭೀರತೆಯನ್ನು ಪ್ರದರ್ಶಿಸಬೇಕು. ಒಂದು ವೇಳೆ ವದು ಅಥವಾ ವರ ಇಲ್ಲವೇ ಇಬ್ಬರೂ ನಕ್ಕರೆ ದಂಡ ತೆರಬೇಕಾಗುತ್ತದೆ. ಈ ಇಬ್ಬರಲ್ಲಿ ಯಾರು ನಗುತ್ತಾರೋ ಅವರಿಗೆ ಮಾತ್ರ ದಂಡವಿರುತ್ತದೆ. ದಂಡವೆಂದರೆ ಹಣವಾಗಿರಬಹುದು ಅಥವಾ ಇತರೆ ವಸ್ತುಗಳು ಅಥವಾ ವ್ಯಕ್ತಿಗಳು ಸೂಚಿಸಿದ ಬೇರೆ ಯಾವುದಾದರೂ ಚಟುವಟಿಕೆಗಳನ್ನು ಹೇಳಿದರೆ ಮಾಡಬೇಕಾಗುತ್ತದೆ. ನವದಂಪತಿಗಳು ತೊಟ್ಟಿರುವ ಬಟ್ಟೆಯಲ್ಲಿ ಕಪ್ಪೆ, ಏಡಿ ಅಥವಾ ಯಾವುದಾದರೂ ಹುಳುಗಳನ್ನು ಗಂಟುಕಟ್ಟಲಾಗುತ್ತದೆ. ಅದನ್ನು ನೋಡಿ ಅವರು ಹೆದರಿಕೊಳ್ಳಬಾರದು. ಅಂದರೆ ಮುಂದೆ ಬರುವ ಭಯ ಅಥವಾ ಕಷ್ಟಗಳನ್ನು ಎದುರಿಸುವ ಸಲುವಾಗಿ ಇಂತಹ ಮೋಜಿನ ಸನ್ನಿವೇಶಗಳನ್ನು ಏರ್ಪಡಿಸಲಾಗುತ್ತದೆ ಎನ್ನುವ ಅಭಿಪ್ರಾಯವನ್ನು ಮಂಜುನಾಥ ಸಿದ್ದಿಯವರು ತಿಳಿಸುತ್ತಾರೆ. ಮದುವೆ ಕಾರ್ಯಗಳು ಮುಗಿದ ನಂತರ ಕೆಲವು ಹಿಂದೂ ಧರ್ಮದ ಸಿದ್ದಿಯರು ಹೊನ್ನಳ್ಳಿ ಮಠಕ್ಕೆ ಹೋಗಿ ಪೂಜೆ ಮಾಡಿಸಿಕೊಂಡು ಬರುವುದು ಕಂಡುಬರುತ್ತದೆ.

ಮುಸ್ಲಿಂ ಸಿದ್ದಿಯರು ಖಾಜಿ ಇಲ್ಲವೇ ಮುಲ್ಲಾನ ನೇತೃತ್ವದಲ್ಲಿ ವಿವಾಹವನ್ನು ನಡೆಸುತ್ತಾರೆ. ಇವರ ಮದುವೆಯೂ ಸಹ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಇಸ್ಲಾಂ

ಧರ್ಮದವರು ಅನುಸರಿಸುವ ರೀತಿಯಲ್ಲಿ ಇವರು ಮದುವೆಯನ್ನು ಮಾಡಿಕೊಳ್ಳುತ್ತಾರೆ. ಮದುವೆಯ ಸಂದರ್ಭದಲ್ಲಿ ಇವರು ಡಮಾಮಿ ನೃತ್ಯವನ್ನು ಮಾಡಿದರೂ ಸಹ ಹಿಂದೂ ಸಿದ್ದಿಗಳು ಆಚರಿಸುವ ಆಚರಣೆಗಳನ್ನು ಇವರು ಆಚರಿಸುವುದಿಲ್ಲ. ಕೆಲವು ಕಡೆ ಮಾತ್ರ ಕೆಲವೊಂದು ಹಿಂದೂಗಳ ಆಚರಣೆಯನ್ನು ಮುಸ್ಲಿಂ ಸಿದ್ದಿಯರಲ್ಲಿಯೂ ನೋಡಬಹುದಾಗಿದೆ. ಕಾರಣ ಇವರಲ್ಲಿ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಸಿದ್ದಿಯರು ಯಾರು ಯಾರನ್ನು ಬೇಕಾದರೂ ವಿವಾಹವಾಗಬಹುದಾಗಿದೆ. ಅಂದರೆ ಅಂತರಧರ್ಮೀಯ ವಿವಾಹ ಕಂಡುಬರುವುದರಿಂದ ಆಚರಣೆಯಲ್ಲಿ ಕೆಲವು ಪ್ರಮಾಣದ ಬದಲಾವಣೆಗಳು ಸಾಮಾನ್ಯ.

ಕ್ರಿಶ್ಚಿಯನ್ ಸಿದ್ದಿಯರ ವಿವಾಹವು ಚರ್ಚ್‌ನಲ್ಲಿ ನಡೆಯುತ್ತದೆ. ಚರ್ಚ್‌ನ ಫಾದರ್‌ನ ಸಮ್ಮುಖದಲ್ಲಿ ವದು-ವರರು ಶುಭ್ರವಾಗಿ ಹೊಸ ಬಟ್ಟೆಗಳನ್ನು ತೊಟ್ಟುಕೊಂಡು ಎರಡೂ ಕಡೆಯ ಸಂಬಂಧಿಕರು ಚರ್ಚ್‌ಗೆ ಬರುತ್ತಾರೆ. ಫಾದರ್ ಬೈಬಲ್ ಗ್ರಂಥದ ಕೆಲವು ಮಂತ್ರಗಳನ್ನು ಪಠಿಸಿದ ನಂತರ ಉಂಗುರವನ್ನು ಗಂಡು ಹೆಣ್ಣಿಗೆ, ಹೆಣ್ಣು ಗಂಡಿಗೆ ತೊಡಿಸುವ ಮುಖಾಂತರ ವಿವಾಹ ನೆರವೇರುತ್ತದೆ. ನಂತರ ಏಸು, ಫಾದರ್ ಮತ್ತು ತಮ್ಮ ಹಿರಿಯ ಸಂಬಂಧಿಗಳಿಗೆ ನಮಸ್ಕರಿಸಿ ಮನೆಗೆ ಬರುತ್ತಾರೆ. ಆದರೆ ಕ್ರೈಸ್ತ ಧರ್ಮದ ಸಿದ್ದಿಯರಲ್ಲಿ ಹಿಂದೂಗಳ ಹಲವಾರು ಆಚರಣೆಗಳು ಪ್ರಮುಖವಾಗಿ ಸೇರಿಕೊಂಡಿರುವುದು ಕಂಡುಬರುತ್ತದೆ. ಅದರಲ್ಲಿಯೂ ಮುಖ್ಯವಾಗಿ ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಹಲವಾರು ಕ್ರಿಶ್ಚಿಯನ್ ವಿವಾಹಿತ ಮಹಿಳೆಯರ ಕೊರಳಲ್ಲಿ ಮಾಂಗಲ್ಯ ಕಂಡುಬಂದಿರುತ್ತದೆ. ಕುಂಕುಮ ಇಡುವುದು ಸಹ ಕಂಡುಬರುತ್ತದೆ. ಹೀಗೆ ಕ್ರೈಸ್ತ ಧರ್ಮದ ವಿವಾಹದಲ್ಲಿ ಹಿಂದೂ ಧರ್ಮದ ಆಚರಣೆಗಳು ಮತ್ತು ಸಂಪ್ರದಾಯಗಳು ಪ್ರಮುಖವಾಗಿ ಗೋಚರವಾಗುತ್ತವೆ.

ಮೂರೂ ಧರ್ಮದ ಸಿದ್ದಿಯರ ಮದುವೆಯಲ್ಲಿ ಮಾಂಸದ ಅಡುಗೆಯನ್ನು ತಯಾರಿಸಲಾಗುತ್ತದೆ. ಹಿಂದೂ ಧರ್ಮದ ಸಿದ್ದಿಯರು ಬ್ರಾಹ್ಮಣರ ಹಲವಾರು ಆಚರಣೆಗಳನ್ನು ಅಳವಡಿಸಿಕೊಂಡಿದ್ದರೂ ಮಾಂಸದ ಊಟವನ್ನು ವರ್ಜಿಸಿಲ್ಲ. ಮಾಂಸದ ಊಟ ಈ ಮೂರೂ ಧರ್ಮಗಳಿಗೆ ನಿಷಿದ್ಧವಲ್ಲ. ಇವರು ಅರಣ್ಯವಾಸಿಗಳಾಗಿರುವುದರಿಂದ ಮಾಂಸದ ಊಟ ಪ್ರಮುಖವಾಗಿದೆ.

ಸಮುದಾಯದಲ್ಲಿ ಸೀರುಡಿಕೆ ವಿವಾಹವೂ ಸಹ ಕಂಡುಬರುತ್ತದೆ. ಗಂಡ ಸತ್ತ ಹೆಂಡತಿ ಮತ್ತು ಹೆಂಡತಿ ಸತ್ತ ಗಂಡ ಅಂದರೆ ವಿಧವೆ ಮತ್ತು ವಿಧುರರು ವಿವಾಹವಾಗುವುದನ್ನು ಸೀರುಡಿಕೆ ಎಂದು ಕರೆಯಲಾಗುತ್ತದೆ. ಇಲ್ಲಿಯೂ ಸಹ ಧರ್ಮದ ಬೇಧಭಾವವಿಲ್ಲ. ಈ ವಿವಾಹವು ವಿಧವೆಯರ ಸಮ್ಮುಖದಲ್ಲಿ ನಡೆಯುತ್ತದೆ. ಈ ವಿವಾಹ ಕಾರ್ಯವನ್ನು ರಾತ್ರಿಯ ಹೊತ್ತು ನೆರವೇರಿಸಲಾಗುತ್ತದೆ. ಈ ವಿವಾಹದಲ್ಲಿ ಮೊದಲಿಗೆ ಮದುವೆಯಾಗುವ ಆಚರಣೆಗಳು

ಇರುವುದಿಲ್ಲ. ಬದಲಾಗಿ ವಿಧುರನು ತಾನು ಮದುವೆಯಾಗುವ ವಿಧವೆ ಹೆಣ್ಣಿಗೆ ಸೀರೆ ತೊಡಿಸಿ, ಬಳೆಗಳನ್ನು ಹಾಕಿ, ಅವರ ಸಂಪ್ರದಾಯಕ್ಕೆ ಅವಶ್ಯವಿದ್ದರೆ ಕುಂಕುಮ ಹಚ್ಚಿ ತಾಳಿಯನ್ನು ಕಟ್ಟುತ್ತಾನೆ. ಅಂದಿನಿಂದ ಅವರು ನವದಂಪತಿಗಳಾಗಿ ಜೀವನವನ್ನು ನಿರ್ವಹಿಸಲು ಪ್ರಾರಂಭಿಸುತ್ತಾರೆ. ಈ ವಿವಾಹವು ಹಲವಾರು ಬುಡಕಟ್ಟು ಸಮುದಾಯಗಳಲ್ಲಿ ಆಚರಣೆಯಲ್ಲಿರುವುದು ತಿಳಿದುಬರುತ್ತದೆ. ಸಿದ್ದಿಯರ ಈ ವಿವಾಹವು ಆಧುನಿಕ ಸಮಾಜಕ್ಕೆ ಮಾರ್ಗದರ್ಶಿಯಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

ಆಧುನಿಕತೆಯ ಸ್ಪರ್ಶ ಮತ್ತು ನಾಗರಿಕ ಸಮಾಜಗಳ ಸಂಪರ್ಕದಿಂದಾಗಿ ವೈವಾಹಿಕ ಆಚರಣೆಗಳಲ್ಲಿ ಮಹತ್ತರವಾದ ಬದಲಾವಣೆಗಳು ಕಂಡುಬರುತ್ತಿವೆ. ಇತರೆ ಸಮುದಾಯಗಳೊಂದಿಗೆ ಬೆರೆಯುತ್ತಾ ಹೋದಂತೆಲ್ಲಾ ಹೊಸ ಶೈಲಿಯ ಆಚರಣೆಗಳನ್ನು ಅಳವಡಿಸಿಕೊಳ್ಳುವುದರ ಕಡೆಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದಾರೆ. ಹಿಂದೆ ವಿವಾಹವನ್ನು ಸಡಗರ ಸಂಭ್ರಮಗಳಿಂದ ದೊಡ್ಡದಾಗಿ ಆಚರಿಸಲಾಗುತ್ತಿತ್ತು. ಆದರೆ ಇಂದು ಲಗುಬಗನೆ ಮದುವೆ ನಡೆಯಿತೋ ಇಲ್ಲವೋ ಎನ್ನುವಂತೆ ನಡೆಯುತ್ತಿವೆ ಎನ್ನುವುದನ್ನು ಸಿದ್ದಿಯರ ಪಾರವ್ವ ತಿಳಿಸುತ್ತಾಳೆ. ಮೊದಲಿಗೆ ಕಾಡಿನಲ್ಲಿ ದೊರೆಯುವ ಪ್ರಾಣಿಗಳಿಂದ ಅಥವಾ ಗೆಡ್ಡೆ-ಗೆಣಸು, ತರಕಾರಿಗಳಿಂದ ವಿವಾಹದ ಆಹಾರವನ್ನು ಪ್ರಮುಖವಾಗಿ ತಯಾರಿಸುತ್ತಿದ್ದರು. ಇಂದು ಸಮುದಾಯದಲ್ಲಿ ಹಣಕಾಸಿನ ಚಲಾವಣೆ ಕಂಡುಬರುತ್ತಿದೆ. ಪಟ್ಟಣ ಅಥವಾ ನಗರದಿಂದ ಪ್ರಮುಖವಾದ ಆಹಾರ ಪದಾರ್ಥಗಳನ್ನು ತಂದು ತಯಾರಿಸಲಾಗುತ್ತಿದೆ. ಸ್ಥಿತಿವಂತರು ಸ್ವಲ್ಪ ಮಟ್ಟಿಗೆ ವಿಜೃಂಭಣೆಯಿಂದ ವಿವಾಹ ನಡೆಸುವ ಕಡೆ ಗಮನಹರಿಸುತ್ತಿದ್ದಾರೆ.

ವಿವಾಹದಲ್ಲಿ ಇವರು ಆಚರಿಸುವ ಆಚರಣೆಗಳನ್ನು ಇತರೆ ಸಮುದಾಯದವರು ಕೀಳಾಗಿ ಕಾಣುತ್ತಾರೆ ಎನ್ನುವ ಉದ್ದೇಶದಿಂದ ತಮ್ಮ ಆಚರಣೆಗಳನ್ನು ಬಿಟ್ಟು ಅನ್ಯ ಸಂಸ್ಕೃತಿಯ ಸಂಪ್ರದಾಯಗಳನ್ನು ಅಳವಡಿಸಿಕೊಳ್ಳಾಗಿದೆ ಎನ್ನುವುದನ್ನು ಸಮುದಾಯದ ತಿಳುವಳಿಕೆದಾರರಾದ ಯಲ್ಲಾಪುರ ತಾಲೂಕಿನ ಮಾಗೋಡ ಗ್ರಾಮದ ಚಂದ್ರೇಶ್‌ರವರು ತಿಳಿಸುತ್ತಾರೆ.

ನಾಗರಿಕ ಸಮಾಜದ ಸಂಪರ್ಕದಿಂದಾಗಿ ತನ್ನ ಸಂಸ್ಕೃತಿಯನ್ನು ಕಳೆದುಕೊಂಡು, ಇತರರ ಸಂಸ್ಕೃತಿಯನ್ನು ಅನುಸರಿಸಲಾಗದೆ ಅತಂತ್ರ ಪರಿಸ್ಥಿತಿಯ ತೊಳಲಾಟಕ್ಕೆ ಬಿದ್ದಿರುವುದು ಕಂಡುಬರುತ್ತದೆ.

ಇವರ ವೈವಾಹಿಕ ಬಂಧನ ಅಷ್ಟು ಬಿಗಿಯಾಗಿಲ್ಲ. ಸಂಸಾರದಲ್ಲಿ ಗಂಡ-ಹೆಂಡತಿಯ ಮಧ್ಯೆ ಬಿರುಕು ಮೂಡಿದರೆ, ಅವರ ದಾಂಪತ್ಯ ಅನ್ಯೋನ್ಯವಾಗಿರದಿದ್ದರೆ ಸುಲಭವಾಗಿ ವಿಚ್ಛೇಧನೆಯನ್ನು ಪಡೆಯಬಹುದಾಗಿದೆ. ವಿವಾಹ ವಿಚ್ಛೇಧನೆ ಪಡೆಯುವುದು ಈ

ಸಮುದಾಯದಲ್ಲಿ ಸಾಮಾನ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಪ್ರೇಮ ವಿವಾಹ, ನೊಂದಣಿ ವಿವಾಹಗಳು ಸಮುದಾಯದ ಕೆಲವು ಕಡೆ ಕಂಡುಬರುತ್ತಿವೆ ಎನ್ನುವ ಅಭಿಪ್ರಾಯವನ್ನು ಸಮುದಾಯದ ಹಿರಿಯ ತಿಳುವಳಿಕೆದಾರರಾದ ಡಿಯೋಗ್ .ಬಿ. ಸಿದ್ದಿಯವರು ತಿಳಿಸುತ್ತಾರೆ.

**೩.೬ ಸೀಮಂತ**

ವಿವಾಹದ ನಂತರ ಗಂಡ-ಹೆಂಡತಿಯರ ಸಮಾಗಮನದ ಫಲವಾಗಿ ಸಂತಾನೋತ್ಪತ್ತಿಯ ಕಾರ್ಯ ಪ್ರಾರಂಭವಾಗುತ್ತದೆ. ಹೆಣ್ಣು ಗರ್ಭಿಣಿಯಾದಾಗ ಮಾಡುವ ಆಚರಣೆಯನ್ನು ಸೀಮಂತ ಕಾರ್ಯ ಎನ್ನಲಾಗುತ್ತದೆ. ಹೆಣ್ಣು ಗರ್ಭವತಿಯಾದ ಮೂರರಿಂದ ನಾಲ್ಕನೇ ತಿಂಗಳಿನಲ್ಲಿ ದಾರಿಬುತ್ತಿಯನ್ನು ನೀಡಲಾಗುತ್ತದೆ. ಇದನ್ನು ಕಳ್ಳಬುತ್ತಿ, ಕಳ್ಳಕುಬುಸ ಎಂತಲೂ ಕರೆಯಲಾಗುತ್ತದೆ. ಈ ಆಚರಣೆಯನ್ನು ಮಾಡುವವರೆಗೆ ತಮ್ಮ ಊರಿನ ಹಳ್ಳವನ್ನು ಅಂದರೆ ಕಕ್ಷೆಯನ್ನು ದಾಟುವುದಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ಗರ್ಭಿಣಿಯ ತವರು ಮನೆಯವರು ಮೂರರಿಂದ ನಾಲ್ಕನೇ ತಿಂಗಳಿನಲ್ಲಿ ಕೆಲವು ಬಗೆಯ ತಿಂಡಿ-ತಿನಿಸುಗಳನ್ನು ಮಾಡಿಕೊಂಡು ಬರುತ್ತಾರೆ. ಇದು ಸರಳವಾಗಿ ಮನೆ-ಮನೆಯವರಲ್ಲಿಯೇ ನಡೆಯುತ್ತದೆ. ಇದನ್ನು ಮಾಡುವುದಕ್ಕೆ ಮುಂಚೆಯೇ ಗಂಡಿನ ಮನೆಯವರು ಹೆಣ್ಣಿಗೆ ತಿಂಗಳು ತುಂಬಿದ ಸುದ್ದಿಯನ್ನು ಅವಳ ತವರು ಮನೆಯವರಿಗೆ ಮುಟ್ಟಿಸುತ್ತಾರೆ. ಆಗ ಹೆಣ್ಣಿನ ತವರುಮನೆಯವರು ಹೊಸ ಸೀರೆ, ಕುಪ್ಪಸ, ಹೂವು, ಹಣ್ಣು ಕೆಲವು ಬಗೆಯ ತಿನಿಸುಗಳನ್ನು ತೆಗೆದುಕೊಂಡು ಬರುತ್ತಾರೆ.

ನಂತರ ಗರ್ಭಿಣಿಗೆ ಆರು ಅಥವಾ ಎಂಟು ತಿಂಗಳು ತುಂಬಿದಾಗ ಸೀಮಂತ ಕಾರ್ಯವನ್ನು ಮಾಡಲಾಗುತ್ತದೆ. ಗರ್ಭಿಣಿಗೆ ಗಂಡನ ಮನೆಯಲ್ಲಿ ಸೀಮಂತ ಕಾರ್ಯವನ್ನು ನೆರವೇರಿಸಲಾಗುತ್ತದೆ. ಈ ಸಂದರ್ಭದಲ್ಲಿ ಬರುವ ಎಲ್ಲಾ ಖರ್ಚು-ವೆಚ್ಚಗಳನ್ನು ಹೆಣ್ಣಿನ ಮನೆಯವರೇ ಭರಿಸಬೇಕಾಗುತ್ತದೆ. ತವರು ಮನೆಯವರು ಮಗಳಿಗೆ ಮತ್ತು ಅಳಿಯನಿಗೆ ಹೊಸ ಬಟ್ಟೆಯನ್ನು ತಂದಿರುತ್ತಾರೆ. ಅಲ್ಲದೆ ಮಗಳಿಗೆ ಹೊಸ ಬಳೆ ತೊಡಿಸಿ, ಹೂವು ಮುಡಿಸಿ ಸಮುದಾಯದ ತಮ್ಮ ಕುಲಬಾಂಧವರನ್ನೆಲ್ಲಾ ಕರೆದು, ಮಗಳು ಮತ್ತು ಅಳಿಯನಿಗೆ ಆರತಿ ಮಾಡುತ್ತಾರೆ. ಹಿಂದೂ ಧರ್ಮದ ಕೆಲವು ಸಮುದಾಯಗಳಲ್ಲಿ ಈ ಆಚರಣೆ ಮಾಡಬೇಕಾದರೆ ಅಳಿಯನು ಕೆಲ ಬೇಡಿಕೆಗಳನ್ನು ಇಡುತ್ತಾನೆ. ಅವುಗಳೆಂದರೆ ಬಂಗಾರದ ಸರ ಇಲ್ಲವೇ ಬಂಗಾರದ ಉಂಗುರ ಇತ್ಯಾದಿ. ಆದರೆ ಸಿದ್ದಿಗಳು ಬಡವರಾಗಿರುವುದರಿಂದ ಅಂತಹ ಬೇಡಿಕೆಗಳು ಕಂಡುಬರುವುದಿಲ್ಲ. ಅನುಕೂಲಸ್ಥರಾಗಿದ್ದರೆ ಅಜ್ಜ-ಅಜ್ಜಿಯಾಗುವ ಖುಷಿಗೆ ಅಳಿಯನಿಗೆ ಬಂಗಾರ ನೀಡುವುದು ಕಂಡುಬರುತ್ತದೆ. ಆ ದಿನ ಬಂಧು-ಬಾಂಧವರಿಗೆ ಊಟ ಮಾಡಿಸುವ ಸಂಪ್ರದಾಯವಿದೆ. ನಂತರ ಹೆಣ್ಣಿನ ಮನೆಯವರು ಹೆರಿಗೆಗಾಗಿ ಮಗಳನ್ನು

ಕರೆದೊಯ್ಯುತ್ತಾರೆ. ಚೊಚ್ಚಲು ಹೆರಿಗೆ ತವರುಮನೆಯಲ್ಲಿ ನಡೆಯುವುದು ಸಂಪ್ರದಾಯ. ಗರ್ಭಿಣಿ ಆಸೆಪಟ್ಟ ತಿಂಡಿ ತಿನಿಸುಗಳನ್ನು ಮಾಡಿಕೊಡಲಾಗುತ್ತದೆ. ಆದರೆ ಇಂದು ಚೊಚ್ಚಲ ಮತ್ತು ಮರ್ಚಲು ಹೆರಿಗೆ ತವರು ಮನೆಯಲ್ಲಿ ನಡೆಯುತ್ತವೆ ಎನ್ನುವಂತಿಲ್ಲ. ಹೆಣ್ಣು ಗರ್ಭ ಧರಿಸಿದ ಕೂಡಲೇ ವೈದ್ಯರ ಹತ್ತಿರ ಪರೀಕ್ಷೆಗೆ ಕರೆದುಕೊಂಡು ಹೋಗಲಾಗುತ್ತಿದೆ. ಹೆರಿಗೆ ಮುಂದೆ ಸ್ವಲ್ಪ ಕಷ್ಟವಾಗುವ ಸಂಭವವನ್ನು ವೈದ್ಯರು ತಿಳಿಸಿದರೆ, ಅವರ ಮಾರ್ಗದರ್ಶನದಲ್ಲಿ ನಡೆಯುತ್ತಾರೆ. ಅಂತಹವರು ಹೆರಿಗೆ ನೋವು ಕಾಣಿಸಿಕೊಂಡರೆ ಆಸ್ಪತ್ರೆಗಳಲ್ಲಿಯೇ ಹೆರಿಗೆ ಮಾಡಿಸುತ್ತಿರುವುದು ಇತ್ತೀಚೆಗೆ ಅಲ್ಲಲ್ಲಿ ಕಂಡುಬರುತ್ತಿದೆ.

**೩.೭ ಶವ ಸಂಸ್ಕಾರ**

ಮಾನವ ಹುಟ್ಟಿನಿಂದ ಮರಣದವರೆಗೆ ಹಲವಾರು ಸಂಸ್ಕಾರಗಳಿಗೆ ಒಳಪಡುತ್ತಾನೆ. ಸತ್ತ ನಂತರವೂ ಹಲವಾರು ಸಂಸ್ಕಾರಗಳು ನಡೆಯುವುದನ್ನು ನಾವು ಸುಲಭವಾಗಿ ಗಮನಿಸಬಹುದಾಗಿದೆ. ಸಾವಿನ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಎಲ್ಲಾ ಕಡೆ ಒಂದೇ ರೀತಿ ಇರುತ್ತವೆ ಎನ್ನುವಂತಿಲ್ಲ. ಇದು ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯನ್ನು ಹೊಂದಿರುತ್ತದೆ. ಏನೇ ಭಿನ್ನತೆಯಿದ್ದರೂ ಅದು ಸೂತಕವಾಗಿರುತ್ತದೆ.

ಸಿದ್ದಿಯರ ಶವ ಸಂಸ್ಕಾರದಲ್ಲಿ ಎಲ್ಲರಿಗೂ ಒಂದೇ ರೀತಿಯಾದ ಚಟ್ಟವನ್ನು ತಯಾರಿಸಲಾಗುತ್ತದೆ. ಇಲ್ಲಿ ವಯಸ್ಕ ಅಥವಾ ಸಣ್ಣವ ಎನ್ನುವ ಭಿನ್ನ ವ್ಯವಸ್ಥೆಯಿಲ್ಲ. ವ್ಯಕ್ತಿಯು ಮರಣ ಹೊಂದಿದ ನಂತರ ಬಿದಿರು ಮತ್ತು ತೆಂಗಿನ ಗರಿಗಳಿಂದ ಚಟ್ಟವನ್ನು ತಯಾರಿಸಲಾಗುತ್ತದೆ. ಮೃತ ಹೆಣವನ್ನು ಬಹಳ ಹೊತ್ತಿನವರೆಗೆ ಇಟ್ಟುಕೊಳ್ಳುವುದಿಲ್ಲ. ರಾತ್ರಿ ಸಮಯದಲ್ಲಿ ಸತ್ತರೆ ಮನೆಯ ಮುಂದೆ ಬೆಂಕಿ ಹಾಕಿ ಬೆಳಿಗ್ಗೆ ಶವ ಸಂಸ್ಕಾರ ಮಾಡುತ್ತಾರೆ. ಸತ್ತ ವ್ಯಕ್ತಿಯ ಹಿರಿಯ ಮಗ ಸ್ನಾನ ಮಾಡಿಸುತ್ತಾನೆ. ಶವ ಸಂಸ್ಕಾರದಲ್ಲಿಯೂ ಸಹ ಹಿರಿಯ ಮಗ ಪ್ರಮುಖ ಪಾತ್ರ ವಹಿಸುತ್ತಾನೆ. ವ್ಯಕ್ತಿಯು ಮರಣ ಹೊಂದಿದ ಮೂರು ತಾಸಿನ ಒಳಗಾಗಿ ಶವ ಸಂಸ್ಕಾರ ಮಾಡುವುದು ಕಂಡುಬರುತ್ತಿತ್ತು. ಆದರೆ ಇಂದು ಸಂಬಂಧಿಗಳು ಬರುವವರೆಗೆ ಕಾಯಲಾಗುತ್ತಿದೆ. ಆದರೂ ಸಂಬಂಧಿಗಳು ಬಹುಬೇಗನೆ ಬಂದು ಸೇರುತ್ತಾರೆ. ತಮ್ಮವರೆಲ್ಲಾ ಬಂದಿದ್ದಾರೆ ಎಂದು ತಿಳಿದ ಕೂಡಲೇ ಶವ ಸಂಸ್ಕಾರಕ್ಕೆ ಅಣಿಮಾಡಲಾಗುತ್ತದೆ. ನಂತರ ಶವ ಸಂಸ್ಕಾರ ಮಾಡಿದ ಜಾಗದಲ್ಲಿ ಅನ್ನ, ಪಲ್ಯ, ಸಾರು, ಸರಾಯಿಯ ನೈವೇದ್ಯ ಮಾಡಲಾಗುತ್ತದೆ. ನೈವೇದ್ಯ ಮಾಡುವ ಸಂದರ್ಭದಲ್ಲಿ ಕೋಳಿಯನ್ನು ಬಲಿ ಕೊಡುತ್ತಾರೆ. ಬಲಿ ಕೊಟ್ಟ ನಂತರ ಮೃತ ವ್ಯಕ್ತಿಯನ್ನು ಹಿಂದೆ ಸತ್ತವರ, ಹಿರಿಯರು ಇರುವ ತೆಂಗಿನ ಕಾಯಿಯಲ್ಲಿ ಬಂದು ಸೇರಬೇಕೆಂದು ಪ್ರಾರ್ಥಿಸುತ್ತಾರೆ. ಈ ರೀತಿಯ ಪ್ರಾರ್ಥನೆಯನ್ನು ಸತ್ತಿರುವ ವ್ಯಕ್ತಿಯು

ಗಂಡಸಾಗಿದ್ದರೆ ಮಾತ್ರ ಪ್ರಾರ್ಥಿಸಲಾಗುತ್ತದೆ. ಅಂದರೆ ಮೃತಪಟ್ಟ ವ್ಯಕ್ತಿಯು ಹಿರಿಯರಲ್ಲಿ ಸಂಗಮವಾಗುತ್ತಾನೆ ಅಥವಾ ಕೂಡಿಕೊಳ್ಳುತ್ತಾನೆ ಎನ್ನುವ ಭಾವನೆಯಿದೆ. ಇಲ್ಲಿ ಹಿರಿಯರು ಎಂದರೆ ಮರಣ ಹೊಂದಿರುವ ಕೇವಲ ಗಂಡಸರು ಮಾತ್ರ. ಈ ವ್ಯವಸ್ಥೆಯು ಪುರುಷ ಪ್ರಾಧಾನ್ಯತೆಯನ್ನು ಎತ್ತಿ ತೋರಿಸುತ್ತದೆ. ಹಿಂದೂ ಸಿದ್ದಿಯರಲ್ಲಿ ಮೊದಲಿಗೆ ಶವ ಸಂಸ್ಕಾರದಲ್ಲಿ ಹೂಳುವ ಪದ್ದತಿ ಇತ್ತು. ಆದರೆ ಇತ್ತೀಚೆಗೆ ಸುಡುವ ಪದ್ದತಿಯನ್ನು ಅನುಸರಿಸುತ್ತಿದ್ದಾರೆ. ಹಿಂದೂ ಸಿದ್ದಿಗಳಲ್ಲಿ ಕೆಲವು ಕಡೆ ಮಾತ್ರ ಹೂಳುವ ಪದ್ದತಿ ಇರುವುದು ಅಪರೂಪವಾಗಿ ಗೋಚರಿಸುತ್ತಿದೆ. ಬ್ರಾಹ್ಮಣರ ಪ್ರಭಾವವಾಗಿರುವ ಸಾಧ್ಯತೆ ನಿಚ್ಚಳವಾಗಿ ಕಂಡುಬರುತ್ತದೆ.

ಕ್ರಿಶ್ಚಿಯನ್ ಸಿದ್ದಿಯರಲ್ಲಿ ವ್ಯಕ್ತಿಯು ಮರಣಹೊಂದಿದ ನಂತರ ಆ ಹೆಣವನ್ನು ಕ್ರಿಶ್ಚಿಯನ್ ಧರ್ಮದ ಆಚರಣೆಯಂತೆ ಶವಪೆಟ್ಟಿಗೆಯಲ್ಲಿ ಸ್ಮಶಾನಕ್ಕೆ ತೆಗೆದುಕೊಂಡು ಹೋಗಲಾಗುತ್ತದೆ. ಚರ್ಚ್‌ನ ಫಾದರ್‌ನು ಬೈಬಲ್‌ನ ಕೆಲವು ಮಂತ್ರಗಳನ್ನು ಪಠಿಸಿ ಆತ್ಮಕ್ಕೆ ಶಾಂತಿ ಕೋರುತ್ತಾನೆ. ಏಸು ಈ ವ್ಯಕ್ತಿಗೆ ಮುಕ್ತಿ ಕೊಡು ಎಂದು ಪ್ರಾರ್ಥಿಸಲಾಗುತ್ತದೆ. ನಂತರ ಆ ಶವವನ್ನು ಹೂಳಲಾಗುತ್ತದೆ. ಹೆಣವನ್ನು ಹುಗಿದು ಬಂದ ಮೇಲೆ, ಎಲ್ಲರೂ ಒಂದು ಕಡೆ ಸೇರಿ ಸಾರಾಯಿ ಕುಡಿಯುತ್ತಾರೆ. ಸತ್ತ ವ್ಯಕ್ತಿಯ ದುಃಖವನ್ನು ಮರೆಯಲು ಈ ಆಚರಣೆ ರೂಢಿಯಲ್ಲಿರಬಹುದು.



ಮುಸ್ಲಿಂ ಸಿದ್ದಿಯರು ಸಹ ಶವವನ್ನು ಹೂಳುತ್ತಾರೆ. ಇಸ್ಲಾಂ ಧರ್ಮದ ಆಚರಣೆಯ ಪ್ರಕಾರ ಶವ ಸಂಸ್ಕಾರ ಮಾಡುವುದು ಕಂಡುಬರುತ್ತದೆ. ಹಿಂದೂ ಧರ್ಮದವರಲ್ಲಿ ಶವವನ್ನು ಇಟ್ಟ ಸ್ಥಳದಲ್ಲಿ ಒಂದು ದೀಪವನ್ನು ಹಚ್ಚಿಡುತ್ತಾರೆ. ಶವ ಸಂಸ್ಕಾರ ಮುಗಿಸಿ ಬಂದವರು ತಮ್ಮ ತಮ್ಮ ಮನೆಗಳಿಗೆ ತೆರಳುವಾಗ ಆ ದೀಪವನ್ನು ನೋಡಿ ಹೋಗುವುದು ಸಂಪ್ರದಾಯ. ಶವ ಸಂಸ್ಕಾರ ಮಾಡಿ ಮನೆಗೆ ಬಂದಾಗ, ಮನೆಯ ಹೊರಗೆ ಸ್ನಾನ ಮಾಡಿ ನಂತರ ಮನೆಯೊಳಕ್ಕೆ ಪ್ರವೇಶಿಸುತ್ತಾರೆ.

### ೩.೭.೧ ತಿಥಿ ಕಾರ್ಯ

ಸಿದ್ದಿಯರಲ್ಲಿ ವ್ಯಕ್ತಿಯು ಸತ್ತ ನಂತರ ಮನೆಯಲ್ಲಿ ಹನ್ನೊಂದು ದಿನದವರೆಗೆ ಸೂತಕವನ್ನಾಚರಿಸುತ್ತಾರೆ. ವ್ಯಕ್ತಿಯನ್ನು ಸುಟ್ಟಿದ್ದರೆ ಅದರ ಬೂದಿಯನ್ನು, ಹೂತಿಟ್ಟಿದ್ದರೆ ಅದರ ಮಣ್ಣನ್ನು ಸಮನಾಗಿ ಗುಂಪೆ ಮಾಡಿ ಮಾರನೆಯ ದಿನದಲ್ಲಿ ಪೂಜೆ ಸಲ್ಲಿಸುತ್ತಾರೆ. ಆದರೆ ಅಂದು ಸೂತಕ ಕಳೆಯುವುದಿಲ್ಲ. ಹನ್ನೊಂದನೆಯ ದಿನ, ದಿವಸ (ದೀಸ್) ಮಾಡಿದಾಗ ಮೈಲಿಗೆ ಹೋಗುತ್ತದೆ. ಹಿಂದೂ ಸಿದ್ದಿಯರಲ್ಲಿ ಸಾವು ಸಂಭವಿಸಿದ ಹತ್ತನೆಯ ದಿನದ ರಾತ್ರಿಯಂದು ಮನೆಯವರ್‍ಯಾರೂ ಊಟವನ್ನು ಮಾಡದೆ ಮಡಿ ಬಟ್ಟೆಯಲ್ಲಿ ಹನ್ನೊಂದನೆಯ ದಿನದ ಕಾರ್ಯಕ್ರಮಕ್ಕೆ ಬೇಕಾದ ಪದಾರ್ಥಗಳನ್ನು ತಯಾರಿಸುತ್ತಾರೆ. ಬ್ರಾಹ್ಮಣರು ಮತ್ತು

ಸಮುದಾಯದ ಹಿರಿಯರನ್ನು ಕರೆದು ಶುದ್ಧ ಶಾಖಾಹಾರದ ನೈವೇದ್ಯವನ್ನು ಮಾಡಲಾಗುತ್ತದೆ. ಆ ಊಟವನ್ನು ಕುಟುಂಬದವರೂ ಸಹ ತಿನ್ನುತ್ತಾರೆ. ಹಗಲು ನಡೆಯುವ ಈ ಕಾರ್ಯಕ್ರಮಕ್ಕೆ ಸಮುದಾಯದವರನ್ನು ಹೆಚ್ಚಾಗಿ ಕರೆಯುವುದಿಲ್ಲ. ಆಯ್ದ ಕೆಲವರನ್ನು ಮಾತ್ರ ಕರೆದಿರುತ್ತಾರೆ. ಆದರೆ ಆ ದಿನ ಸಂಜೆ ಎಡೆಗೆಂದು ಕೋಳಿಯನ್ನು ಕೊಯ್ಯಲಾಗುತ್ತದೆ. ಎಡಗೆ ಕೊಯ್ದ ಕೋಳಿಯನ್ನು ಬಿಟ್ಟು ಇನ್ನುಳಿದಂತೆ ಮಾಂಸಾಹಾರದ ಊಟವನ್ನು ಸಿದ್ದಿಪಡಿಸಿ, ಸಮುದಾಯದವರನ್ನು ಕರೆದು ಊಟ ಹಾಕಲಾಗುತ್ತದೆ. ವ್ಯಕ್ತಿಯು ಮರಣ ಹೊಂದಿ ಒಂದು ವರ್ಷ ಆಗುವವರೆಗೂ ಪ್ರತಿ ತಿಂಗಳು ಮಾಂಸಾಹಾರದ ಎಡೆ ಮಾಡಿ ಸಮುದಾಯದವರಿಗೆ ಊಟ ಹಾಕಬೇಕಾಗುತ್ತದೆ. ಆದರೆ ಸಮುದಾಯದ ಎಲ್ಲರಿಗೆ ಊಟ ಹಾಕಲು ಶಕ್ತಿ ಇಲ್ಲದಿದ್ದರೆ ತಮ್ಮ ಶಕ್ತಾನುಸಾರ ಕೆಲವರಿಗೆ ಮಾತ್ರ ಊಟವನ್ನು ಹಾಕಲಾಗುತ್ತದೆ. ಮರಣ ಹೊಂದಿದ ವರ್ಷಾಂತ್ಯಕ್ಕೆ ಕೆಲವು ಜನರಿಗಾದರೂ ಹೊಸ ಬಟ್ಟೆಗಳನ್ನು ಅಥವಾ ವಸ್ತ್ರಗಳನ್ನು ಹಂಚುವುದು ರೂಡಿಯಲ್ಲಿದೆ. ಮಹಾನವಮಿಯ ದಿನದಂದು ಕಾಗೆಗಳಿಗೆ ಮೀಸಲು ಹಾಕುವ ರೂಡಿಯೂ ಹಿಂದೂ ಸಿದ್ದಿಗಳಲ್ಲಿ ಕಂಡುಬರುತ್ತದೆ.

ಹನ್ನೊಂದನೆಯ ದಿನದ ತಿಥಿ ಕಾರ್ಯ ಮಾಡುವಾಗ ಹಳೆಯ ತೆಂಗಿನ ಕಾಯಿಯನ್ನು ಬದಲಿಸಲಾಗುತ್ತದೆ. ಬದಲಾಗಿ ಆ ಜಾಗದಲ್ಲಿ ಹೊಸ ತೆಂಗಿನಕಾಯಿಯನ್ನು ಇಡಲಾಗುತ್ತದೆ. ಪ್ರತಿ ವರ್ಷ ಹಿರಿಯರ ಆಚರಣೆಯನ್ನು ಮಾಡುತ್ತಾರೆ. ಹಿರಿಯರು ಆ ತೆಂಗಿನಕಾಯಿಯಲ್ಲಿ ನೆಲೆಸಿ ತಮ್ಮ ಕುಟುಂಬವನ್ನು ಯಾವ ದುಷ್ಟ ಶಕ್ತಿಗಳು ಆಕ್ರಮಿಸದಂತೆ, ಮನೆಗೆ ಅಂದರೆ ಕುಟುಂಬದವರಿಗೆ ಯಾವ ಆಪತ್ತೂ ಬರದಂತೆ ನೋಡಿಕೊಳ್ಳುತ್ತಾರೆ ಎಂಬ ಪರಿಕಲ್ಪನೆಯನ್ನು ಹೊಂದಿದ್ದಾರೆ. ಸತ್ತ ಹಿರಿಯರು ಮರುಜನ್ಮ ಪಡೆದು ಮನೆಯಲ್ಲಿಯೇ ಹುಟ್ಟುತ್ತಾರೆ ಎನ್ನುವ ನಂಬಿಕೆಯಿಂದ ಹುಟ್ಟಿದ ಮಕ್ಕಳಿಗೆ ಸತ್ತ ಹಿರಿಯರ ಹೆಸರನ್ನಿಡುವುದು ಕಂಡುಬರುತ್ತದೆ.

ಆದಿವಾಸಿ ಸಮುದಾಯಗಳು ಆಧುನಿಕತೆಯ ಕಡೆಗೆ ಮುಖಮಾಡಿದಂತೆಲ್ಲಾ ಅವರ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆಗಳಲ್ಲಿ ಮಹತ್ತರವಾದ ಬದಲಾವಣೆಗಳಾಗುತ್ತಿವೆ. ಅವರ ಅನೇಕ ಆಚರಣೆಗಳಲ್ಲಿ ಹೊಸತನ ಕಂಡುಬರುತ್ತಿದೆ. ಶವ ಸಂಸ್ಕಾರದ ಆಚರಣೆಯಲ್ಲಿ ಗಣನೀಯವಾದ ಬದಲಾವಣೆಗಳು ಸಂಭವಿಸದಿದ್ದರೂ ಕೆಲವು ಪ್ರಮಾಣದ ಬದಲಾವಣೆಯನ್ನು ಗಮನಿಸಬಹುದಾಗಿದೆ. ಮೊದಲಿಗೆ ಹಿಂದೂ ಸಿದ್ದಿಯರಲ್ಲಿ ಹೆಣವನ್ನು ಹೂಳುವ ಪರಿಪಾಠವಿತ್ತು. ಬ್ರಾಹ್ಮಣರ ಸಂಪರ್ಕ ಜಾಸ್ತಿಯಾದಂತೆಲ್ಲಾ ಅವರ ಆಚರಣೆಗಳು ಪ್ರಭಾವ ಬೀರಿವೆ. ಹಿರಿಯರ ಆಚರಣೆಯನ್ನು ಮಾಡುವಾಗ ಬಂಧು ಬಳಗದವರಿಗೆ ಊಟ ಹಾಕುವುದು ಸತ್ತವರ ಆತ್ಮಕ್ಕೆ ಶಾಂತಿ ಸಿಗುತ್ತದೆ ಎಂಬ ಪರಿಕಲ್ಪನೆ ಇತ್ತು. ಇಂದು ಆ ಭಾವನೆ ಮಾಯವಾಗುತ್ತಿದೆ ಎಂದು ಯಲ್ಲಾಪುರ ಬಸರಿಜಡ್ಡೆಯ ಲಕ್ಷ್ಮಿ ಸಿದ್ದಿಯವರು ತಿಳಿಸುತ್ತಾರೆ.

೩.೮ ಭಾಷೆ

ಸಿದ್ದಿಯರಿಗೆ ತಮ್ಮದೇ ಆದ ನಿರ್ಧಿಷ್ಟ ಭಾಷೆ ಎಂಬುದು ಕಂಡುಬರುವುದಿಲ್ಲ. ಕೊಂಕಣಿ ಇವರ ಪ್ರಮುಖ ಭಾಷೆಯಾಗಿದೆ. ಮರಾಠಿಯೂ ಸಹ ಇವರ ಸಂಪರ್ಕ ಭಾಷೆಗಳಲ್ಲೊಂದಾಗಿದೆ. ಕೊಂಕಣಿ ಮತ್ತು ಮರಾಠಿ ಮಿಶ್ರಿತ ಭಾಷೆಯನ್ನೂ ಸಹ ಮಾತನಾಡುವುದರಿಂದ ಒಂದು ಉಪಭಾಷೆಯೇ ಸೃಷ್ಠಿಯಾದಂತಾಗಿದೆ. ಇವರು ಭಾರತಕ್ಕೆ ಗುಲಾಮರಾಗಿ ಪರಿಚಯವಾದುದು ಈಗಾಗಲೇ ತಿಳಿಯಲಾಗಿದೆ. ಆಫ್ರಿಕಾ ಖಂಡದಿಂದ ಗುಲಾಮರನ್ನಾಗಿ ಎಳೆದು ತಂದು ಗೋವಾದಲ್ಲಿ ಮಾರಾಟ ಮಾಡುತ್ತಿದ್ದರು ಎನ್ನುವುದು ಇತಿಹಾಸದಿಂದ ತಿಳಿದುಬರುತ್ತದೆ. ಗೋವಾದ ಮೂಲ ಭಾಷೆ ಕೊಂಕಣಿ. ಗೋವಾಕ್ಕೆ ಇವರನ್ನು ಕರೆತಂದು ಮಾರಾಟ ಮಾಡಿದಾಗ ಅಲ್ಲಿಯ ಭಾಷೆ ಇವರಿಗೆ ಸಂಪರ್ಕ ಭಾಷೆಯಾಗಿರಬಹುದು. ಮಹಾರಾಷ್ಟ್ರದಲ್ಲಿ ಮರಾಠಿಗರ ಸಂಪರ್ಕ ಬಂದ ಮೇಲೆ ಮರಾಠಿಯೂ ಸಹ ಇವರ ಸಂಪರ್ಕ ಭಾಷೆಯಾಗಿರಬಹುದು. ಗುಲಾಮರಾಗಿದ್ದ ಸಿದ್ದಿಯರು ಮಾಲಿಕರ ಹಿಂಸೆಯನ್ನು ತಡೆಯಲಾರದೆ ತಪ್ಪಿಸಿಕೊಂಡು ಕರಾವಳಿಯ ಉತ್ತರ ಕನ್ನಡಕ್ಕೆ ಬಂದಿದ್ದಾರೆ. ಇಲ್ಲಿ ಹವ್ಯಕ ಬ್ರಾಹ್ಮಣ ಮತ್ತು ಇತರೆ ಸಮುದಾಯಗಳ ಸಂಪರ್ಕದಿಂದಾಗಿ ಕನ್ನಡ ಮಾತನಾಡತೊಡಗಿದರು.

ಸಿದ್ದಿಯರು ಮೂರು ಧರ್ಮಗಳಲ್ಲಿ ಹಂಚಿಹೋಗಿದ್ದಾರೆ. ಸಿದ್ದಿಯರನ್ನು ಹಿಂದೂ ಧರ್ಮದವನು ಕೊಂಡುಕೊಂಡಾಗ ಹಿಂದೂ ಧರ್ಮದ ಮಾಲಿಕನ ಪ್ರಭಾವವಾಗಿದೆ. ಮುಸ್ಲಿಂ ಧರ್ಮದ ವ್ಯಕ್ತಿಯು ಸಿದ್ದಿಯನ್ನು ಗುಲಾಮನನ್ನಾಗಿ ಪಡೆದುಕೊಂಡಾಗ ಈ ಗುಲಾಮನಿಗೆ ಇಸ್ಲಾಂ ಧರ್ಮದ ಉರ್ದು ಭಾಷೆ ಸಂಪರ್ಕ ಭಾಷೆಯಾಗಿದೆ. ಹೀಗೆ ಯಾವ ಯಾವ ಧರ್ಮದವರು ಯಾವ ಯಾವ ಪ್ರಮುಖ ಭಾಷೆಯವರು ಸಿದ್ದಿಯರನ್ನು ಕೊಂಡುಕೊಂಡಿದ್ದಾರೆಯೋ ಆ ಭಾಷೆ ಇವರಲ್ಲಿ ರೂಢಿಗತವಾಗಿರಬಹುದು. ಹಿಂದೂ ಧರ್ಮದ ಸಿದ್ದಿಯರು ಕನ್ನಡ, ಕೊಂಕಣಿ ಮತ್ತು ಮರಾಠಿಯನ್ನು ಮಾತನಾಡುತ್ತಾರೆ. ಕ್ರಿಶ್ಚಿಯನ್ ಧರ್ಮದ ಸಿದ್ದಿಯರೂ ಸಹ ಕೊಂಕಣಿ, ಮರಾಠಿ ಮತ್ತು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಮುಸ್ಲಿಂ ಸಿದ್ದಿಗಳು ಉರ್ದು, ಹಿಂದಿ ಮತ್ತು ಕನ್ನಡವನ್ನು ಮಾಡನಾಡುತ್ತಾರೆ. ಇನ್ನುಳಿದಂತೆ ಹಿಂದೂ ಮತ್ತು ಕ್ರಿಶ್ಚಿಯನ್ ಸಿದ್ದಿಯರು ಹಿಂದಿಯನ್ನೂ ಮುಸ್ಲಿಂ ಸಿದ್ದಿಯರು ಕೊಂಕಣಿಯನ್ನು ಮಾತನಾಡಿದರೂ, ಮೇಲಿನ ರೀತಿಯ ಭಾಷೆಗಳು ಅವರ ಪ್ರಮುಖ ಸಂಪರ್ಕ ಭಾಷೆಗಳಾಗಿವೆ.

ಸಿದ್ದಿಯರು ಕೊಂಕಣಿ, ಮರಾಠಿ, ಉರ್ದು, ಹಿಂದಿ, ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಆದರೆ ಈ ಭಾಷೆಗಳ ಲಿಪಿಗಳು ಅವರಿಗೆ ತಿಳಿದಿಲ್ಲ. ಕಾರಣ

ಸಮುದಾಯದವರಲ್ಲಿ ಬಹುಪಾಲು ಜನರು ಅನಕ್ಷರಸ್ಥರಿದ್ದಾರೆ. ಆದರೆ ಇತ್ತೀಚೆಗೆ ಸಮುದಾಯದ ಹಲವಾರು ಮಕ್ಕಳು ಶಿಕ್ಷಣವನ್ನು ಪಡೆಯುತ್ತಿರುವುದರಿಂದ ಕನ್ನಡ ಭಾಷೆಯ ಲಿಪಿ ಮಾತ್ರ ತಿಳಿದಿರಬಹುದಾದ ಸಾಧ್ಯತೆ ಇದೆ. ಹಳೆಯ ಕಾಲದ ಅಂದರೆ ಹಿರಿಯ ಕೆಲವು ವಯಸ್ಕರಿಗೆ ಇಂದಿಗೂ ಕನ್ನಡ ಮಾತನಾಡಲು ಬರುವುದಿಲ್ಲ. ಕರ್ನಾಟಕದಲ್ಲಿ ನೆಲೆಸಿದ್ದರೂ ಸಮುದಾಯದ ಹೆಚ್ಚಿನವರು ಕೊಂಕಣಿ ಮತ್ತು ಉರ್ದು ಭಾಷೆಯನ್ನು ನೀರು ಕುಡಿದಂತೆ ಸುಲಭವಾಗಿ ಮಾತನಾಡುತ್ತಾರೆ. ಯುವ ಪೀಳಿಗೆ ಕನ್ನಡವನ್ನು ಸುಲಭವಾಗಿ ಮಾತನಾಡುತ್ತಾರೆ. ಇವರು ಹಲವಾರು ಭಾಷೆಗಳನ್ನು ಮಾತನಾಡಿದರೂ ಸಹ ಈ ಮೂರೂ ಸಮುದಾಯದಲ್ಲಿ ಭಾಷಾಂಧತೆ ಎನ್ನುವುದು ಕಂಡುಬರುವುದಿಲ್ಲ. ಕೊಂಕಣಿ, ಮರಾಠಿ, ಕನ್ನಡ ಮಿಶ್ರಿತ ಸಿದ್ದಿ ಉಪಭಾಷೆ ನಿರ್ಮಾಣವಾಗಿದೆ ಎಂದು ಹೇಳಬೇಕಾಗುತ್ತದೆ. ಹಲವಾರು ಭಾಷೆಗಳನ್ನು ಮಿಶ್ರ ಮಾಡಿ ಮಾತನಾಡುವ ಇವರ ಭಾಷೆಯನ್ನು ಸಮುದಾಯದ ಹಲವರು ಸಿದ್ದಿ ಭಾಷೆಯೆಂದು ಕರೆದಿದ್ದಾರೆ. ಈ ಭಾಷೆ ಕೇವಲ ಸಿದ್ದಿಯರಿಗೆ ಮಾತ್ರ ಅರ್ಥವಾಗುವಂತಿದೆ. ಇದಕ್ಕೆ ಲಿಪಿಯಿಲ್ಲ. ಪ್ರಸ್ತುತ ಸಮಾಜಕ್ಕೆ ಈ ಸಮುದಾಯವು ಭಾಷೆಯ ವಿಷಯದಲ್ಲಿ ಮಾದರಿಯಾಗಬೇಕಿದೆ.

ಮಾತೃಭಾಷೆಯನ್ನಾಗಿ ಬಳಸುವ ತಿಳಿಸಿದ ಸಿದ್ದಿ ಸಮುದಾಯದ ಕುಟುಂಬಗಳ ವಿವರಣೆಯನ್ನು ಈ ಕೆಳಗಿನಂತೆ ತಿಳಿಯಬಹುದು.

| ಕ್ರಸಂ. | ಮಾತೃಭಾಷೆ | ಒಟ್ಟು ಕುಟುಂಬಗಳು (ಸಂಖ್ಯೆಗಳಲ್ಲಿ) | ಶೇಕಡಾವಾರು (%) |
|---|---|---|---|
| ೧ | ಕೊಂಕಣಿ | ೧೨೧೭ | ೫೩.೪೨ |
| ೨ | ಮರಾಠಿ | ೨೪೮ | ೧೦.೮೮ |
| ೩ | ಉರ್ದು | ೬೮೭ | ೩೦.೧೫ |
| ೪ | ಹಿಂದಿ | ೨೪ | ೧.೦೫ |
| ೫ | ಕನ್ನಡ | ೭೭ | ೩.೩೮ |
| ೬ | ಸಿದ್ದಿ ಭಾಷೆ | ೨೫ | ೧.೦೯ |
| | **ಒಟ್ಟು** | **೨೨೭೮** | ೧೦೦ |

ಇವರದು ಕೊಂಕಣಿ ಮುಖ್ಯಭಾಷೆಯಾಗಿದೆ ಎಂಬುದು ಅಂಕಿ ಅಂಶಗಳ ಮೂಲಕ ಸ್ಪಷ್ಟವಾಗುತ್ತದೆ. ಶೇ. ೫೩.೪೨ ರಷ್ಟು ಕುಟುಂಬಗಳು ಕೊಂಕಣಿಯನ್ನು ತಮ್ಮ ಮಾತೃಭಾಷೆಯೆಂದು ತಿಳಿಸಿವೆ. ಇನ್ನುಳಿದಂತೆ ಮರಾಠಿ ಶೇ. ೧೦.೮೮, ಉರ್ದು ಶೇ. ೩೦.೧೫ ರಷ್ಟು, ಹಿಂದಿ ಶೇ. ೧.೦೫ ರಷ್ಟು, ಕನ್ನಡ ಶೇ. ೩.೩೮ ರಷ್ಟು, ಮರಾಠಿ ಮಿಶ್ರಿತ ಕೊಂಕಣಿಯನ್ನು ಸಿದ್ದಿ ಭಾಷೆ ಎನ್ನಲಾಗಿದೆ. ಇದನ್ನು ಶೇ. ೧.೦೯ ರಷ್ಟು ಕುಟುಂಬಗಳು ತಮ್ಮ

ಮಾತೃಭಾಷೆಯೆಂದು ತಿಳಿಸಿವೆ. ಇವರು ತಮ್ಮ ಮೂಲ ಭಾಷೆಯನ್ನು ಬಿಟ್ಟು ತಮ್ಮನ್ನು ಕೊಂಡುಕೊಂಡ ಮಾಲಿಕರುಗಳ ಧರ್ಮದ ಭಾಷೆ ಮತ್ತು ಸ್ಥಳೀಯ ಭಾಷೆಗಳು ಇವರ ಮೇಲೆ ಪ್ರಮುಖ ಪ್ರಭಾವ ಬೀರಿವೆ ಎಂಬುದು ತಿಳಿಯುತ್ತದೆ.

ಸಿದ್ದಿಯರು ಮಾತನಾಡುವ ಭಾಷೆಯ ತಾಲೂಕುವಾರು ಗ್ರಾಮಗಳ ವಿವರವನ್ನು ಅಂಕಿ ಅಂಶಗಳ ಪಟ್ಟಿ - ೨ ರಲ್ಲಿ ಗಮನಿಸಿ.

**೩.೯ ಕೌಟುಂಬಿಕ ವ್ಯವಸ್ಥೆ**

ಕುಟುಂಬವು ಸಮಾಜದ ಸದೃಢ ಮತ್ತು ಅತ್ಯಂತ ಚಿಕ್ಕ ಘಟಕವಾಗಿದೆ. ಕುಟುಂಬವು ಸಮಾಜದ ಒಂದು ಸಂಘವಾಗಿ ಮತ್ತು ಸಂಸ್ಥೆಯಾಗಿ ಕಾರ್ಯವನ್ನು ನಿರ್ವಹಿಸುತ್ತದೆ. ಸಮಾಜದಲ್ಲಿ ವ್ಯಕ್ತಿಯು ನಿಜಮಾನವನಾಗಿ ಬಾಳುವಲ್ಲಿ ಕುಟುಂಬವು ಮಹತ್ವದ ಪಾತ್ರವನ್ನು ವಹಿಸುತ್ತದೆ. ಹುಟ್ಟಿದ ಮಗುವಿನ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಅಗ್ರಗಣ್ಯ ಸ್ಥಾನವನ್ನು ಹೊಂದಿದೆ. ವ್ಯಕ್ತಿಯು ಸಮಾಜದಲ್ಲಿ ಜವಾಬ್ದಾರಿಯುತ ಮಾನವನಾಗಿ ರೂಪುಗೊಳ್ಳುವಲ್ಲಿ ಕುಟುಂಬದ ಪಾತ್ರ ಅಷ್ಟಿಷ್ಟಲ್ಲ. ಒಂದು ಸಮುದಾಯದ ಅಧ್ಯಯನ ಮಾಡಬೇಕಾದರೆ ಮೊದಲು ಕುಟುಂಬದ ಅಧ್ಯಯನವನ್ನು ಮಾಡಿದಾಗ ಮಾತ್ರ ಸಮರ್ಪಕವಾದ ಮಾಹಿತಿಯನ್ನು ಹೊರಗೆಡವಲು ಸಾಧ್ಯವಾಗುತ್ತದೆ. ಆದ್ದರಿಂದ ನನ್ನ ಈ ಅಧ್ಯಯನದಲ್ಲಿ ಸಿದ್ದಿಯರ ಪ್ರತಿ ಕುಟುಂಬದ ಕೌಟುಂಬಿಕ ಸಮೀಕ್ಷೆಯನ್ನು ಮಾಡಲಾಗಿದೆ. ಇದರ ಮೂಲಕ ಅವರ ಸಾಮಾಜಿಕ ಜೀವನವನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಾಗುತ್ತಿದೆ.

ಕುಟುಂಬದ ರಚನೆ ಇಲ್ಲದ ಸಮಾಜವಿಲ್ಲ. ಇದು ಮಾನವ ಜೀವನದ ತಳಹದಿಯಾಗಿದೆ. ಕುಟುಂಬ ಮಗುವಿನ ಮೊದಲ ಪಾಠಶಾಲೆ, ತಾಯಿ ಮೊದಲ ಗುರು ಎಂಬ ನಾಣ್ಣುಡಿಯಿದೆ. ಮಗು ಕುಟುಂಬದಿಂದಲೇ ಸಂಸ್ಕಾರವನ್ನು ಪಡೆದು ಉತ್ತಮ ಪ್ರಜೆಯಾಗಿ ರೂಪಗೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಕುಟುಂಬಕ್ಕೆ ಸರಿಸಮಾನವಾದ ವ್ಯವಸ್ಥೆ ಇಂದಿಗೂ ರಚನೆಯಾಗಿಲ್ಲ. 'ನನ್ನ ಜೀವನದ ಅತ್ಯಂತ ಆನಂದದಾಯಕ ಕ್ಷಣಗಳನ್ನು ನಾನು ನನ್ನ ಕುಟುಂಬದ ಮಡಿಲಿನಲ್ಲಿ ಮಾತ್ರ ಕಳೆದಿದ್ದೇನೆ' ಎನ್ನುವ ಅಭಿಪ್ರಾಯವನ್ನು ಮಾರ್ಕ್ ಜೆಫರ್‌ಸನ್ ತಿಳಿಸುತ್ತಾರೆ. ಅಂದರೆ ಕುಟುಂಬವು ಸ್ವರ್ಗಕ್ಕಿಂತ ಮಿಗಿಲಾದ ಸಂತೋಷವನ್ನು ನೀಡುತ್ತದೆ ಎನ್ನುವ ಅರ್ಥವನ್ನು ಗ್ರಹಿಸಬಹುದಾಗಿದೆ. ಸಾವಿರಾರು ವರ್ಷಗಳ ಕಾಲದಿಂದಲೂ ಕುಟುಂಬ ಅಸ್ಥಿತ್ವದಲ್ಲಿದೆ. 'ನಮ್ಮ ಭ್ರಮಾಲೋಕದಲ್ಲಿ ಅಥವಾ ನಮ್ಮ ಕಲ್ಪನೆಯ ಸ್ವರ್ಗದಲ್ಲಿ ಕುಟುಂಬಗಳಿಲ್ಲದಿರಬಹುದು. ಆದರೆ ನಮ್ಮ ಪ್ರತ್ಯಕ್ಷ ಅನುಭವದಲ್ಲಿರುವ ಭೂಮಿ ಎಂಬ ಗ್ರಹದಲ್ಲಿ ಮಾತ್ರ ಎಲ್ಲೆಡೆಗಳಲ್ಲಿಯೂ ಕುಟುಂಬಗಳಿವೆ.' ಎನ್ನುವ ಅಭಿಪ್ರಾಯವನ್ನು ರಾಬರ್ಟ್ ಬೈರ್‌ಸ್ಪಡ್‌ರವರು ತಿಳಿಸುತ್ತಾರೆ. ಕುಟುಂಬವಿಲ್ಲದೆ ಸಮಾಜವಿಲ್ಲ ಎನ್ನುವುದು

ಸ್ಪಷ್ಟವಾಗುತ್ತದೆ. ಮೆಕೈವರ್ ಮತ್ತು ಪೇಜ್‌ರವರು 'ಸಂತತಿಯ ಉತ್ಪತ್ತಿ ಮತ್ತು ಶಿಶುಗಳ ಪಾಲನೆ ಪೋಷಣೆಯ ಕಾರ್ಯಗಳನ್ನು ನಿರ್ವಹಿಸುವುದರ ಸಲುವಾಗಿ ಲೈಂಗಿಕ ಸಂಬಂಧದ ಆಧಾರದ ಮೇಲೆ ರಚಿತವಾದ, ಸಾಕಷ್ಟು ಖಚಿತವಾದ ಮತ್ತು ದೀರ್ಘ ಕಾಲ ಬಾಳುವ ಸಮೂಹವೇ ಕುಟುಂಬ' ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಅಧಿಕಾರದ ಆಧಾರದ ಮೇಲೆ ಕುಟುಂಬವನ್ನು ಎರಡು ಪ್ರಕಾರಗಳಲ್ಲಿ ವರ್ಗೀಕರಿಸಲಾಗುತ್ತದೆ. ಅವುಗಳೆಂದರೆ ಪಿತೃಪ್ರಧಾನ ಕುಟುಂಬ ಮತ್ತು ಮಾತೃಪ್ರಧಾನ ಕುಟುಂಬ. ಸಿದ್ದಿಯರಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಇದೆ. ಪಿತೃಪ್ರಧಾನ ಕುಟುಂಬ ಎಂದ ಕೂಡಲೇ ಸ್ತ್ರೀಯರನ್ನು ನಗಣ್ಯವಾಗಿ ಕಾಣುತ್ತಾರೆ ಎನ್ನುವಂತಿಲ್ಲ. ಸಮುದಾಯದಲ್ಲಿ ಸ್ತ್ರೀ ಪುರುಷರು ಸಮಾನರು. ಸಿದ್ದಿಯರು ಬಡತನದ ಬೇಗೆಯಲ್ಲಿ ಬೇಯುತ್ತಿದ್ದಾರೆ. ಅಂದಿನ ದಿನದ ಕೂಲಿಯನ್ನು ನೆಚ್ಚಿಕೊಂಡು ಜೀವನ ನಡೆಸುವ ಪರಿಸ್ಥಿತಿ ಇದೆ. ಕುಟುಂಬದಲ್ಲಿನ ಸ್ತ್ರೀಪುರುಷರಿಬ್ಬರೂ ಕೂಲಿ ಮಾಡುತ್ತಾರೆ. ಅಂದಾಗ ಕುಟುಂಬದ ಬೇಕು-ಬೇಡಗಳು ಮತ್ತು ಕುಟುಂಬವನ್ನು ಸಲಹುವ ಜವಾಬ್ದಾರಿ ಇಬ್ಬರ ಮೇಲೂ ಇರುವುದರಿಂದ ಸ್ತ್ರೀ-ಪುರುಷರು ಸಮಾನರು ಎಂದು ಹೇಳಬಹುದು. ಕುಟುಂಬದ ವ್ಯವಹಾರಗಳನ್ನು ಅಂದರೆ ಕೊಡುವ ಮತ್ತು ತೆಗೆದುಕೊಳ್ಳುವ ವ್ಯವಹಾರದಲ್ಲಿ ಪ್ರಮುಖ ಪಾತ್ರ ಪುರುಷನದು. ಮಕ್ಕಳು ಸ್ವಲ್ಪ ದೊಡ್ಡವರಾಗುವವರೆಗೆ ಶಾಲೆಗೆ ಕಳುಹಿಸುತ್ತಾರೆ. ಸ್ವಲ್ಪ ದೊಡ್ಡವರಾದ ನಂತರ ಶಾಲೆಯನ್ನು ಬಿಡಿಸಿ ಹವ್ಯಕ ಬ್ರಾಹ್ಮಣರ, ಹೆಗಡೆಯವರ ಅಥವಾ ಭೂಮಾಲಿಕರ ತೋಟ ಅಥವಾ ಮನೆಯಲ್ಲಿ ದುಡಿಯಲು ಬಿಡುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ.

ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳು ಕಂಡುಬರುವುದು ವಿರಳ. ಅಂದರೆ ಇವರದು ಕೂಡು ಕುಟುಂಬ ಎನ್ನುವಂತಿಲ್ಲ. ಮೂಲ ಕುಟುಂಬದಿಂದ ಇತರೆ ಕುಟುಂಬಗಳ ನಿರ್ಮಾಣ ವ್ಯವಸ್ಥೆ ಇದೆ. ಇವರ ಕುಟುಂಬಗಳಲ್ಲಿ ಎರಡು ವಿಧಗಳು. ಅವುಗಳೆಂದರೆ ಮೂಲ ಕುಟುಂಬ (ಘರ್) ಮತ್ತು ಬಿಡಾರ. ಮೂಲ ಕುಟುಂಬದಲ್ಲಿರುವ ವ್ಯಕ್ತಿಯು ಮದುವೆಯಾದ ನಂತರ ಬೇರೆಯಾಗಿ ಹೊಸ ಕುಟುಂಬದಲ್ಲಿ ವಾಸಿಸುತ್ತಾನೆ. ಇದನ್ನು ಬಿಡಾರ ಎಂದು ಕರೆಯಲಾಗುತ್ತದೆ. ಮದುವೆಯಾದ ಕೂಡಲೇ ನವ ವದು-ವರರಿಗೆ ಸ್ವಾತಂತ್ರ್ಯವನ್ನು ಕೊಡುವುದು ಮತ್ತು ಕುಟುಂಬದ ಜವಾಬ್ದಾರಿಯನ್ನು ಹೊರಿಸುವುದರ ಸಲುವಾಗಿ ಈ ವ್ಯವಸ್ಥೆ ಸಿದ್ದಿಯರಲ್ಲಿದೆ. ವಿವಾಹ ಮಾಡಿಕೊಂಡು ನಂತರ ವ್ಯಕ್ತಿಯು ತನಗೆ ಬರಬೇಕಾದ ಆಸ್ತಿಯನ್ನು ತೆಗೆದುಕೊಂಡು ಬೇರೆ ಮನೆ ಮಾಡಿಕೊಳ್ಳುತ್ತಾನೆ. ಇವರಿಗೆ ತುಂಡು ಭೂಮಿಯ ಆಸ್ತಿಯು ಇಲ್ಲದಿದ್ದರೂ ಹೊಟ್ಟೆ ಪಾಡಿಗಾಗಿ ಯಾವುದಾದರೂ ಆರ್ಥಿಕ ಚಟುವಟಿಕೆಯಲ್ಲಿ ತೊಡಗಿಕೊಳ್ಳುತ್ತಾನೆ. ಬಿಡಾರದಲ್ಲಿ ಸಂಸಾರ ಹೂಡಿದ ವ್ಯಕ್ತಿಯು ತನ್ನ ಹೆಂಡತಿ ಮತ್ತು

ಮಕ್ಕಳನ್ನು ಸಲಹುವ ಜವಾಬ್ದಾರಿಯನ್ನು ಹೊಂದಿರುತ್ತಾನೆ. ಬಿಡಾರದಲ್ಲಿ ಜೀವನ ಹೂಡಿದ ಇವನಿಗೆ ತಂದೆ ತಾಯಿಗಳು ಇರುವ ಮೂಲ ಮನೆ ಘರ್ ಆಗುತ್ತದೆ. ಮೂಲ ಮನೆಯಲ್ಲಿ ಯಾವುದಾದರೂ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದಾಗ ಕುಟುಂಬದ ಎಲ್ಲಾ ಸದಸ್ಯರು ಒಂದುಗೂಡಿ ಆಚರಿಸುವುದು ಇವರ ಮತ್ತೊಂದು ವಿಶೇಷ. ಬಿಡಾರದಲ್ಲಿ ಸಂಸಾರ ಹೂಡಿದವರು ಮೂಲ ಕುಟುಂಬದ ಕಾರ್ಯಕ್ರಮಗಳಿಗೆ ತಪ್ಪದೇ ಹಾಜರಾಗುತ್ತಾರೆ. ಅನಿವಾರ್ಯ ಸಮಯ ಬಂದಾಗ ಮಾತ್ರ ಮೂಲ ಕುಟುಂಬ ಬಿಡಾರವನ್ನು, ಬಿಡಾರವು ಮೂಲ ಕುಟುಂಬವನ್ನು ಅವಲಂಬಿಸುತ್ತದೆ. ಮೂಲ ಕುಟುಂಬ ಮತ್ತು ಬಿಡಾರಗಳಿಗೆ ತನ್ನದೇ ಆದ ವೈಶಿಷ್ಟ್ಯತೆ ಇದೆ. ಮೂಲ ಕುಟುಂಬಗಳಲ್ಲಿ ಹಿರಿಯರನ್ನು ಪೂಜಿಸಲಾಗುತ್ತದೆ. ಬಿಡಾರದಲ್ಲಿ ಸಂಸಾರ ಹೂಡಿದ ವ್ಯಕ್ತಿಯು ಮಕ್ಕಳಾಗುವುದಕ್ಕೆ ಮುಂಚೆ ಮರಣ ಹೊಂದಿದ್ದರೆ ಅಲ್ಲಿ ಹಿರಿಯರನ್ನು ಪೂಜಿಸಲು ಬರುವುದಿಲ್ಲ. ಅದು ಹೆಚ್ಚಾನುಹೆಚ್ಚು ಬಿಡಾರವಾಗಿಯೇ ಉಳಿದುಕೊಂಡು ಬಿಡುತ್ತದೆ. ಬಿಡಾರದಲ್ಲಿ ಸಂಸಾರ ಹೂಡಿದ ವ್ಯಕ್ತಿಗೆ ಮಕ್ಕಳಾದಾಗ ಅವನು ಮರಣ ಹೊಂದಿದರೆ ಆ ಮನೆಯಲ್ಲಿ ಹಿರಿಯರ ಪೂಜೆಯ ಆಚರಣೆ ಜಾರಿಗೆ ಬರುತ್ತದೆ. ಇಲ್ಲಿಯವರೆಗೆ ಬಿಡಾರ ಎನಿಸಿಕೊಂಡದ್ದು ಘರ್ ಅಥವಾ ಮೂಲ ಕುಟುಂಬವಾಗಿ ರೂಪುಗೊಳ್ಳುತ್ತದೆ. ಬಿಡಾರದಲ್ಲಿ ಸಂಸಾರ ಹೂಡಿರುವ ವ್ಯಕ್ತಿಗಳಿಂದ ಒಂದು ತಲೆಮಾರು ಸೃಷ್ಟಿಯಾದರೆ ಮಾತ್ರ ಇವರು ಹಿರಿಯರೆನಿಸಿಕೊಳ್ಳುತ್ತಾರೆ. ಮೂಲ ಕುಟುಂಬದಲ್ಲಿ ಹಿರಿಯರ ಸ್ಥಳದ ಹತ್ತಿರ ಮನೆಯವರನ್ನು ಹೊರತುಪಡಿಸಿ ಅನ್ಯರಿಗೆ ಆ ಸ್ಥಳಕ್ಕೆ ಹೋಗುವುದಕ್ಕೆ ಅವಕಾಶವಿರುವುದಿಲ್ಲ. ಮೂಲ ಕುಟುಂಬದಲ್ಲಿ ಹಿರಿಯರ ಆಚರಣೆಯಿರುವುದರಿಂದ ಯಾವುದೇ ರೀತಿಯ ಮೈಲಿಗೆಯಾಗದಂತೆ ಎಚ್ಚರಿಕೆ ವಹಿಸಲಾಗುತ್ತದೆ. ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಕುಟುಂಬದ ಏಳಿಗೆಗಾಗಿ ಶ್ರಮಿಸುತ್ತಾರೆ. ಅಲ್ಲದೆ ಹಿರಿಯರಿಗೆ ಯಾವ ಅಪಚಾರವಾಗದಂತೆ ಮುಂಜಾಗೃತೆಯನ್ನು ವಹಿಸುತ್ತಾರೆ.

ಸಿದ್ದಿಯರ ಕುಟುಂಬದಲ್ಲಿ ಯಜಮಾನನು ಪರಮಾಧಿಕಾರವನ್ನು ಹೊಂದಿರುತ್ತಾನೆ. "ಅವಿಭಕ್ತ ಕುಟುಂಬದಲ್ಲಿ ಹಿರಿಯ ಸದಸ್ಯನೇ ಮನೆಯ ಯಜಮಾನನಾಗಿದ್ದು, ಕರ್ತ ಎನಿಸುವನು. ಅವನಲ್ಲಿ ಅಧಿಕಾರ ಕೇಂದ್ರೀಕೃತವಾಗಿರುತ್ತದೆ. ಅವನ ಮಾತಿಗೆ ಹೆಚ್ಚು ಬೆಲೆ ಇರುತ್ತದೆ. ಅವನದೇ ಅಂತಿಮ ತೀರ್ಮಾನವಾಗಿರುವುದು."[೬] ಆದರೆ ಕೆಲವು ಸಂದರ್ಭಗಳಲ್ಲಿ ಕುಟುಂಬದ ಇತರೆ ಸದಸ್ಯರ ಅಭಿಪ್ರಾಯಗಳು ಮನ್ನಣೆಯನ್ನು ಪಡೆಯುತ್ತವೆ. ಕೆಲವು ಸಂದರ್ಭಗಳಲ್ಲಿ ಬೇಕು ಬೇಡಗಳನ್ನು ಕುಟುಂಬದ ಎಲ್ಲಾ ಸದಸ್ಯರು ಸೇರಿ ತೀರ್ಮಾನ ತೆಗೆದುಕೊಳ್ಳುತ್ತಾರೆ. ಆದರೆ ಯಜಮಾನನದೇ ಅಂತಿಮ ತೀರ್ಪು. ಹಬ್ಬ, ಮದುವೆ, ಮುಂಜಿ,

ವ್ಯವಹಾರ ಎಲ್ಲವೂ ಕುಟುಂಬದ ಯಜಮಾನನ ಅಪ್ಪಣೆಯ ಮೇರೆಗೆ ನಿರ್ಧರಿತವಾಗುವುದು ಕಂಡುಬರುತ್ತದೆ.

ಇವರು ವಾಸವಾಗಿರುವ ಪ್ರತಿ ಗ್ರಾಮಕ್ಕೂ ಸಮುದಾಯದ ಕೂಟವಿರುತ್ತದೆ. ಈ ಕೂಟಕ್ಕೆ ಸಿದ್ದಿಯರ ಪ್ರತಿ ಮನೆಯ ಯಜಮಾನ ಸದಸ್ಯನಾಗಿರುತ್ತಾನೆ. ಅಲ್ಲೊಂದು ಇಲ್ಲೊಂದು ಚದುರಿದ ಮನೆಗಳು ಇರುವ ನಾಲ್ಕಾರು ಗ್ರಾಮಗಳು ಸೇರಿ ಸಿದ್ದಿಯರು ಕೂಟವನ್ನು ರಚಿಸಿಕೊಂಡಿದ್ದಾರೆ.

ಕೌಟುಂಬಿಕ ವ್ಯವಸ್ಥೆಯಲ್ಲಿ ಹೇಳಿಕೊಳ್ಳುವಂತಹ ಗಂಭೀರವಾದ ಬದಲಾವಣೆಗಳೇನೂ ಕಂಡುಬರುವುದಿಲ್ಲ. ಮನೆಯ ಯಜಮಾನ ತಪ್ಪು ನಿರ್ಧಾರ ತೆಗೆದುಕೊಂಡಾಗ ಕುಟುಂಬದ ಸದಸ್ಯರು ವಿರೋಧಿಸುವುದು ಇತ್ತೀಚೆಗೆ ಕಂಡುಬರುತ್ತಿದೆ. ಇಂದು ಹೆಚ್ಚಿನ ಸಿದ್ದಿಯರು ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿರುವುದು ಅಂಕಿ ಅಂಶದಿಂದ ತಿಳಿದುಬರುತ್ತದೆ. ಆದರೆ ಈ ವ್ಯವಸ್ಥೆಯಲ್ಲಿ ಇನ್ನೂ ಹೆಚ್ಚಿನ ಪ್ರಮಾಣದ ಸುಧಾರಣೆಯಾಗಬೇಕಿದೆ.

**೩.೧೦ ಉತ್ತರಾಧಿಕಾರತ್ವ**

ಹಿಂದೂ ಕುಟುಂಬಗಳಂತೆ ಉತ್ತರಾಧಿಕಾರ ವ್ಯವಸ್ಥೆ ಇದ್ದರೂ ಅಷ್ಟೊಂದು ಮಹತ್ವವನ್ನು ಪಡೆದುಕೊಂಡಿಲ್ಲ. ಕುಟುಂಬದ ವ್ಯಕ್ತಿಯು ವಿವಾಹವಾದ ನಂತರ ಪ್ರತ್ಯೇಕವಾಗಿ ವಾಸ ಮಾಡುವ ಪದ್ಧತಿಯಿದೆ. ಮದುವೆಯಾದ ಮೂಲ ಮನೆಯಿಂದ ಹೊರಗೆ ಹೋಗಬೇಕಾದರೆ ತನ್ನ ಪಾಲಿನ ತುಂಡು ಭೂಮಿಯನ್ನು ಅಥವಾ ಆಸ್ತಿಯನ್ನು ತೆಗೆದುಕೊಂಡು ಹೋಗಿರುತ್ತಾನೆ. ಅಂದ ಮೇಲೆ ಮೂಲ ಕುಟುಂಬದ ಜವಾಬ್ದಾರಿಯಿಂದ ಕಳಚಿಕೊಂಡಂತಾಗಿರುತ್ತದೆ. ಮನೆಯಲ್ಲಿ ಮಕ್ಕಳು ಇಲ್ಲದಿದ್ದರೆ ಅಥವಾ ಅಪ್ರಾಪ್ತ ವಯಸ್ಕರಾಗಿದ್ದರೆ ತಾಯಿಯು ಅಂದರೆ ಸತ್ತ ಯಜಮಾನನ ಹೆಂಡತಿಯು ಯಜಮಾನಿಕೆಯನ್ನು ವಹಿಸಿಕೊಳ್ಳುತ್ತಾಳೆ. ಕೊನೆಯಲ್ಲಿ ಮದುವೆಯಾಗುವ ಮಗ ಹೆಚ್ಚಾನುಹೆಚ್ಚು ಮೂಲ ಕುಟುಂಬದಲ್ಲಿ ಉಳಿಯುತ್ತಾನೆ. ಚಿಕ್ಕ ಮಗನು ಕೊನೆಯಲ್ಲಿ ವಿವಾಹವಾಗಿ ಮೂಲ ಕುಟುಂಬದಲ್ಲಿ ಉಳಿಯುವುದರಿಂದ ತಂದೆ ಸತ್ತ ನಂತರ ಯಜಮಾನಿಕೆ ಅವನ ಕೈಗೆ ಬರುತ್ತದೆ. ಮಕ್ಕಳಾಗಿಲ್ಲದಿದ್ದರೆ ಯಜಮಾನನ ಅಣ್ಣ ಅಥವಾ ತಮ್ಮನ ಮಗನನ್ನು ದತ್ತು ತೆಗೆದುಕೊಂಡು ಸಾಕುವುದು ಅಪರೂಪವಾಗಿ ಕಂಡುಬರುತ್ತದೆ.

ಮುಸ್ಲಿಂ ಮತ್ತು ಕ್ರಿಶ್ಚಿಯನ್ ಸಮುದಾಯಗಳಲ್ಲಿಯೂ ಸಹ ಯಜಮಾನನ ಕೈಯಲ್ಲಿ ಅಧಿಕಾರ ಕೇಂದ್ರೀಕೃತವಾಗಿರುತ್ತದೆ. ಯಜಮಾನ ಮರಣ ಹೊಂದಿದ ನಂತರ ಅವನ ಹಿರಿಯ ಮಗ ಯಜಮಾನಿಕೆಯನ್ನು ವಹಿಸಿಕೊಳ್ಳುವುದು ವಾಡಿಕೆ. ಮೊದಲೇ ತಿಳಿಸಿದಂತೆ ಸಿದ್ದಿಯರಲ್ಲಿ

ಉತ್ತರಾಧಿಕಾರತ್ವ ಮಹತ್ವವನ್ನು ಪಡೆದುಕೊಂಡಿಲ್ಲ. ಇಂದಿಗೂ ಇದೇ ರೀತಿಯಾದ ಪದ್ಧತಿ ರೂಢಿಯಲ್ಲಿದೆ.

**೩.೧೧ ಬಳಿಗಳು ಮತ್ತು ಕಾರ್ಯಗಳು**

ಒಂದು ಸಮುದಾಯದ ಸಂಸ್ಕೃತಿಯನ್ನು ಗುರುತಿಸುವಲ್ಲಿ ಬಳಿಗಳು ಮುಖ್ಯ ಪಾತ್ರವನ್ನು ವಹಿಸುತ್ತವೆ. ಸಮುದಾಯದ ಸಂಸ್ಕೃತಿಯು ರೂಪುಗೊಳ್ಳುವಲ್ಲಿ ಬಳಿಗಳು ಅವಶ್ಯವಾಗಿವೆ. ಪ್ರತಿಯೊಂದು ಮನೆತನಗಳು ಒಂದೊಂದು ಬಳಿ ಅಥವಾ ಬೆಡಗನ್ನು ಹೊಂದಿರುತ್ತವೆ. ಆ ಬಳಿಗಳು ಸೃಷ್ಟಿಯಾಗಬೇಕಾದರೆ ತನ್ನದೇ ಆದ ವಿಶಿಷ್ಟ ಹಿನ್ನೆಲೆಯನ್ನು ಹೊಂದಿರುತ್ತವೆ. ಬಳಿಗಳ ಮುಖಾಂತರ ಸಮುದಾಯದ ಸಂಬಂಧಗಳು ನಿರ್ಧರಿಸಲ್ಪಡುತ್ತವೆ. ಬಳಿ ಅಥವಾ ಬೆಡಗುಗಳ ಆಧಾರದ ಮೇಲೆ ವಿವಾಹ, ಮನೆದೇವರು, ವೃತ್ತಿ, ಸಂಸ್ಕೃತಿ, ಮೂಲಪುರುಷ, ಇತಿಹಾಸ, ಆಚಾರ-ವಿಚಾರಗಳು ಬೆಳೆದುಕೊಂಡು ಬಂದಿರುತ್ತವೆ. ಪ್ರಾಚೀನ ಕಾಲದಿಂದಲೂ ಬಳಿ ಅಥವಾ ಬೆಡಗುಗಳು ರೂಪುಗೊಂಡಿವೆ. ಮಾನವ ಸಮಾಜದಲ್ಲಿ ಸಂಸ್ಕೃತಿಯ ಅನುಕರಣೆಯ ಸಮಯದಿಂದಲೂ ಇವುಗಳು ಅಸ್ಥಿತ್ವದಲ್ಲಿವೆ. ಆ ಸಂಸ್ಕೃತಿ ಮತ್ತಷ್ಟು ಪ್ರಭಾವಗೊಳ್ಳುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

ಸಿದ್ದಿ ಸಮುದಾಯದವರನ್ನು ಅರಬರು, ಪೋರ್ಚುಗೀಸರು, ಬ್ರಿಟೀಷರು ಕುರಿಗಳಂತೆ ಎಳೆದು ತಂದ ಗುಲಾಮ ಸಮುದಾಯವಾಗಿದೆ. ಇವರನ್ನು ಬಂದರಿನ ಪ್ರದೇಶದಲ್ಲಿ ಬಹಿರಂಗವಾಗಿ ಹರಾಜು ಕೂಗಿ ಕೊಂಡುಕೊಳ್ಳಲಾಗುತ್ತಿತ್ತು. ಹೀಗೆ ಹರಾಜು ಕೂಗಿ ಕೊಂಡುಕೊಳ್ಳಬೇಕಾದರೆ ಮಾಲಿಕನು ತನ್ನ ಅವಶ್ಯಕತೆಗೆ ಅನುಗುಣವಾಗಿ ಬೇಕಾದಷ್ಟು ಗುಲಾಮರನ್ನು ಕೊಂಡುಕೊಂಡ. ಆಗ ಸಿದ್ದಿ ಸಮುದಾಯದ ಗುಲಾಮರು ಒಬ್ಬೊಬ್ಬರಾಗಿ ಚದುರಿ ಮಾಲಿಕನ ಅಡಿಯಾಳಾದರು. ಒಬ್ಬ ಗುಲಾಮ ಸಿದ್ದಿಯನ್ನು ಮಾಲೀಕ ಕೊಂಡುಕೊಂಡಾಗ ಅವನಿಗೆ ಮಾಲೀಕ ತೋರಿಸಿದ ಮಾರ್ಗವೇ ಪ್ರಮುಖವಾಗಿರುತ್ತಿತ್ತು. ಮಾಲಿಕ ಈ ರೀತಿಯಾಗಿ ಕೊಂಡುಕೊಂಡಾಗ ತನ್ನ ಇತರೆ ಸಮುದಾಯದವರನ್ನು ಎಲ್ಲಿ ಅಂತ ಹುಡುಕುವುದು? ಜೊತೆಗೆ ಯಾರನ್ನು ಮದುವೆಯಾಗುವುದು? ಸಾಧ್ಯವಿಲ್ಲದಂತಾಯಿತು. ಗುಲಾಮನು ಯಾವ ಧರ್ಮದ ಮಾಲೀಕನು ತನ್ನನ್ನು ಕೊಂಡುಕೊಂಡನೋ ಆ ಮಾಲೀಕನ ಧರ್ಮದ ಸಂಸ್ಕೃತಿಯನ್ನು ಅನುಕರಣೆ ಮಾಡತೊಡಗಿದ. ಸಿದ್ದಿ ಪುರುಷ ಮತ್ತು ಸಿದ್ದಿ ಮಹಿಳೆಯರು ಸೇರುವುದು, ಮದುವೆಯಾಗುವುದು ಕಷ್ಟವಾಯಿತು. ಒಂದು ವೇಳೆ ಸಿದ್ದಿ ಪುರುಷನಿಗೆ ಸಮುದಾಯದ ಮಹಿಳೆ ಸಿಕ್ಕರೆ, ಮದುವೆಯಾದರೆ ಸಾಕು ಅಥವಾ ಅವಳೊಂದಿಗೆ ಲೈಂಗಿಕವಾಗಿ ಒಂದಾಗುವ ಬಯಕೆಯನ್ನು ಮಾತ್ರ ಹೊಂದಿದ್ದ. ಆದರೂ ಇದು ತ್ರಾಸದಾಯಕವಾಗಿತ್ತು. ಮಾಲೀಕನ ಕಣ್ಣು ತಪ್ಪಿಸುವುದು ಅಷ್ಟು ಸುಲಭವಿರಲಿಲ್ಲ. ಮಾಲೀಕನಿಗೆ

ವಿಷಯ ತಿಳಿದರೆ ಚಿತ್ರಹಿಂಸೆ ನೀಡುತ್ತಿದ್ದ ಇಲ್ಲವೇ ಕೊಲ್ಲುತ್ತಿದ್ದ. ಈ ರೀತಿಯಾದ ಪರಿಸ್ಥಿತಿಯಲ್ಲಿ ಸಿದ್ದಿಯರು ಬಳಿ ಅಥವಾ ಬೆಡಗನ್ನು ನೋಡುವ ಅನಿವಾರ್ಯತೆ ಇದ್ದಿಲ್ಲ. ಮೇಲಾಗಿ ತಮ್ಮ ಸಂಸ್ಕೃತಿಯನ್ನು ಸಂಪೂರ್ಣವಾಗಿ ಕಳಚಿಕೊಂಡು ಮಾಲೀಕನ ಸಂಸ್ಕೃತಿಯನ್ನು ಅನುಸರಿಸುವಾಗ ಅವನ ಮೂಲ ಸಂಸ್ಕೃತಿ ಇಲ್ಲದಂತಾಯಿತು. ಅಂದಾಗ ಬಳಿಗಳು ಎಲ್ಲಿಂದ ಕಂಡುಬರುವುದಕ್ಕೆ ಸಾಧ್ಯವಾಗುತ್ತದೆ.

ಸಿದ್ದಿಯರು ಮಾಲೀಕರಿಂದ ತಪ್ಪಿಸಿಕೊಂಡು ದಟ್ಟವಾದ ಅರಣ್ಯವನ್ನು ಪ್ರವೇಶಿಸಿದ ನಂತರ ತಮ್ಮದೇ ಆದ ಒಂದೊಂದು ಸಂಸ್ಕೃತಿಯನ್ನು ರೂಡಿಸಿಕೊಳ್ಳುತ್ತಾ ಬಂದರು. ಒಂದೇ ಕುಟುಂಬದಲ್ಲಿ ಮೂರೂ ಧರ್ಮಕ್ಕೆ ಸಂಬಂಧಿಸಿದವರು ಕಂಡುಬರುತ್ತಾರೆ. ಅಂದರೆ ಇವರಲ್ಲಿ ಧರ್ಮದ ಬೇಧವಿಲ್ಲ. ಜೊತೆಗೆ ನಿರ್ಧಿಷ್ಟ ಬಳಿಗಳು ಇಲ್ಲ ಎನ್ನುವುದು ತಿಳಿದುಬರುತ್ತದೆ. ಸಮುದಾಯದ ಬಹುತೇಕ ಜನರು ತಮ್ಮಲ್ಲಿ ಬಳಿ ಅಥವಾ ಬೆಡಗುಗಳಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಆದರೆ ಇವರಲ್ಲಿ ಕುವಾ ಮತ್ತು ಮಾಕುವಾ ಎನ್ನುವ ಎರಡು ಬಳಿಗಳು ಕಂಡುಬರುತ್ತವೆ. ಕುವಾ ಶ್ರೇಷ್ಠವಾದುದು, ಮಾಕುವಾ ನಂತರದ್ದು ಎಂದು ತಿಳಿದುಬರುತ್ತದೆ. ಈ ಬಳಿಗಳನ್ನು ಕೆಲವು ಜನ ಮಾತ್ರ ತಿಳಿಸುವುದರಿಂದ ಸಮುದಾಯದ ಬಹುತೇಕರಲ್ಲಿ ಬಳಿಗಳು ಗೊತ್ತಿಲ್ಲ ಎನ್ನುವುದು ತಿಳಿದುಬರುತ್ತದೆ. ವಿವಾಹದ ಸಂದರ್ಭದಲ್ಲಿ ಇವರು ಮನೆತನದ ಹೆಸರಿನ ಆಧಾರದ ಮೇಲೆ ಗಂಡು ಹೆಣ್ಣನ್ನು ನಿಶ್ಚಯಿಸುತ್ತಾರೆ. ಇವರು ಬಳಿಗಳನ್ನು ಹೊಂದಿಲ್ಲದಿರುವುದರಿಂದ ಮನೆತನದ ಹೆಸರಿನ ಮೇಲೆ ಗುರುತಿಸಿಕೊಳ್ಳುತ್ತಾರೆ. ಈ ಸಮುದಾಯದವರಲ್ಲಿ ಕಂಡುಬರುವ ಪ್ರಮುಖ ಮನೆತನಗಳೆಂದರೆ ಕೆಸರೊಳ್ಳರ್, ಕೋಡಿಕಾರ್, ಬೆಳಗಾಂಕರ್, ಮಲ್ಲಿಗವಾಣಿ, ಪಠಾಣ್, ಸೈಯದ್ ಶೇಖ್, ನಾಯ್ಕ, ಪಾಟೀಲ, ಹವಾಲ್ದಾರ ಮುಂತಾದವು.

ಕುವಾ ಶ್ರೇಷ್ಠವಾದುದು ಮತ್ತು ಮಾಕುವಾ ನಂತರದ್ದು ಎನ್ನುವುದನ್ನು ಬಿಟ್ಟರೆ ಸಮುದಾಯದ ಇತರೆ ಬಳಿಗಳಾಗಲೀ ಅಥವಾ ಇದರ ಕಾರ್ಯಗಳಾಗಲಿ ಅಷ್ಟೊಂದು ತಿಳಿದುಬರುತ್ತಿಲ್ಲ. ದಾಸ್ಯತೆಯಿಂದ ಮುಕ್ತಿಯನ್ನು ಪಡೆದ ನಂತರ ಸಂಸ್ಕೃತಿಯನ್ನು ರೂಡಿಸಿಕೊಳ್ಳುತ್ತಿರುವುದರಿಂದ ಬಳಿಗಳ ವಿಚಾರದ ಬಗೆಗೆ ಅನೇಕ ಸಿದ್ದಿಯರಿಗೆ ತಿಳಿದಿಲ್ಲವೆಂದು ಹೇಳಬಹುದು.

### ೩.೧೨ ರಕ್ತ ಸಂಬಂಧಗಳು

ಸಮುದಾಯದಲ್ಲಿ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆ ಇದೆ. ಇವರಲ್ಲಿ ತಂದೆಯ ವಂಶದ ಮೂಲಕವೇ ರಕ್ತ ಸಂಬಂಧವನ್ನು ಗುರುತಿಸಿಕೊಳ್ಳುತ್ತಾರೆ. ಮುಖಾಮುಖಿ, ನೇರ ಸಂಬಂಧಗಳನ್ನು ಹೊಂದಿರುವ ಸಮೂಹದವರನ್ನು ನಾವು ಪ್ರಾಥಮಿಕ ಬಂಧುಗಳು ಎಂದು

ಕರೆಯುತ್ತೇವೆ. ಪ್ರಾಥಮಿಕ ಬಂಧುಗಳು ರಕ್ತಸಂಬಂಧಿಗಳಾಗಿರುತ್ತಾರೆ. ಗಂಡಿನ ಸಂತತಿಯ ಆಧಾರದ ಮೇಲೆ ಕುಲ, ಬಳಿ, ಗೋತ್ರ, ಮನೆತನ, ಅಣ್ಣ–ತಮ್ಮ, ಅಕ್ಕ–ತಂಗಿ, ಅಜ್ಜಿ–ಅಜ್ಜ, ಚಿಕ್ಕಪ್ಪ–ದೊಡ್ಡಪ್ಪ ಮೊದಲಾದವು ರಕ್ತ ಸಂಬಂಧಗಳು ಎನಿಸಿಕೊಳ್ಳುತ್ತವೆ. ಯಾವ ಸಂಬಂಧದಲ್ಲಿ ಆತ್ಮೀಯತೆ ಮತ್ತು ಒಡನಾಡಿತನವಿರುತ್ತದೋ ಅದು ರಕ್ತ ಸಂಬಂಧವಾಗಿರುತ್ತದೆ. ನಾವೆಲ್ಲರೂ ಒಂದೇ ಎನ್ನುವ ಭಾವನೆಯನ್ನು ಹೊಂದಿರುವ ಮಾನವ ಸಮೂಹ ರಕ್ತ ಸಂಬಂಧವಾಗಿರುತ್ತದೆ.

ಮೂರು ವಿಭಿನ್ನ ಧರ್ಮಗಳಲ್ಲಿ ಹಂಚಿ ಹೋಗಿದ್ದರೂ, ನಾವೆಲ್ಲ ಒಂದೇ ಸಮುದಾಯದವರು ಎನ್ನುವ ಭಾವನೆ ಪ್ರಮುಖವಾಗಿ ಸಿದ್ದಿಯರಲ್ಲಿ ಕಂಡುಬರುತ್ತದೆ. ಮೂಲತಃ ಮೊದಲಿಗೆ ನಾವೆಲ್ಲರೂ ಒಂದೇ ಗುಲಾಮಗಿರಿಯ ಅವಧಿಯಲ್ಲಿ ಕಾರಣಾಂತರಗಳಿಂದ ಬೇರೆ ಬೇರೆ ಧರ್ಮಗಳನ್ನು ಅನುಸರಿಸುತ್ತಿದ್ದೇವೆ ಎನ್ನುವುದು ಸಮುದಾಯದವರ ಅಭಿಪ್ರಾಯವಾಗಿದೆ. ಸಮುದಾಯದ ಸದಸ್ಯರೆಲ್ಲರೂ ರಕ್ತಸಂಬಂಧಿಗಳೇ ಆಗಿರುವುದರಿಂದ ಪ್ರೀತಿ, ವಿಶ್ವಾಸ ಮತ್ತು ಸಹಕಾರ ಪ್ರಮುಖವಾಗಿ ಕಂಡುಬರುತ್ತದೆ. ಕುಟುಂಬ ವ್ಯವಸ್ಥೆಯಲ್ಲಿ ಸದಸ್ಯರೆಲ್ಲರೂ ಒಂದುಗೂಡಿ ಬದುಕುವುದಕ್ಕೆ ಮತ್ತು ಒಗ್ಗಟ್ಟನ್ನು ಹೊಂದಿರುವುದಕ್ಕೆ ರಕ್ತಸಂಬಂಧವೇ ಪ್ರಮುಖ ಕಾರಣವಾಗಿದೆ. ಇತರೆ ಯಾವ ಜೀವಿಗಳಲ್ಲಿಯೂ ಕಂಡುಬರದಂತಹ ಗಾಢವಾದ ರಕ್ತ ಸಂಬಂಧ ವ್ಯವಸ್ಥೆ ಮಾನವ ಸಮುದಾಯದಲ್ಲಿ ಮಾತ್ರ ಕಂಡುಬರುತ್ತದೆ. ವಿವಾಹ ನೆರವೇರಿಸಬೇಕಾದರೆ ಮೊದಲಿಗೆ ಸಿದ್ದಿಯರು ಒಳಬಾಂಧವ್ಯ ಪದ್ಧತಿಗೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು. ಅಣ್ಣನ ಮಗನಿಗೆ ತಂಗಿಯ ಮಗಳನ್ನು ವಿವಾಹ ಮಾಡುತ್ತಿದ್ದರು. ಆದರೆ ಇವರು ರಕ್ತಸಂಬಂಧಿಗಳಾಗುತ್ತಾರೆ ಎನ್ನುವ ಉದ್ದೇಶದಿಂದ ಈಗ ಈ ರೀತಿಯ ವಿವಾಹವನ್ನು ನಿಷೇಧಿಸಲಾಗಿದೆ ಎಂದು ಸಮುದಾಯದ ಹಿರಿಯ ತಿಳುವಳಿಕೆದಾರರಾದ ಡಿಯೋಗ್ .ಬಿ. ಸಿದ್ದಿಯವರು ತಿಳಿಸುತ್ತಾರೆ. ಒಂದೇ ಬಳಿ ಅಥವಾ ಬೆಡಗಿನವರು ರಕ್ತಸಂಬಂಧಿಗಳಾಗುತ್ತಾರೆ ಎಂಬ ಭಾವನೆಯನ್ನು ಹೊಂದಿರುವುದರಿಂದ ಒಂದೇ ಬಳಿಯಲ್ಲಿ ವಿವಾಹ ನಿಷಿದ್ಧವಾಗಿದೆ. ಸಮುದಾಯದಲ್ಲಿ ಏಕಪತ್ನಿತ್ವ ಹೆಚ್ಚಾಗಿ ಆಚರಣೆಯಲ್ಲಿದೆ. ಕೆಲವು ಜನ ಬಹುಪತ್ನಿತ್ವವನ್ನು ಹೊಂದಿದ್ದರೂ ಸಹ ಏಕಪತ್ನಿತ್ವಕ್ಕೆ ಹೆಚ್ಚಿನ ಮಹತ್ವವಿದೆ. ಇಸ್ಲಾಂ ಧರ್ಮದನ್ವಯ ಒಬ್ಬ ಪುರುಷ ಏಕಕಾಲದಲ್ಲಿ ನಾಲ್ವರು ಸ್ತ್ರೀಯರನ್ನು ವಿವಾಹವಾಗಬಹುದಾಗಿದೆ. ಆದರೆ ಮುಸ್ಲಿಂ ಸಿದ್ದಿಯರಲ್ಲಿಯೂ ಸಹ ಏಕಪತ್ನಿತ್ವ ವ್ಯವಸ್ಥೆ ಜನಪ್ರಿಯವಾಗಿದೆ. ಧರ್ಮ, ಕುಲ, ಗೋತ್ರ ಬೇರೆ ಬೇರೆಯಾಗಿದ್ದರೂ ನಾವೆಲ್ಲರೂ ಒಂದೇ ಎನ್ನುವ ಅನ್ಯೋನ್ಯತೆ ಸಮುದಾಯದವರಲ್ಲಿ ಪ್ರಮುಖವಾಗಿ ಬಿಂಬಿತವಾಗುತ್ತದೆ.

ಆಧುನಿಕ ಸಮಾಜದೊಂದಿಗೆ ಸಂಪರ್ಕವನ್ನು ಹೊಂದಿದ್ದರೂ ಇಂದಿಗೂ ಸಮುದಾಯದ ನಾವೆಲ್ಲರೂ ಒಂದೇ ಎನ್ನುವ ಒಗ್ಗಟ್ಟನ್ನು ಪ್ರದರ್ಶಿಸುತ್ತಿದ್ದಾರೆ. ಆಧುನಿಕ ಸಮಾಜದ ಇಂದಿನ ಜಾತಿ ವ್ಯವಸ್ಥೆಯನ್ನು ನೋಡಿದರೆ ಸಮಾಜ ಯಾವ ಮಟ್ಟಕ್ಕೆ ಬಂದು ನಿಂತಿದೆ ಎನ್ನುವುದು ಎಲ್ಲರಿಗೂ ಗೊತ್ತಿರುವ ಸತ್ಯ. ಆದರೆ ಸಿದ್ದಿಯರು ಹಿಂದೂ, ಮುಸ್ಲಿಂ ಮತ್ತು ಕ್ರಿಶ್ಚಿಯನ್ನರು ಒಂದೇ ಕುಟುಂಬದಲ್ಲಿರುವುದರ ಮುಖಾಂತರ ಆಧುನಿಕ ಸಮಾಜಕ್ಕೆ ಭಾವೈಕ್ಯತೆಯ ಸಂದೇಶವನ್ನು ಸ್ಪಷ್ಟವಾಗಿ ನೀಡಿದ್ದಾರೆ.

**೩.೧೩. ಶಾರೀರಿಕ ಲಕ್ಷಣಗಳು**

ಸಿದ್ದಿಯರ ಶಾರೀರಿಕ ಲಕ್ಷಣಗಳು ನೀಗ್ರೋಯಿಡ್ ಸಂತತಿಗೆ ಸೇರಿದ್ದಾಗಿದೆ. ಸುಪ್ರಸಿದ್ಧ ಮಾನವ ತಜ್ಞರಾದ ಎ.ಎಲ್.ಕ್ರೋಬರ್ ಮತ್ತು ಪ್ರೊ.ಕೂನ್‌ರವರು ನೀಗ್ರೋ ಸಂತತಿಯನ್ನು ಕುರಿತು ಮಹತ್ವದ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಸಿದ್ದಿಯರು ಭಾರತಕ್ಕೆ ಬಂದು ೫೦೦ ವರ್ಷಗಳಾದರೂ ಅವರ ಶಾರೀರಿಕ ಲಕ್ಷಣಗಳಲ್ಲಿ ಬದಲಾವಣೆಗಳಾಗಿಲ್ಲ. ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಸಿದ್ದಿಯರು ಇತರೆ ಸಮುದಾಯಗಳಿಗಿಂತ ಶಾರೀರಿಕವಾಗಿ ಭಿನ್ನವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಬಲಾಢ್ಯ ಮೈಕಟ್ಟು, ಕಪ್ಪು ಬಣ್ಣ, ದಪ್ಪ ತುಟಿ, ಚಪ್ಪಟೆಯಾದ ಮೊಂಡು ಮೂಗು, ಗುಂಗುರು ಕೂದಲು, ರೋಮರಹಿತ ಶರೀರ, ಕಪ್ಪು ಮುಖದಲ್ಲಿ ಹೊಳೆಯುವ ಬಿಳಿ ಹಲ್ಲುಗಳು ಇವರ ಪ್ರಮುಖ ಶಾರೀರಿಕ ಲಕ್ಷಣಗಳಾಗಿವೆ.

ಒಂದೆರಡು ಕಡೆ ಸಿದ್ದಿಯರ ಶಾರೀರಿಕ ಲಕ್ಷಣದಲ್ಲಿ ಕೆಲವು ಮಹತ್ವದ ಬದಲಾವಣೆಗಳು ಕಂಡುಬರುತ್ತವೆ. ಮಿಶ್ರ ತಳಿಯಿಂದಾಗಿ ಅಥವಾ ಇವರೊಂದಿಗೆ ಇತರೆ ಬೇರೆ ಸಮುದಾಯದವರ ಸಮ್ಮಿಲನದಿಂದಾಗಿ ಕೆಲವು ಕಡೆ ಭಿನ್ನ ಲಕ್ಷಣಗಳು ಕಂಡುಬರುತ್ತವೆ. ಕೆಲವು ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ವಿಶ್ವದಲ್ಲಿ ಶುದ್ಧ ಜನಾಂಗವೆಂಬುದು ಇಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಈ ರೀತಿಯಾದ ವ್ಯವಸ್ಥೆಯನ್ನು ಸಿದ್ದಿ ಸಮುದಾಯದಲ್ಲಿಯೂ ಅಲ್ಲಗಳೆಯುವಂತಿಲ್ಲ.

**೩.೧೪ ಉಡುಗೆ ತೊಡುಗೆಗಳು**

ಮಾನವನ ಮೂಲಭೂತ ಅವಶ್ಯಕತೆಗಳೆಂದರೆ ಆಹಾರ, ವಸತಿ ಮತ್ತು ಬಟ್ಟೆ. ಪ್ರತಿಯೊಬ್ಬ ಮಾನವನೂ ತನ್ನ ಮಾನವನ್ನು ಮುಚ್ಚಿಕೊಳ್ಳಲು ವಸ್ತ್ರವನ್ನು ಧರಿಸುತ್ತಾನೆ. ಈ ವಸ್ತ್ರಗಳು ಮಾನವನ್ನು ಮುಚ್ಚುವುದರ ಜೊತೆಗೆ ಮಾನವ ಸಂಸ್ಕೃತಿಯ ಪ್ರತೀಕವಾಗಿವೆ. ಪ್ರತಿಯೊಂದು ಸಮುದಾಯವೂ ತನ್ನದೇಯಾದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುತ್ತದೆ. ಆ ಸಂಸ್ಕೃತಿಗೆ ತಕ್ಕಂತೆ ಉಡುಗೆ ತೊಡುಗೆಗಳು ಕಂಡುಬರುತ್ತವೆ. ಪ್ರತಿಯೊಂದು ಸಮುದಾಯವೂ

ಉಡುಗೆ ತೊಡುಗೆಯಲ್ಲಿ ವಿಶೇಷತೆಯನ್ನು ಹೊಂದಿರುತ್ತವೆ. ಇವರಲ್ಲಿ ತಮ್ಮ ಸ್ವಂತಿಕೆಗಿಂತ ಸ್ಥಳೀಯರ ಪ್ರಭಾವ ಪ್ರಮುಖವಾಗಿ ಕಂಡುಬರುತ್ತದೆ.

೩.೧೪.೧ ಪ್ರಾಚೀನ

ಸಮುದಾಯದವರು ಸರಳ ಜೀವನಕ್ಕೆ ಹೆಚ್ಚು ಮಹತ್ವ ಕೊಡುವವರಾಗಿದ್ದಾರೆ. ಹಿ.ಚಿ.ಬೋರಲಿಂಗಯ್ಯನವರು ಹೇಳುವಂತೆ ಗುಲಾಮರನ್ನು ಬೆತ್ತಲೆಯಾಗಿ ಬಹಿರಂಗವಾಗಿ ಮಾರುಕಟ್ಟೆಯಲ್ಲಿ ಹರಾಜು ಹಾಕುತ್ತಿದ್ದರು. ಅಂದರೆ ಅವರ ಮೈಮೇಲೆ ಒಂದು ತುಂಡು ಬಟ್ಟೆಯೂ ಇರುತ್ತಿರಲಿಲ್ಲ. ಅದೇ ರೀತಿಯಾಗಿ ಇವರನ್ನು ಕೊಂಡುಕೊಂಡ ಮಾಲೀಕ ಯಾವ ರೀತಿಯಾದ ಚಿಂದಿ ಬಟ್ಟೆಗಳನ್ನು ಕೊಟ್ಟರೂ ಹಾಕಿಕೊಳ್ಳಬೇಕಾಗಿತ್ತು. ಮಾಲೀಕರಿಂದ ತಪ್ಪಿಸಿಕೊಂಡು ಬಂದು ಕಾಡಿನೊಳಗೆ ಸೇರಿದುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಪ್ರಬಲ ಮತ್ತು ಪ್ರಭಾವಿಯಾದ ಹವ್ಯಕರ ಹತ್ತಿರ ಕೂಲಿ ಕೆಲಸಕ್ಕೆ ಸೇರಿ ಅವರ ಹಲವಾರು ಸಂಸ್ಕೃತಿಗಳನ್ನು ಅನುಕರಣೆ ಮಾಡಿದರು. ವಸ್ತ್ರದ ಅಥವಾ ಉಡುಗೆ ತೊಡುಗೆಯಲ್ಲಿಯೂ ಸಹ ಹವ್ಯಕ ಬ್ರಾಹ್ಮಣರ ಪ್ರಭಾವವಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸಂದರ್ಭಕ್ಕೆ ತಕ್ಕಂತೆ ವಾತಾವರಣಗಳಿಗೆ ಹೊಂದಿಕೊಳ್ಳುವ ನಿದರ್ಶನವಾಗಿದೆ. ಉಡುಗೆಗಳು ಮಾನವನ ಮರ್ಯಾದೆಯನ್ನು ಕಾಪಾಡಿದರೆ ತೊಡುಗೆಗಳು ಸೌಂದರ್ಯವನ್ನು ಹೆಚ್ಚಿಸುತ್ತವೆ. ಹಳೆಯ ಕಾಲದ ಹಿರಿಯರು ಪಂಚೆಯನ್ನು ಕಟ್ಟುತ್ತಾರೆ ಮತ್ತು ಕಸೇ ಅಂಗಿಯನ್ನು ಧರಿಸುತ್ತಾರೆ. ತಲೆಗೆ ರುಮಾಲು ಅಥವಾ ದೊಡ್ಡದಾದ ಟವೆಲ್ ಸುತ್ತಿರುತ್ತಾರೆ. ಕೆಲವು ಹಳೆಯ ಕಾಲದ ಹಿಂದೂ ಸಿದ್ದಿಯರು ಬಟ್ಟೆಯ ಟೊಪ್ಪಿಗೆಯನ್ನು ಹಾಕುತ್ತಾರೆ. ಹೆಣ್ಣುಮಕ್ಕಳು ಸೀರೆ ಮತ್ತು ಕುಪ್ಪಸ ತೊಡುತ್ತಾರೆ. ಸೀರೆ ಉಟ್ಟು ಕಚ್ಚೆಯನ್ನು ಹಾಕಿಕೊಳ್ಳುತ್ತಾರೆ. ಹಣೆಗೆ ಕುಂಕುಮ, ಕೈಗೆ ಬಳೆಯನ್ನು ಹಾಕುತ್ತಾರೆ. ಸ್ವಲ್ಪ ಸ್ಥಿತಿವಂತರಿದ್ದರೆ ಬೆಳ್ಳಿಯ ಬಳೆ ಇಲ್ಲದಿದ್ದರೆ ಗಾಜಿನ ಬಳೆಯನ್ನು ಧರಿಸುತ್ತಾರೆ. ಕಾಲಿಗೆ ಕಾಲುಂಗುರ, ಮೂಗಿಗೆ ಮೂಗುತಿ, ಕಿವಿಗೆ ಓಲೆ, ಬುಗುಡಿ, ಕೊರಳಿಗೆ ಕೆಲವು ಹರಳಿನ ಸರಗಳನ್ನು ಧರಿಸುತ್ತಾರೆ. ಮುಸ್ಲಿಂ ಸಿದ್ದಿಯರ ಪುರುಷರು ಪಂಚೆಯ ಜೊತೆಗೆ ಜುಬ್ಬವನ್ನು ಹಾಕುತ್ತಾರೆ. ಕ್ರೈಸ್ತ ಸಿದ್ದಿಯರು ಮೇಲಿನ ಎರಡೂ ಬಗೆಯ ಸಮುದಾಯದವರ ವಸ್ತ್ರಗಳನ್ನು ಬಳಸುತ್ತಿದ್ದಾರೆ. ಮುಸ್ಲಿಂ ಸಿದ್ದಿಯರ ಸ್ತ್ರೀಯರು ಬುರುಕಾ ಧರಿಸುತ್ತಿದ್ದರು. ಆಯಾ ಧರ್ಮ ಮತ್ತು ಸ್ಥಳೀಯರ ಪ್ರಭಾವ ಪ್ರಮುಖವಾಗಿ ಕಂಡುಬರುತ್ತದೆ.

೩.೧೪.೨ ಆಧುನಿಕ

ಆಧುನಿಕ ಸಮಾಜದ ಸಂಪರ್ಕದಿಂದಾಗಿ ಸಿದ್ದಿಯರ ಉಡುಗೆ ತೊಡುಗೆಗಳಲ್ಲಿ ಗಣನೀಯವಾದ ಬದಲಾವಣೆಗಳು ಕಂಡುಬರುತ್ತಿವೆ. ಅದರಲ್ಲಿಯೂ ಮುಖ್ಯವಾಗಿ ಯುವಪೀಳಿಗೆ ಆಧುನಿಕ ಸ್ಪರ್ಶಕ್ಕೆ ಮಾರುಹೋದಂತೆ ಕಾಣುತ್ತದೆ. ಸಮುದಾಯದ ಇಂದಿನ

ಯುವಕರು ಪ್ಯಾಂಟ್‌ಗಳನ್ನು ಧರಿಸುತ್ತಿದ್ದಾರೆ. ನವೀನ ಶೈಲಿಯ ವಿವಿಧ ವಿನ್ಯಾಸದ ಪ್ಯಾಂಟ್‌ಗಳನ್ನು ಯುವಕರು ತೊಡುತ್ತಿದ್ದಾರೆ. ಶರ್ಟ್, ಟೀಶರ್ಟ್, ಬೂಟ್‌ಗಳು, ಕಿವಿಗೆ ಚಿನ್ನದ ಕೊಪ್ಪು, ಕೊರಳಲ್ಲಿ ಬಂಗಾರದ ಅಥವಾ ಬೆಳ್ಳಿಯ ಅಥವಾ ನವೀನ ಶೈಲಿಯ ಸರಗಳನ್ನು ಧರಿಸುತ್ತಿದ್ದಾರೆ. ಯುವತಿಯರು ಚೂಡಿದಾರ, ನಿಲುವಂಗಿ (ನೈಟಿ), ಕಚ್ಚೆಯಿಲ್ಲದ ಸೀರೆ, ನವೀನ ವಿನ್ಯಾಸದ ಕುಪ್ಪಸ ಇತ್ಯಾದಿಗಳನ್ನು ತೊಡುವುದು ಕಂಡುಬರುತ್ತದೆ. ಪೌಡರ್, ಸ್ನೋ ಮತ್ತಿತರ ಮೇಕಪ್ ಸಾಮಗ್ರಿಗಳನ್ನು ಬಳಸುತ್ತಿದ್ದಾರೆ. ಕೇಶವಿನ್ಯಾಸದಲ್ಲಿಯೂ ಹಲವಾರು ವೈವಿಧ್ಯಮಯವಾದ ನವೀನತೆ ಕಂಡುಬರುತ್ತಿದೆ. ಬಟ್ಟೆಗೆ ಒಪ್ಪುವಂತಹ ಬಳೆಗಳು, ಬಿಂದಿಗಳನ್ನು ಬಳಸುವುದೂ ಸಹ ಕಂಡುಬರುತ್ತಿದೆ. ಕೊರಳಲ್ಲಿ ವಿವಿಧ ಬಗೆಯ ಫ್ಯಾನ್ಸಿ ಸರಗಳನ್ನು ಬಳಸುತ್ತಿರುವುದು ಅಲ್ಲಲ್ಲಿ ಕಾಣಬಹುದಾಗಿದೆ. ಆಧುನಿಕತೆಯ ಎಲ್ಲಾ ಬಗೆಯ ವಸ್ತುಗಳನ್ನು ಯುವಜನತೆ ಬಳಸುತ್ತಿದ್ದಾರೆ. ಮುಸ್ಲಿಂ ಸಿದ್ದಿಯರ ಮಹಿಳೆಯರಲ್ಲಿ ಕೆಲವರು ಬುರುಕಾ ಧರಿಸಿದರೆ ಇನ್ನು ಕೆಲವರು ಬರುಕಾ ಧರಿಸದಿರುವುದು ಕಂಡುಬರುತ್ತದೆ. ಮೂರು ಧರ್ಮದ ಸ್ತ್ರೀ-ಪುರುಷ ಸಿದ್ದಿಯರು ಸಾಧ್ಯವಾದಷ್ಟು ನವೀನ ಶೈಲಿಯ ಉಡುಗೆ-ತೊಡುಗೆಗಳನ್ನು ಬಳಸುತ್ತಿದ್ದಾರೆ.

**೩.೧೫ ಮನೆಗಳ ವಿನ್ಯಾಸ**

ಸಮುದಾಯದವರ ಮನೆಗಳು ವಿಶಿಷ್ಟತೆಯನ್ನು ಹೊಂದಿವೆ. ಪಾರಂಪರಿಕ ಮನೆಗಳ ವಿನ್ಯಾಸದ ಬದಲಾಗಿ ಇಂದು ಗಣನೀಯ ಬದಲಾವಣೆಗಳು ಕಂಡುಬರುತ್ತಿವೆ. ಹೆಂಚಿನ ಮನೆಗಳು, ಜನತಾ ಮನೆಗಳು ಕಂಡುಬರುವುದರಿಂದ ಮನೆಗಳ ವಿನ್ಯಾಸದಲ್ಲಿ ಪರಿವರ್ತನೆಯಾಗಿದೆ. ಸಿದ್ದಿಯರ ವಾಸದ ನೆಲೆಗಳು ಒಂದೇ ರೀತಿಯಾಗಿಲ್ಲ. ಕೆಲವು ಗ್ರಾಮಗಳಲ್ಲಿ ಸಿದ್ದಿಯರ ಮನೆಗಳು ಒಂದಕ್ಕೊಂದು ಅಂಟಿಕೊಂಡು ನಿರ್ಮಾಣವಾಗಿವೆ. ಅಂದರೆ ಒಂದು ನಿರ್ಧಿಷ್ಟ ಗ್ರಾಮದಲ್ಲಿ ಹಲವು ಕುಟುಂಬಗಳು ಒಟ್ಟಾಗಿ ನೆಲೆಯೂರಿ ಜೀವನ ನಿರ್ವಹಿಸುತ್ತಿವೆ. ಇನ್ನೂ ಕೆಲವು ಕಡೆ ಒಂದೊಂದೇ ಕುಟುಂಬಗಳು ನೆಲೆಸಿವೆ. ಸುಮಾರು ದೂರ ದೂರದಲ್ಲಿ ಒಂದೊಂದೇ ಮನೆಗಳು ಕಂಡುಬರುತ್ತವೆ.

**೩.೧೫.೧ ಪಾರಂಪರಿಕ ಮನೆಯ ವಿನ್ಯಾಸ**

ಸಿದ್ದಿಯರು ವಾಸಿಸುವ ಗುಡಿಸಲುಗಳು ಅಥವಾ ಮನೆಗಳು ಚೌಕಾಕಾರವಾಗಿರುತ್ತವೆ. ಮೊದಲಿಗೆ ಇವರು ವಾಸಿಸುತ್ತಿದ್ದ ಹಟ್ಟಿಯ ಸುತ್ತಮುತ್ತ ಇತರೆ ಸಮುದಾಯಗಳು ಕಂಡುಬರುತ್ತಿದ್ದಿಲ್ಲ. ಕಡುಬಡವರಾಗಿರುವುದರಿಂದ ಅಲ್ಲದೇ ನಾಗರಿಕ ಸಮಾಜದ ಹಿಂಸೆಗೆ ಒಳಗಾಗಿದ್ದ ಇವರು ಹೊರಗಿನವರ ಕಣ್ಣಿಗೆ ಕಾಣದಂತೆ ದಟ್ಟವಾದ ಅರಣ್ಯದಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಮಾಡಲು ಪ್ರಾರಂಭಿಸಿದರು. ಸಿದ್ದಿಯರು ಸರಳ

ಜೀವಿಗಳು. ಇವರಂತೆಯೇ ಇವರ ಮನೆಗಳೂ ಸಹ ಸರಳತೆಯನ್ನು ಹೊಂದಿವೆ. ಅಲ್ಲದೆ ಇವರ ಗುಡಿಸಲುಗಳು ಇವರ ಬಡತನವನ್ನು ಬಿಂಬಿಸುತ್ತವೆ. ದೊಡ್ಡದಾದ ಮರದ ಕೆಳಗೆ ಮನೆಯನ್ನು ಕಟ್ಟಿಕೊಳ್ಳುತ್ತಿದ್ದರು. ಅಲ್ಲದೆ ಮಧ್ಯದಲ್ಲಿ ಒಂದೇ ಕಂಬದ ಮೇಲೆ ಚೌಕಾಕಾರದ ಮನೆಯನ್ನು ಕಟ್ಟುತ್ತಿದ್ದರು. ಸುತ್ತಲೂ ಬಿದುರಿನ ಗೋಡೆಯನ್ನು ನಿರ್ಮಿಸಿ ಆ ಗೋಡೆಗೆ ಮಣ್ಣನ್ನು ಹದವಾಗಿ ಕಲಸಿ ಮೆತ್ತುತ್ತಿದ್ದರು. ಬಾಗಿಲುಗಳು ಮತ್ತು ಕಿಟಕಿಗಳೂ ಸಹ ಬಿದುರಿನಿಂದ ತಯಾರಿಸಿಕೊಳ್ಳುತ್ತಿದ್ದರು. ಹುಲ್ಲಿನಿಂದ ಅಥವಾ ಅಡಿಕೆಯ ಸೋಗೆಯಿಂದ ಮೇಲ್ಛಾವಣಿ ನಿರ್ಮಿಸಲಾಗುತ್ತಿತ್ತು. ಇವರ ಮನೆಯು ಯಾವುದೇ ಕೋಣೆಗಳಿಲ್ಲದೆ ಒಂದು ವಿಶಾಲವಾದ ಅಂಗಳದಂತೆ ರಚಿತವಾಗಿರುತ್ತಿತ್ತು. ಒಂದು ಮೂಲೆಯಲ್ಲಿ ಅಡುಗೆ ಮನೆ, ಮತ್ತೊಂದು ಕಡೆ ಹಿರಿಯರ ಸ್ಥಳ. ಈ ಸ್ಥಳಕ್ಕೆ ಕಂಡ ಕಂಡಂತೆ ನುಗ್ಗುವಂತಿಲ್ಲ. ಗೋಡೆಗೆ ಹೊಂದಿಕೊಂಡಂತೆ ಸ್ವಲ್ಪ ಮೇಲಕ್ಕೆ ಅಟ್ಟವನ್ನು ನಿರ್ಮಿಸಲಾಗಿರುತ್ತದೆ. ಅದು ಹಿರಿಯರನ್ನು ಇರಿಸುವ ಸ್ಥಳವಾಗಿರುತ್ತದೆ. ಹಿರಿಯರು ಎಂದರೆ ಅವರು ಪೂಜಿಸುವ ತೆಂಗಿನಕಾಯಿ ದೇವರು. ತೊಲೆಗೆ ತೆಂಗಿನ ಕಾಯಿಯನ್ನು ಕಟ್ಟಲಾಗಿರುತ್ತದೆ. ಪೂಜಾ ಪರಿಕರಗಳನ್ನು ಬಿಟ್ಟು ಅಲ್ಲಿ ಬೇರೇನೂ ಇಡುವಂತಿಲ್ಲ. ದ್ವಾರ ಬಾಗಿಲು ಮಧ್ಯದಲ್ಲಿದ್ದರೆ ಹೊರಗೆ ಎರಡೂ ಕಡೆ ಜಗುಲಿ ನಿರ್ಮಾಣವಾಗಿರುತ್ತದೆ. ದ್ವಾರಬಾಗಿಲು ಯಾವುದಾದರೊಂದು ಮೂಲೆಯಲ್ಲಿದ್ದರೆ ದೊಡ್ಡದಾದ ಒಂದೇ ಜಗುಲಿ ಇರುತ್ತದೆ. ಹೊರಗಿನಿಂದ ಯಾರೇ ಅತಿಥಿಗಳು ಬಂದರೂ ಜಗುಲಿಯ ಮೇಲೆಯೇ ಕುಳಿತುಕೊಳ್ಳಬೇಕು. ಮನೆಯ ಹಿಂದೆ, ಮುಂದೆ ಮತ್ತು ಸುತ್ತಮುತ್ತ ಅಲಂಕಾರಿಕ ಗಿಡಗಳಾಗಲೀ, ಕಾಂಪೌಂಡ್ ವ್ಯವಸ್ಥೆಯಾಗಲೀ ಕಂಡುಬರುವುದಿಲ್ಲ. ಇವರ ಮನೆಯಲ್ಲಿ ಯಾವುದೇ ಹೆಚ್ಚಿನ ಸರಕು ಸರಂಜಾಮುಗಳು ಕಂಡುಬರುವುದಿಲ್ಲ. ಕೆಲವು ಮಣ್ಣಿನ ಕುಡಿಕೆಗಳು, ಬಿದುರಿನ ಬುಟ್ಟಿಗಳನ್ನು ಬಿಟ್ಟರೆ ಇತರೆ ಸಾಮಾನುಗಳು ಅಪರೂಪ. ಆದರೆ ಇತ್ತೀಚೆಗೆ ವಿವಿಧ ಬಗೆಯ ವಸ್ತುಗಳು ಕಂಡುಬರುತ್ತಿವೆ. ಮನೆಯಲ್ಲಿ ದನಕರುಗಳಿದ್ದರೆ ಮನೆಗೆ ಹೊಂದಿಕೊಂಡಂತೆ ಮನೆಯ ಹಿಂದೆ ಕೊಟ್ಟಿಗೆ ಇರುತ್ತದೆ. ಕೊಟ್ಟಿಗೆಗೆ ಹೋಗುವುದಕ್ಕೆ ಮನೆಯ ಒಳಗಡೆ ಹಿಂದಿನ ಬಾಗಿಲು ವ್ಯವಸ್ಥೆ ಇರುತ್ತದೆ. ಮನೆಯವರು ಜಗುಲಿಯ ಮೇಲೆ ಇಲ್ಲವೇ ಒಳಗೆ ಮಲಗಿಕೊಳ್ಳುವುದು ತಿಳಿದುಬರುತ್ತದೆ.

### ೩.೧೫.೨ ಹೆಂಚಿನ ಮನೆಗಳ ವಿನ್ಯಾಸ

ಇತ್ತೀಚಿನ ಹಲವು ಹೆಂಚಿನ ಮನೆಗಳು ಕಂಡುಬರುತ್ತವೆ. ಹೆಂಚಿನ ಮನೆಗಳು ಎಂದ ತಕ್ಷಣ ನವೀನ ಮತ್ತು ಅತ್ಯಾಧುನಿಕ ಎನ್ನುವ ಕಲ್ಪನೆ ಇಲ್ಲಿ ಕಂಡುಬರುವುದಿಲ್ಲ. ಮೇಲ್ಛಾವಣಿ ಮಾತ್ರ ಹೆಚ್ಚಾಗಿ ಹೆಂಚನ್ನು ಹೊಂದಿದ್ದು, ಇನ್ನುಳಿದಂತೆ ಪಾರಂಪರಿಕ ಮನೆಯ ವಿನ್ಯಾಸವನ್ನು ಹೊಂದಿರುತ್ತವೆ. ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಅನುಕೂಲತೆಯನ್ನು ಹೊಂದಿರುವವರು. ಹೆಂಚನ್ನು

ಮೇಲ್ಛಾವಣಿಯಾಗಿ ಬಳಸಿರುವುದುಂಟು. ಅಲ್ಲದೆ ಪಾರಂಪರಿಕ ಮನೆಯಲ್ಲಿ ಮಣ್ಣಿನ ನೆಲವನ್ನು ಹೊಂದಿರುತ್ತದೆ. ಅದನ್ನು ಸಾರಿಸಿ ಶುದ್ಧವಾಗಿಟ್ಟುಕೊಂಡಿರುತ್ತಾರೆ. ಆದರೆ ಹೆಂಚಿನ ಮೇಲ್ಛಾವಣಿಯನ್ನು ಹೊಂದಿದ ಕೆಲವು ಮನೆಗಳಲ್ಲಿನ ನೆಲವು ಸಿಮೆಂಟ್ ಅಥವಾ ಹಾಸು ಬಂಡೆಗಳನ್ನು ಹೊಂದಿರುವುದು ಕಂಡುಬರುತ್ತದೆ. ತುಸು ಮಟ್ಟಿಗೆ ಸ್ಥಿತಿವಂತರಾಗಿರುವುದರಿಂದ ಮನೆಯ ಸುತ್ತಮುತ್ತ ಸ್ಥಳವಿದ್ದರೆ ಕಾಂಪೌಂಡ್ ರೀತಿಯಲ್ಲಿ ಕಟ್ಟಿಗೆಯ ಸಣ್ಣ ಸಣ್ಣ ಕಂಬಗಳನ್ನು ನೇತುಹಾಕಿ, ತಂತಿ ಹಾಕಿರುವುದು ಕಂಡುಬರುತ್ತದೆ. ಕೆಲವು ಮನೆಯ ಮುಂದೆ ತುಳಸಿ ಕಟ್ಟೆಯನ್ನೂ ಸಹ ನಿರ್ಮಿಸಲಾಗಿರುತ್ತದೆ.

**೩.೧೫.೩ ಆಶ್ರಯ ಮನೆಯ ವಿನ್ಯಾಸ**

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ವಸತಿಯೂ ಒಂದಾಗಿದೆ. ಸೂರಿಲ್ಲದ ಕಡುಬಡವರಿಗೆ ಸರಕಾರ ಮನೆಗಳನ್ನು ನಿರ್ಮಿಸಿಕೊಡುತ್ತಿದೆ. ಈ ಮನೆಯನ್ನು ಸರಕಾರವೇ ಕಟ್ಟಿಸಿ ಅರ್ಹ ಫಲಾನುಭವಿಗಳಿಗೆ ನೀಡುತ್ತಿದೆ. ಸಿದ್ದಿಯರ ಕೆಲವು ಮನೆಗಳು ಅಲ್ಲೊಂದು ಇಲ್ಲೊಂದು ಇರುತ್ತಿದ್ದವು. ಆದರೆ ಸರ್ಕಾರ ಒಂದೇ ಕಡೆ ಹತ್ತಾರು, ನೂರಾರು ಆಶ್ರಯ ಮನೆಗಳನ್ನು ಕಟ್ಟಿಕೊಡುತ್ತಿದೆ. ಇವುಗಳು ಪಾರಂಪರಿಕ ಮನೆಗಳಿಂದ ಭಿನ್ನವಾಗಿವೆ. ಮೊದಲೇ ತಿಳಿಸಿದಂತೆ ಪಾರಂಪರಿಕ ಮನೆಗೆ ಬಿದಿರು, ಮಣ್ಣು, ಹುಲ್ಲು ಅಥವಾ ಅಡಕೆಯ ಸೋಗೆಯನ್ನು ಬಳಸಿ ನಿರ್ಮಿಸಲಾಗುತ್ತದೆ. ಆದರೆ ಸರ್ಕಾರದಿಂದ ದೊರೆಯುವ ಈ ಮನೆಗಳು ಇಟ್ಟಿಗೆಯ ಗೋಡೆಗಳು, ತಗಡಿನ ಅಥವಾ ಹೆಂಚಿನ ಮೇಲ್ಛಾವಣಿ, ಕಬ್ಬಿಣದ ಕಿಟಕಿ ಮತ್ತು ಬಾಗಿಲುಗಳನ್ನು ಹೊಂದಿರುತ್ತವೆ. ಕೆಲವು ಕಡೆ ಸಿದ್ದಿಯರು ಸರ್ಕಾರ ತಮಗೆ ಮನೆ ಕಟ್ಟಿಸಿಕೊಡುವ ಸಂದರ್ಭದಲ್ಲಿ ತಮ್ಮ ವಿನ್ಯಾಸಕ್ಕೆ ತಕ್ಕಂತೆ ಕಟ್ಟಿಸಿದ್ದಾರೆ. ಇನ್ನೂ ಕೆಲವು ಕಡೆ ಸರ್ಕಾರದಿಂದ ಯಾವ ರೀತಿಯಾಗಿ ನಿರ್ಮಿಸಲಾಗುತ್ತದೆಯೋ ಅದೇ ರೀತಿಯಾಗಿ ಕಟ್ಟಿಸಿಕೊಂಡಿದ್ದಾರೆ. ಆಶ್ರಯ ಮನೆಗಳನ್ನು ಕಟ್ಟಿಸುವಾಗ ಕೆಲವರು ಮನೆಯ ಒಳಗಡೆ ಕೋಣೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಮನೆಯ ಮುಂದೆ ಸ್ಥಳವಿದ್ದರೆ ಜಗುಲಿಗಳನ್ನು ನಿರ್ಮಾಣ ಮಾಡಿಸಿಕೊಂಡಿದ್ದಾರೆ. ಆಶ್ರಯ ಮನೆಗಳು ಹೆಚ್ಚಿನ ಪ್ರಮಾಣದ ಸಿದ್ದಿಯರಿಗೆ ದೊರೆಯುತ್ತಿವೆ. ಆದರೆ ಅವರ ಪಾರಂಪರಿಕ ವಿನ್ಯಾಸ ಕಡಿಮೆಯಾಗುತ್ತಿರುವುದು ಪ್ರಮುಖವಾಗಿ ಕಂಡುಬರುತ್ತಿದೆ.

ಸಿದ್ದಿಯರು ಮೊದಲು ಪ್ರತ್ಯೇಕವಾಗಿ ವಾಸವಾಗಿದ್ದರು. ಬೇರೆ ಸಮುದಾಯದವರೊಂದಿಗೆ ಬೆರೆಯುತ್ತಿದ್ದಿಲ್ಲ. ಆದರೆ ಇಂದು ಒಂದೇ ಕಾಲೋನಿಯಲ್ಲಿ ಅಥವಾ ಊರಿನಲ್ಲಿ ಹಲವಾರು ಸಮುದಾಯಗಳೊಂದಿಗೆ ಬೆರೆತು ಜೀವನ ನಿರ್ವಹಿಸುತ್ತಿದ್ದಾರೆ. ಇಂದು ಇವರಲ್ಲಿಯೂ ಸಹ ಆಧುನಿಕತೆ ಮತ್ತು ಹೊಸ ವಿನ್ಯಾಸದ ಆಕರ್ಷಣೆಯಿಂದಾಗಿ

ಮನೆಯ ಸುತ್ತಮುತ್ತ ಹೂವು, ಹಣ್ಣಿನ ಗಿಡಗಳನ್ನು ಬೆಳೆಸುತ್ತಿದ್ದಾರೆ. ನಾಗರಿಕ ಸಮಾಜದವರು ಬಳಸುವ ವಸ್ತುಗಳನ್ನು ಆದಷ್ಟು ತಮ್ಮ ಮನೆಯಲ್ಲಿ ತಂದಿಟ್ಟುಕೊಳ್ಳುವ ಪ್ರಯತ್ನ ಸಾಗಿದೆ. ಇದರ ಫಲವಾಗಿ ಮನೆಯಲ್ಲಿ ರೇಡಿಯೋ, ಟಿ.ವಿ., ಫ್ಯಾನ್, ದೂರವಾಣಿ, ಮೊಬೈಲ್ ಮುಂತಾದವುಗಳನ್ನು ಕಾಣಬಹುದಾಗಿದೆ.

ಹಿಂದೂ ಮತ್ತು ಮುಸ್ಲಿಂ ಸಿದ್ದಿ ಸಮುದಾಯದವರಿಗಿಂತ ಕ್ರಿಶ್ಚಿಯನ್ ಸಿದ್ದಿ ಸಮುದಾಯದವರು ಗೃಹೋಪಯೋಗಿ ವಸ್ತುಗಳು ಮತ್ತು ತಾಂತ್ರಿಕತೆಯಲ್ಲಿ ಮುಂದಿದ್ದಾರೆ ಇನ್ನುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸಿದ್ದಿಯರು ಕಟ್ಟಿಕೊಂಡಿರುವ ಎಲ್ಲಾ ಮನೆಗಳು ನೆಲಮನೆಗಳಾಗಿವೆ. ಅಂದರೆ ಬಹುಮಹಡಿ ಕಟ್ಟಡ ಎಲ್ಲಯೂ ಕಂಡುಬರುವುದಿಲ್ಲ. ನಗರದ ಬಾಡಿಗೆ ಮನೆಯು ಬಹುಮಹಡಿಯದ್ದಾಗಿದ್ದರೆ ಅದನ್ನು ಇಲ್ಲಿ ಪರಿಗಣಿಸಲಾಗಿರುವುದಿಲ್ಲ.

ಸಮುದಯದವರ ವಾಸದ ಮನೆಗಳ ಹಿನ್ನೆಲೆಯನ್ನು ಈ ಮುಂದಿನಂತೆ ನೋಡಬಹುದು. ಗೂಗಲ್ ವೆಬ್‌ಸೈಟ್‌ನಲ್ಲಿ ಡಾ॥ ಆರ್.ಎಸ್.ಹಿರೇಮಠ್‌ರವರು ಸಿದ್ದಿಯರ ವಾಸದ ಮನೆಗಳನ್ನು ಕುರಿತು ಪಟ್ಟಿಯನ್ನು ನೀಡಿದ್ದಾರೆ. ಅದನ್ನು ಈ ಮುಂದಿನಂತೆ ನೋಡಬಹುದಾಗಿದೆ.

## Particulars of Siddi Housing

| Sl. No. | Taluka | District | No. of Families | No. of Houses | Composite House | House roof with thatch | With bamboo screen walls & tiles roof | Walls & tiled roof | Burnt brick walls with tiled roof | Janata house | KRDC |
|---|---|---|---|---|---|---|---|---|---|---|---|
| 1 | Ankola | North Karnataka | 124 | 124 | - | 119 | - | - | - | 5 | - |
| 2 | Haliyal | ----,,---- | 555 | 546 | 09 | 151 | 228 | 70 | 10 | 52 | 35 |
| 3 | Joida | ----,,---- | 16 | 16 | - | 11 | 2 | 1 | - | 2 | - |
| 4 | Kalgatagi | ----,,---- | 80 | 78 | 2 | 19 | 33 | 6 | 2 | 4 | - |
| 5 | Khanapur | ----,,---- | 14 | 14 | - | 5 | 6 | 2 | 1 | - | - |
| 6 | Mundagod | ----,,---- | 117 | 106 | 11 | 54 | 13 | 7 | 2 | 19 | 13 |
| 7 | Sirsi | ----,,---- | 22 | 22 | - | 12 | 3 | 4 | - | 3 | - |
| 8 | Yallapur | ----,,---- | 478 | 473 | 5 | 354 | 32 | 13 | 4 | 55 | 13 |
| **Total** | | | **1406** | **1379** | **27** | **725** | **316** | **103** | **19** | **140** | **61** |
| **% Percentage** | | | | | **1.95** | **52.57** | **22.99** | **7.46** | **1.38** | **10.15** | **4.42** |

ಹಿರೇಮಠ್‌ರವರು ನೀಡಿರುವ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ ಹಲವಾರು ತಪ್ಪುಗಳು ಕಂಡುಬರುತ್ತವೆ. ಅವುಗಳೆಂದರೆ, ಕಲಘಟಗಿ ಮತ್ತು ಖಾನಾಪುರ ತಾಲೂಕುಗಳನ್ನು

ಉತ್ತರ ಕನ್ನಡ ಜಿಲ್ಲೆಯ ತಾಲೂಕುಗಳೆಂದು ನಮೂದಿಸಿದ್ದಾರೆ. ಕಲಘಟಗಿಯ ಕುಟುಂಬಗಳ ಸಂಖ್ಯೆಗೂ ಮಾಹಿತಿಗೂ ಹೋಲಿಕೆಯಾಗುತ್ತಿಲ್ಲ. ಮುಂಡಗೋಡು ತಾಲೂಕಿನದು ಇದೇ ಕಥೆ. ಒಟ್ಟು ೧೪೦೬ ಕುಟುಂಬಗಳಿದ್ದು, ೧೩೭೯ ಮನೆಗಳನ್ನು ಹೊಂದಿವೆ. ಹಾಗಾದರೆ ಉಳಿದ ೨೭ ಕುಟುಂಬಗಳ ಕಥೆ ಏನು? ೨೭ ಕುಟುಂಬಗಳಿಗೆ ಮನೆಯಿಲ್ಲ ಎನ್ನುವುದಾದರೆ ಕುಟುಂಬವೆಂದು ಹೇಗೆ ಕರೆಯಲಾಗಿದೆ? ಹೀಗೆ ಹಲವಾರು ತಪ್ಪು ಮತ್ತು ಅರ್ಥರಹಿತ ದಾಖಲೆಗಳು ಸಿಗುತ್ತವೆ. ನನ್ನ ಅಧ್ಯಯನದ ಕ್ಷೇತ್ರಕಾರ್ಯದ ಒಟ್ಟು ಸಿದ್ದಿಯರ ವಸತಿಗಳ ಅಂಕಿ ಸಂಖ್ಯೆಯನ್ನು ಈ ಕೆಳಗಿನಂತೆ ತಿಳಿಯಬಹುದು.

| ಕ್ರ.ಸಂ. | ನಿವೇಶನದ ಮಾದರಿ | ಒಟ್ಟು ಸಂಖ್ಯೆಗಳಲ್ಲಿ | ಶೇಕಡಾವಾರು (%) |
|---|---|---|---|
| ೧ | ಗುಡಾರ | ೧೧ | ೦.೪೧ |
| ೨ | ಗುಡಿಸಲು | ೩೩೬ | ೧೨.೫೩ |
| ೩ | ಟಿನ್‌ಮನೆ | ೦೦ | ೦೦ |
| ೪ | ಡಾಬಾ ಮನೆ | ೦೦ | ೦೦ |
| ೫ | ಆರ್.ಸಿ.ಸಿ. ಮನೆ | ೦೦ | ೦೦ |
| ೬ | ಹೆಂಚಿನ ಮನೆ | ೧೦೬೫ | ೩೯.೭೨ |
| ೭ | ಆಶ್ರಯ ಮನೆ | ೧೨೨೪ | ೪೫.೬೫ |
| ೮ | ಬಾಡಿಗೆ ಮನೆ | ೪೫ | ೧.೬೭ |
| | **ಒಟ್ಟು** | **೨೬೮೧** | **೧೦೦** |

ಸಮುದಾಯದವರ ೨೨೭೮ ಕುಟುಂಬಗಳಿಂದ ೨೬೮೧ ವಸತಿ ಅಥವಾ ಮನೆಗಳನ್ನು ಹೊಂದಿದ್ದಾರೆ. ಹೆಚ್ಚಿನ ಪ್ರಮಾಣದ ಸಿದ್ದಿಯರು ಅಂದರೆ ಶೇ. ೪೫.೬೫ ರಷ್ಟು ಆಶ್ರಯ ಮನೆಯನ್ನು ಹೊಂದಿದ್ದಾರೆ. ಇನ್ನುಳಿದಂತೆ ಶೇ. ೩೯.೭೨ ರಷ್ಟು ಕುಟುಂಬಗಳು ಹೆಂಚಿನ ಮನೆಯಲ್ಲಿ, ಶೇ. ೧೨.೫೩ ರಷ್ಟು ಕುಟುಂಬಗಳು ಗುಡಿಸಲುಗಳಲ್ಲಿ, ಶೇ. ೧.೬೭ ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ, ಶೇ. ೦.೪೧ ರಷ್ಟು ಕುಟುಂಬಗಳು ಗುಡಾರದಲ್ಲಿ ವಾಸವಾಗಿದ್ದಾರೆ. ಸುಮಾರು ಅರ್ಧದಷ್ಟು ಸಿದ್ದಿ ಕುಟುಂಬಗಳಿಗೆ ಆಶ್ರಯ ಮನೆಗಳು ದೊರೆತಿರುವುದು ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಸಿದ್ದಿಯರು ವಾಸವಾಗಿರುವ ಮನೆಗಳ ವಿನ್ಯಾಸದ ತಾಲೂಕುವಾರು ಗ್ರಾಮಗಳ ವಿವರವನ್ನು ಒಳಗೊಂಡ ಹೆಚ್ಚಿನ ಮಾಹಿತಿಯನ್ನು ಅಂಕಿ ಅಂಶಗಳ ಪಟ್ಟಿ – ೩ ರಲ್ಲಿ ಗಮನಿಸಿ.

ಅದೇ ರೀತಿಯಾಗಿ ಮೇಲಿನ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ ಕುಟುಂಬಕ್ಕಿಂತ ಮನೆಗಳು ಹೆಚ್ಚಾಗಿ ಕಂಡುಬರುತ್ತಿವೆ. ಇದಕ್ಕೆ ಹಲವು ಕಾರಣಗಳಿವೆ. ಅವುಗಳೆಂದರೆ ಮನೆಯಲ್ಲಿ ಗಂಡು ಮಕ್ಕಳು ಕೈಗೆ ಬರುವುದನ್ನು ಗಮನಿಸಿದ ಪಾಲಕರು ಮುಂಚಿತವಾಗಿ ಮನೆಗಳನ್ನು ನಿರ್ಮಿಸಿದ್ದಾರೆ. ಅಂದರೆ ಕೆಲವು ಕಡೆ ಒಂದೇ ಕುಟುಂಬ ಎರಡು–ಮೂರು ಮನೆಗಳನ್ನು ಹೊಂದಿದೆ. ಅಲ್ಲದೆ ಸರಕಾರದಿಂದ ಆಶ್ರಯ ಮನೆ ದೊರೆತಾಗ ಆಶ್ರಯ ಮನೆಯ ಜೊತೆ ಮೂಲ ಮನೆಯೂ ಸಹ ಉಳಿಯುತ್ತದೆ. ಈ ರೀತಿಯಾಗಿ ವಸತಿಗಳ ಸಂಖ್ಯೆ ಕುಟುಂಬಕ್ಕಿಂತ ಹೆಚ್ಚಿಗೆ ಇರುವುದು ತಿಳಿಯುತ್ತದೆ.

**೩.೧೬ ಆಹಾರ ಪದ್ಧತಿ**

ಪ್ರತಿಯೊಂದು ಸಮುದಾಯವೂ ತನ್ನದೇ ಆದ ವಿಶಿಷ್ಟ ಆಹಾರ ಪದ್ಧತಿಯನ್ನು ಒಳಗೊಂಡಿರುತ್ತದೆ. ಅದರಲ್ಲಿಯೂ ಮುಖ್ಯವಾಗಿ ಬುಡಕಟ್ಟು ಸಮುದಾಯಗಳು ವಿಶಿಷ್ಟವಾದ ಆಹಾರ ಪದ್ಧತಿಯನ್ನು ಅಳವಡಿಸಿಕೊಂಡಿರುತ್ತವೆ. ಕಾಲ ಬದಲಾದಂತೆಲ್ಲಾ ಬುಡಕಟ್ಟುಗಳ ಆಹಾರ ಪದ್ಧತಿಯಲ್ಲಿಯೂ ಸಹ ಬದಲಾವಣೆಗಳಾಗಿವೆ. ಹಿಂದೆ "ಆದಿ ಮಾನವರು ಹಣ್ಣು–ಹಂಪಲು ಮತ್ತು ಮೊಟ್ಟೆಗಳನ್ನು ಸಂಗ್ರಹಿಸುತ್ತಿದ್ದರು. ತಿನ್ನುವ ಗಡ್ಡೆ–ಗೆಣಸುಗಳನ್ನು ಗಿಡಗಳ ಮತ್ತು ಕಲ್ಲು ಬಂಡೆಗಳ ಆಶ್ರಯದಲ್ಲಿ ಬದುಕುವ ಸಣ್ಣ ಪ್ರಾಣಿಗಳನ್ನು ಕೋಲುಗಳಿಂದ ಮತ್ತು ಕೈಗೊಡಲಿಗಳ ಸಹಾಯದಿಂದ ಕೊಂದು ಅಥವಾ ಕೆದರಿ ಸಂಗ್ರಹಿಸುತ್ತಿದ್ದರು."[೭] ನಂತರ ಆಯುಧಗಳ ಉಪಯೋಗವನ್ನು ಕಂಡುಕೊಂಡು ಆಹಾರ ಸಂಗ್ರಹಣೆಗೆ ದಾರಿ ಮಾಡಿಕೊಂಡನು. ಆಧುನಿಕತೆಯ ಸ್ಪರ್ಶ ಮತ್ತು ಅರಣ್ಯಗಳ ಕಾಯ್ದೆಯಿಂದಾಗಿ ಇಂದು ಬೇಟೆಯಾಡುವುದನ್ನು ನಿಷೇಧಿಸಲಾಗಿದೆ. ಮಾನವ ಭೂಮಿಯ ಮೇಲೆ ಜನ್ಮತಾಳಿದಂದಿನಿಂದ ಇಂದಿನವರೆಗೂ ಆಹಾರಕ್ಕಾಗಿ ಹೋರಾಟ ಮಾಡುತ್ತಿರುವುದನ್ನು ಕಾಣುತ್ತೇವೆ. ಆಹಾರ ಪದ್ಧತಿಯ ಮುಖಾಂತರ ಸಮುದಾಯದ ಸ್ಥಾನವನ್ನು ಗುರುತಿಸುವುದೂ ಸಹ ನಮ್ಮ ಭಾರತೀಯ ಸಮಾಜದಲ್ಲಿ ಕಂಡುಬರುತ್ತದೆ. ಪ್ರಾದೇಶಿಕವಾಗಿ ಆಹಾರ ಸೇವನೆಯಲ್ಲಿ ಭಿನ್ನತೆಗಳು ಗೋಚರಿಸುತ್ತವೆ.

ಹಿಂದೂ, ಮುಸ್ಲಿಂ ಮತ್ತು ಕ್ರಿಶ್ಚಿಯನ್ ಮೂರೂ ಧರ್ಮಗಳಲ್ಲಿ ಹಂಚಿಹೋಗಿದ್ದಾರೆ. ಮೂರೂ ಧರ್ಮದವರು ಮಾಂಸಾಹಾರ ಮತ್ತು ಸಸ್ಯಹಾರ ಎರಡನ್ನೂ ಬಳಸುತ್ತಾರೆ. ಯಾರು ಯಾವ ಸಮುದಾಯದವರ ಮನೆಯಲ್ಲಿ ಬೇಕಾದರೂ ಊಟ ಮಾಡಬಹುದು. ಊಟ ಮಾಡುವುದರಲ್ಲಿ ಯಾವುದೇ ನಿರ್ಬಂಧವಿಲ್ಲ. ಕಾಡಾಡಿಗಳಾದ ಇವರು ಮೂಲತಃ ಮಾಂಸಾಹಾರವನ್ನೇ ಹೆಚ್ಚಾಗಿ ಬಳಸುತ್ತಿದ್ದರು. ಬೇಟೆ ನಿಷೇಧದ ಹಿನ್ನೆಲೆಯಿಂದಾಗಿ ಮಾಂಸಾಹಾರ ಕಡಿಮೆಯಾಗಿದೆ. ಕಾಡಿನಲ್ಲಿ ಸಿಗುವ ಗಡ್ಡೆ–ಗೆಣಸು, ಸೊಪ್ಪು, ಹಣ್ಣುಗಳನ್ನು

ಹೆಚ್ಚಾಗಿ ಆಹಾರವಾಗಿ ಬಳಸುತ್ತಿದ್ದಾರೆ. ಪ್ರಾದೇಶಿಕವಾಗಿ ಹೆಚ್ಚು ದೊರಕುವ ಪದಾರ್ಥಗಳನ್ನು ಆಹಾರಕ್ಕಾಗಿ ಬಳಸುತ್ತಾರೆ.

**೩.೧೬.೧ ಸಸ್ಯಾಹಾರ**

ಮೂಲತಃ ಮಾಂಸಾಹಾರಿಗಳಾಗಿದ್ದರೂ, ಇಂದು ಸಸ್ಯಾಹಾರವನ್ನು ಹೆಚ್ಚಾಗಿ ಬಳಸುತ್ತಿರುವುದು ತಿಳಿದುಬರುತ್ತದೆ. ಮುಂಜಾನೆ, ಮಧ್ಯಾಹ್ನ ಮತ್ತು ರಾತ್ರಿಯ ಊಟಗಳಲ್ಲಿ ಅಂತಹ ಬದಲಾವಣೆಗಳೇನೂ ಕಂಡುಬರುವುದಿಲ್ಲ. ಇವರು ಅಕ್ಕಿ ಮತ್ತು ಜೋಳದ ಪದಾರ್ಥವನ್ನು ಹೆಚ್ಚಾಗಿ ಸೇವಿಸುತ್ತಾರೆ. ಇನ್ನುಳಿದಂತೆ ಗೋದಿ ಮತ್ತು ರಾಗಿಯನ್ನು ಬಳಸುತ್ತಾರೆ. ಅನ್ನ ಇವರ ಪ್ರಮುಖ ಆಹಾರ. ಅಕ್ಕಿ ಅಥವಾ ರಾಗಿಯ ಅಂಬಲಿಯನ್ನು ಸೇವಿಸುತ್ತಾರೆ. ಆ ಅಂಬಲಿಗೆ ಸ್ವಲ್ಪ ಉಪ್ಪು, ಕಾರ ಅಥವಾ ಹುಣಸೆ ಹಣ್ಣಿನ ತಿಳಿಯನ್ನು ಹಿಂಡಿಕೊಂಡು ಸೇವಿಸುವುದು ಸಾಮಾನ್ಯ. ಕಾಡಿನಲ್ಲಿ ದೊರೆಯಬಹುದಾದ ಬೈನೆಗಡ್ಡೆ, ಮಾಂಧಗಡ್ಡೆ, ಗೊಟ್ಟಗಡ್ಡೆ, ಮರಗೆಣಸು, ಈಟ್ಲಗಡ್ಡೆ, ದೂದಾಬೇರು, ಗೊಣ್ಣೆಗಡ್ಡೆ, ಬರಗಾಲಗಡ್ಡೆ, ಕೋನ, ಹಲಸು, ಕಾಡಹಲಸು, ಅಮಟೆಕಾಯಿ, ಕಲ್ಲುಗೆಣಸು, ಮುರುಗುಲಹಣ್ಣು ಮುಂತಾದವುಗಳನ್ನು ತರಕಾರಿಗಳನ್ನಾಗಿ ಸೇವಿಸುತ್ತಾರೆ. ಇವುಗಳನ್ನು ಬಳಸುವ ರೀತಿಯೂ ಸಹ ತುಂಬಾ ವೈವಿಧ್ಯಮಯ. ಉದಾಹರಣೆಗೆ ಮಾಂಧಗಡ್ಡೆ ಇದು ತುಂಬಾ ವಿಷಕಾರಿ ಗಡ್ಡೆ. ಆದರೆ ಇದನ್ನು ಸಂಸ್ಕರಿಸಿ ಆಹಾರವಾಗಿ ಬಳಸಲಾಗುತ್ತದೆ ಎಂದು ಮಾಗೋಡಿನ ಚಂದ್ರೇಶ್ ಸಿದ್ದಿಯವರು ತಿಳಿಸುತ್ತಾರೆ. ಇಂತಹ ವಿಷಕಾರಿ ಗಡ್ಡೆಯನ್ನು ಪೌಷ್ಠಿಕ ಆಹಾರವನ್ನಾಗಿ ಸ್ವೀಕರಿಸುತ್ತಿದ್ದಾರೆ. ಹೀಗೆ ಹಲವಾರು ಬಗೆಯ ಆಹಾರ ಪದಾರ್ಥಗಳನ್ನು ಬಳಸುತ್ತಾರೆ. ಕಾಡಿನಲ್ಲಿ ಹುಣಸೇ ಹಣ್ಣು ಹೆಚ್ಚಾಗಿ ದೊರೆಯುವುದರಿಂದ ಇದರ ಬಳಕೆಯು ಇವರಲ್ಲಿ ಜಾಸ್ತಿ ಇದೆ. ಮಾವಿನ ಕಾಯಿ, ನೆಲ್ಲಿಕಾಯಿ, ಕಾಡುನೆಲ್ಲಿ ದೊರೆಯುವ ಋತುಮಾನದಲ್ಲಿ ಇವುಗಳನ್ನು ಬಳಸುವುದು ಸಾಮಾನ್ಯವಾಗಿದೆ. ಗಡ್ಡೆಗಳಲ್ಲಿ ಗೆಣಸು ಮತ್ತು ಸೊಪ್ಪುಗಳಲ್ಲಿ ಕೆಸುವಿನ ಸೊಪ್ಪು ಇವರಿಗೆ ಅತ್ಯಂತ ಪ್ರಿಯವಾದವುಗಳು.

ಇತ್ತೀಚೆಗೆ ಕೆಲವು ಕುಟುಂಬಗಳು ದನಕರುಗಳನ್ನು ಸಾಕುವುದನ್ನು ರೂಡಿಸಿಕೊಂಡಿದ್ದಾರೆ. ದನಕರುಗಳು ಇದ್ದವರ ಮನೆಯಲ್ಲಿ ಹೈನಿಗೆ ಕೊರತೆಯಿಲ್ಲ. ಆದರೆ ದನ ಸಾಕಾಣಿಕೆ ಮಾಡದವರ ಮನೆಯಲ್ಲಿ ಹಾಲು ಇಲ್ಲದ ಚಹ ಸಾಮಾನ್ಯವಾಗಿರುತ್ತದೆ. ಕೆಲವರು ಕುರಿಯ ಹಾಲನ್ನೂ ಸಹ ಚಹಾಕ್ಕೆ ಬಳಸುವುದುಂಟು. ಯಾರಾದರೂ ಮನೆಯಲ್ಲಿ ಹಾಸಿಗೆ ಹಿಡಿದಾಗ ಹಾಲು, ಮೊಸರು, ಬೆಣ್ಣೆ, ತುಪ್ಪ ಬೇಕಾದರೆ ತಮ್ಮ ಧಣಿಗಳ ಮನೆಯಲ್ಲಿ ಕಾಡಿ ಬೇಡಿ ತರುತ್ತಾರೆ. ಆದರೆ ಇಂದು ಸಮುಧಾಯದಲ್ಲಿ ಕೆಲವರು ದನ ಮತ್ತು ಕುರಿಗಳನ್ನು ಸಾಕಿಕೊಂಡಿರುವುದರಿಂದ ಹೈನಿನ ಪರಿಸ್ಥಿತಿಯಲ್ಲಿ ಸ್ವಲ್ಪ ಸುಧಾರಿಸಿದೆ ಎಂದು ಹೇಳಬಹುದು.

ಇತ್ತೀಚೆಗೆ ಸ್ವಲ್ಪ ಮಟ್ಟಿನ ಹಣಕಾಸಿನ ಚಲಾವಣೆಯಾಗುತ್ತಿರುವುದರಿಂದ ಬೇಳೆ ಕಾಳುಗಳನ್ನು ತಂದು ತಿನ್ನುತ್ತಾರೆ. ರಾಗಿಯನ್ನು ಹೊಲದಲ್ಲಿ ಬೆಳೆಯುತ್ತಾರೆ. ಇಲ್ಲದಿದ್ದರೆ ಮಾರುಕಟ್ಟೆಯಿಂದ ತಂದು ತಿನ್ನುತ್ತಾರೆ. ಮೊದಲಿಗೆ ನಾಗರಿಕ ಸಮಾಜದವರನ್ನು ಕಂಡರೆ ಹೆದರಿ ಓಡಿಹೋಗುತ್ತಿದ್ದರು. ಅಲ್ಲದೆ ಕಿತ್ತು ತಿನ್ನುವ ಬಡತನದ ಸಂದರ್ಭದಲ್ಲಿ ಹಸಿಯಾದ ಗಡ್ಡೆ-ಗೆಣಸುಗಳು, ಒಂದು ಇದ್ದರೆ ಮತ್ತೊಂದು ಇರದೇ ಇರುವ ಪರಿಸ್ಥಿತಿಯಲ್ಲಿ ಹಾಗೇ ತಿನ್ನುತ್ತಿದ್ದರು. ಅಲ್ಲದೆ ಮರದ ತಿರುಳುಗಳು ಮತ್ತು ಸೊಪ್ಪುಗಳನ್ನು ಬಳಸಿ ಜೀವಿಸುತ್ತಿದ್ದರು ಎನ್ನುವುದು ಸಮುದಾಯದ ಹಿರಿಯರಿಂದ ತಿಳಿದುಬರುತ್ತದೆ. ಆದರೆ ಇತ್ತೀಚೆಗೆ ಇವರಲ್ಲಿ ಸುಧಾರಣೆ ಕಂಡುಬರುತ್ತಿದೆ. ಮೆಣಸಿನ ಕಾಳು, ಈರುಳ್ಳಿ, ಬೆಳ್ಳುಳ್ಳಿ, ಕರಿಬೇವು ಮುಂತಾದವುಗಳನ್ನು ಸೇರಿಸಿ ಒಗ್ಗರಣೆ ಕೊಡುತ್ತಾರೆ.

ದೋಸೆ ಇವರ ಪ್ರಿಯವಾದ ಆಹಾರಗಳಲ್ಲೊಂದಾಗಿದೆ. ಅದರಲ್ಲಿಯೂ ತೆಳ್ಳಗಿನ ದೋಸೆ ಎಂದರೆ ಇವರಿಗೆ ಅಚ್ಚುಮೆಚ್ಚು. ಬಡತನವಿರುವುದರಿಂದ ಅಂಬಲಿ ಅಥವಾ ಗಂಜಿಯನ್ನು ಬಿಟ್ಟರೆ ಗತಿಯಿಲ್ಲ ಎನ್ನುವ ಪರಿಸ್ಥಿತಿ ಇರುವುದರಿಂದ ಮನೆಯಲ್ಲಿ ಈ ರೀತಿಯ ತಿನಿಸುಗಳನ್ನು ಮಾಡುವುದು ಅಪರೂಪ. ಜೋಳದ ರೊಟ್ಟಿಯನ್ನು ಹೆಚ್ಚಾಗಿ ಸೇವಿಸುತ್ತಾರೆ. ಜೋಳದಿಂದ ಹಿಟ್ಟು ಅಥವಾ ಮುದ್ದೆಯನ್ನು ಮತ್ತು ಅಂಬಲಿಯನ್ನು ಸಹ ಮಾಡಿಕೊಂಡು ಸೇವಿಸುತ್ತಾರೆ.

ಆಧುನಿಕತೆಯ ಸಂಪರ್ಕದಿಂದಾಗಿ ಸಮುದಾಯದವರು ಬದಲಾವಣೆಯನ್ನು ಹೊಂದುತ್ತಿದ್ದಾರೆ. ದಟ್ಟವಾದ ಅರಣ್ಯದಲ್ಲಿಯೂ ಸಹ ಹಲವಾರು ಗ್ರಾಮಗಳಿಗೆ ರಸ್ತೆ, ಸಾರಿಗೆ, ನೀರು, ವಿದ್ಯುತ್ ಮುಂತಾದವುಗಳ ಸಂಪರ್ಕ ದೊರೆತಿದೆ. ಬೇಕಾದ ಪದಾರ್ಥಗಳನ್ನು ಕೊಂಡುಕೊಂಡು ಹೋಗಿ ಮನೆಯಲ್ಲಿ ಬೇಕಾದ ಆಹಾರವನ್ನು ಸಿದ್ಧಪಡಿಸಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಇಂದಿನ ದಿನಗಳಲ್ಲಿ ಸಾಧ್ಯವಾದಷ್ಟು ಅಂದರೆ ತಮ್ಮ ಆರ್ಥಿಕತೆಗೆ ತಕ್ಕಂತೆ ಬೇಕಾದ ಆಹಾರವನ್ನು ಸೇವಿಸುತ್ತಿರುವುದು ಗಣನೀಯವಾಗಿ ಕಂಡುಬರುತ್ತದೆ. ಕೆಲವು ವಿಶೇಷ ಸಂದರ್ಭದಲ್ಲಿ ಹೋಳಿಗೆ, ಹುಗ್ಗಿ, ಸಜ್ಜಿಕೆ ಮುಂತಾದ ಸಿಹಿ ತಿಂಡಿಗಳನ್ನು ತಯಾರಿಸಿಕೊಳ್ಳುತ್ತಾರೆ.

**೩.೧೬.೨ ಮಾಂಸಾಹಾರ**

ಸಿದ್ದಿಯರು ಹೆಚ್ಚಾಗಿ ಮಾಂಸಾಹಾರ ಪ್ರಿಯರು ಈಗಲೂ ಇವರಿಗೆ ಆಗಾಗ ಮಾಂಸಾಹಾರ ಬೇಕೇ ಬೇಕು. ಮಾಂಸಾಹಾರ ಎಂದರೆ ಚಿಕನ್, ಮಟನ್ ಅಂದರೆ ಕೋಳಿ, ಕುರಿ ಮತ್ತು ಮೀನು ಎಂದು ತಿಳಿಯುವುದಲ್ಲ. ಇವುಗಳನ್ನು ಹೊರತುಪಡಿಸಿ ಇನ್ನೂ ಹತ್ತಾರು ಬಗೆಯ ಮಾಂಸಾಹಾರವನ್ನು ಬುಡಕಟ್ಟು ಸಮುದಾಯಗಳು ಸೇವಿಸುತ್ತವೆ. ಕಾಡಿನಲ್ಲಿ

ದೊರೆಯುವ ಹಲವಾರು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ತಿನ್ನುತ್ತಿದ್ದರು. ನಾಗರಿಕ ಸಮಾಜದೊಂದಿಗೆ ಸಂಪರ್ಕ ಬೆಸೆಯುವ ಪೂರ್ವದಲ್ಲಿ ಬೇಟೆಯನ್ನೇ ಪ್ರಮುಖವಾಗಿ ನೆಚ್ಚಿಕೊಂಡು ಜೀವನ ಸಾಗಿಸುತ್ತಿದ್ದರು. ಸಮುದಾಯದ ಹಲವಾರು ಜನ ಸೇರಿ ಒಟ್ಟಾಗಿ ಬೇಟೆಯಾಡುತ್ತಿದ್ದರು. ಆದರೆ ಇಂದು ಸನ್ನಿವೇಶಕ್ಕೆ ತಕ್ಕಂತೆ ಬದಲಾಗುವ ಅನಿವಾರ್ಯತೆ ಇದೆ. ತಮ್ಮ ಉಪಜೀವನಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಗದ್ದೆಯ ಬದುವಿನಲ್ಲಿ, ನೀರಿನ ಸಣ್ಣ ತೊರೆಯ ಆಜು-ಬಾಜಿನಲ್ಲಿ ದೊರೆಯುವ ಏಡಿಗಳನ್ನು ಹಿಡಿದು ತಂದು ತಿನ್ನುತ್ತಾರೆ. ನದಿ ಅಥವಾ ಹೊಳೆಯಲ್ಲಿ ಹೋಗಿ ಮೀನು ಹಿಡಿದು ತಂದು ತಿನ್ನುತ್ತಾರೆ. ಕಾಡಿನಲ್ಲಿ ದೊರಕುವ ಮೊಲ, ಉಡ, ಮುಳ್ಳಂದಿ, ಕಾಡುಕೋಳಿ, ಜಿಂಕೆ, ಚಿಪ್ಪುಹಂದಿ, ಕಾಡುಹಂದಿ, ಕಾಡುಕುರಿ ಮುಂತಾದವುಗಳನ್ನು ತಿನ್ನುತ್ತಿದ್ದರು. ಈಗ ಪ್ರಾಣಿ ಬೇಟೆ ನಿಷೇಧ ಮಾಡಿರುವುದರಿಂದ ಸರಿಯಾದ ಮಾಂಸಾಹಾರ ತಿನ್ನದಂತಾಗಿದೆ ಎಂದು ಜತ್ಕಾಹೊಸೂರಿನ ಕ್ರಿಶ್ಚಿಯನ್ ಸಿದ್ದಿ ಸಮುದಾಯದ ಜಾನ್‌ರವರು ತಿಳಿಸುತ್ತಾರೆ. ಕಾಡುಹಂದಿ, ಕಾಡುಕುರಿ, ಜಿಂಕೆ ಕಾಡುಗಳಲ್ಲಿ ಅಪರೂಪವಾಗುತ್ತಿವೆ. ಒಂದು ವೇಳೆ ಇಂತಹ ದೊಡ್ಡ ಪ್ರಾಣಿಗಳೇನಾದರೂ ದೊರೆತರೆ ಅಂದು ಹಾಡಿಯಲ್ಲಿ ವಿಶೇಷವಾಗಿಬಿಡುತ್ತದೆ. ಪ್ರಾಣಿಗಳನ್ನು ಬೇಟೆಯಾಡಿದಾಗ ಅವುಗಳನ್ನು ತನ್ನ ಪ್ರಕೃತಿ ದೇವರಿಗೆ ಒಪ್ಪಿಸಿ, ನಂತರ ತನ್ನ ಪರಿವಾರದೊಂದಿಗೆ ತಿನ್ನುತ್ತಾರೆ ಎನ್ನುವ ಅಭಿಪ್ರಾಯವನ್ನು ಹಲವಾರು ಸಿದ್ದಿಯರು ತಿಳಿಸುತ್ತಾರೆ. “ಸಿದ್ದಿಯರ ಈ ಆಚರಣೆಯಲ್ಲಿ ಆಫ್ರಿಕಾ ಜನರಲ್ಲಿ ರೂಢವಾಗಿರುವ ಪ್ರಾಣಿ ಚೇತನ ನಂಬಿಕೆಯ ಪಳೆಯುಳಿಕೆಯನ್ನು ಗುರುತಿಸಬಹುದಾಗಿದೆ.”[೮] ಸಿದ್ದಿಯರು ಕೋಳಿ ಮತ್ತು ಕುರಿಗಳನ್ನು ಸಾಕಿರುತ್ತಾರೆ. ಸಾಕಿದ ಕೂಡಲೇ ಅವುಗಳನ್ನು ತಿನ್ನುವುದಕ್ಕೆ ಎಂದು ಭಾವಿಸುವ ಅವಶ್ಯಕತೆ ಇಲ್ಲ. ಆದರೆ ಸಮುದಾಯದವರು ಮಹಾನವಮಿಯಂದು ಹಿರಿಯರ ಪೂಜೆಯನ್ನು ಪ್ರತಿವರ್ಷ ಆಚರಿಸುತ್ತಾರೆ. ಹಿರಿಯರ ಪೂಜೆಗೆ ಕೋಳಿ ಕೊಯ್ಯುವುದು ಸರ್ವೇ ಸಾಮಾನ್ಯ. ಹಿರಿಯರ ದಿನದ ಮಾರನೆಯ ದಿನ ಕೋಳಿ ಅಥವಾ ಕುರಿಯನ್ನು ಕೊಯ್ದು ಮಾಂಸದ ಅಡುಗೆಯನ್ನು ತಯಾರಿಸುವುದು ಇವರ ಸಂಪ್ರದಾಯವಾಗಿದೆ.

ಸಮುದಾಯದಲ್ಲಿ ಮಾಂಸಾಹಾರಕ್ಕೆ ತಕ್ಕಂತೆ ವಿಧಿನಿಷೇಧಗಳಿಲ್ಲ. ಆದರೆ ಮುಸ್ಲಿಂ ಸಿದ್ದಿಯರು ಮಾತ್ರ ಹಂದಿ ಮತ್ತು ಆಮೆಯನ್ನು ತಿನ್ನಬಾರದು ಎನ್ನುವ ನಿಷೇಧವಿದೆ ಎಂದು ಸಮುದಾಯದ ಕೆಲವು ಹಿರಿಯರು ತಿಳಿಸುತ್ತಾರೆ. ಅಲ್ಲದೆ ಒಂದೇ ಮನೆಯಲ್ಲಿ ಮೂರೂ ಧರ್ಮದ ಸದಸ್ಯರು ಕೂಡಿ ಇರುವಾಗ ಇದು ಅನಿವಾರ್ಯವಾಗಿರುತ್ತದೆ ಮತ್ತು ಸಮುದಾಯದ ಇತರರ ಮನೆಗೆ ಊಟಕ್ಕೆ ಹೋದಾಗ ಇದು ಹಂದಿ, ದನ, ಕುರಿಯ ಮಾಂಸವೋ ಎಂದು ಕೇಳಲಾಗುತ್ತದೆಯೇ? ಎನ್ನುವ ಪ್ರಶ್ನೆಯನ್ನು ಹಲವಾರು ಮುಸ್ಲಿಂ

ಸಿದ್ದಿಯರು ಅಭಿಪ್ರಾಯಪಡುತ್ತಾರೆ. ಅಂದರೆ ಸಮುದಾಯದವರಲ್ಲಿ ಆಹಾರದ ಮೇಲೆ ವಿಧಿನಿಷೇಧಗಳಿಲ್ಲವೆಂದು ತಿಳಿಯುತ್ತದೆ. ಮೂರೂ ಧರ್ಮದವರು ಒಟ್ಟಾಗಿ ಸೇರಿ ಬೇಟೆಯಾಡುವುದು, ಪಂಕ್ತಿ ಭೋಜನ ಮಾಡುವುದು ತಿಳಿಯುತ್ತದೆ.

**೩.೧೬.೩ ವಿಶೇಷ ಸಂದರ್ಭಗಳಲ್ಲಿ ಆಹಾರ ಪದ್ಧತಿ**

ಅಧ್ಯಯನದಲ್ಲಿ ಮೊದಲೇ ತಿಳಿಸಿದಂತೆ ಪ್ರತಿಯೊಂದು ಬುಡಕಟ್ಟು ಸಮುದಾಯಗಳು ತನ್ನದೇ ಆದ ವಿಶಿಷ್ಟ ಆಹಾರ ಪದ್ಧತಿಯನ್ನು ಹೊಂದಿರುತ್ತವೆ. ಇತರೆ ಬುಡಕಟ್ಟು ಸಮುದಾಯಗಳಿಗಿಂತ ಸಿದ್ದಿಯರು ವಿಶೇಷವಾದ ಆಹಾರವೊಂದನ್ನು ತಯಾರಿಸುತ್ತಾರೆ. ಅದುವೇ ಕೆಂಪಿರುವೆ ಮತ್ತು ಜಿಗಳಿಗಳ ಚಟ್ನಿ. ಕೆಂಪಿರುವೆ ಚೆಟ್ನಿ ಸಧ್ಯ ತಿಳಿದ ಮಟ್ಟಿಗೆ ಸಿದ್ದಿ ಸಮುದಾಯದಲ್ಲಿ ಮಾತ್ರ ತಯಾರಿಸಲಾಗುತ್ತದೆ. ಈ ಚಟ್ನಿಯನ್ನು ಬಾಣಂತಿಯರಿಗೆ ಮತ್ತು ನಂಜು ಹತ್ತಿದವರಿಗೆ ಒಳ್ಳೆಯದು ಎಂಬ ಭಾವನೆಯಿದೆ. ಕೆಂಪಿರುವೆ ಮತ್ತು ಜಿಗಳೆಗಳ ಚಟ್ನಿಯು ಹೊಟ್ಟೆಯಲ್ಲಿ ಮತ್ತು ಮೈಯಲ್ಲಿರುವ ನಂಜನ್ನು ತೆಗೆದುಹಾಕುತ್ತದೆ ಎಂದು ಸಿದ್ದಿಯರು ನಂಬುತ್ತಾರೆ. ಈ ಆಹಾರ ಪದ್ಧತಿಯು ಆಫ್ರಿಕಾ ಮೂಲದ್ದೆಂದು ನಂಬಲಾಗಿದೆ.

ಚಿಕ್ಕ ಮರಗಳ ಮೇಲೆ ಅಥವಾ ಪೊದೆಗಳಲ್ಲಿ ಗೂಡು ಕಟ್ಟಿರುವ ಕೆಂಪಿರುವೆಗಳನ್ನು ಒಂದು ಅಗಲವಾದ ಪಾತ್ರೆಯಲ್ಲಿ ಬೀಳುವಂತೆ ಮಾಡುತ್ತಾರೆ. ಎಲ್ಲಾ ಇರುವೆಗಳನ್ನು ಕೆಡವಿಕೊಂಡು ನಂತರ ಒಲೆಯ ಉರಿಗೆ ನೀರನ್ನು ಕುದಿಸುತ್ತಾರೆ. ನಂತರ ಸ್ವಲ್ಪ ನೀರಿರುವ ಆ ಪಾತ್ರೆಗೆ ಕೊಬ್ಬರಿಯನ್ನು ತುರಿದು ಹಾಕುತ್ತಾರೆ. ಬೆಳ್ಳುಳ್ಳಿ ಅಥವಾ ಈರುಳ್ಳಿಯನ್ನು ಸೇರಿಸಿ ನುಣ್ಣಗೆ ರುಬ್ಬಲಾಗುತ್ತದೆ. ಕೆಲವರು ಇದಕ್ಕೆ ಮೆಣಸು ಅಥವಾ ಇನ್ನಿತರ ಸಾಂಬಾರು ಪದಾರ್ಥಗಳನ್ನು ಮಿಶ್ರಣ ಮಾಡುತ್ತಾರೆ. ಈ ಕೆಂಪು ಇರುವೆಯ ಚಟ್ನಿಯು ಔಷಧವಾಗಿ ಇವರಲ್ಲಿ ಬಳಕೆಯಲ್ಲಿದೆ. ಅಲ್ಲದೆ ಮನೆಯಲ್ಲಿನ ಇತರರೂ ಸಹ ಇದನ್ನು ಸೇವಿಸುತ್ತಾರೆ. ಒಟ್ಟಿನಲ್ಲಿ ಕೆಂಪಿರುವೆ ಚೆಟ್ನಿಯನ್ನು ಮನೆ ಮಂದಿಯೆಲ್ಲಾ ಬಳಸುತ್ತಾರೆ.

ಅದೇ ರೀತಿಯಾಗಿ ಋತುಮಾನಕ್ಕನುಸಾರವಾಗಿ ನೋಡುವುದಾದರೆ ಇವರ ಆಹಾರಗಳಲ್ಲಿ ಪ್ರಮುಖ ಬದಲಾವಣೆಗಳೇನೂ ಅಷ್ಟೊಂದು ಕಂಡುಬರುವುದಿಲ್ಲ. ಬೇಸಿಗೆಯಲ್ಲಿ ದೇಹಕ್ಕೆ ತಂಪು ನೀಡುವ ಆಹಾರ ಪದಾರ್ಥಗಳನ್ನು ಹೆಚ್ಚಾಗಿ ಬಳಸಿದರೆ, ಮಳೆಗಾಲ ಮತ್ತು ಚಳಿಗಾಲದಲ್ಲಿ ದೇಹಕ್ಕೆ ಶಾಖವನ್ನು ನೀಡುವ ಆಹಾರ ಪದಾರ್ಥಗಳನ್ನು ತುಸು ಹೆಚ್ಚಾಗಿ ಬಳಸುತ್ತಾರೆ ಅಂದರೆ ಗೋದಿ, ಮಾಂಸ ಮುಂತಾದವುಗಳು.

ಇತ್ತೀಚಿನ ದಿನಗಳಲ್ಲಿ ಬೇಟೆಯಾಡುವುದನ್ನು ನಿಷೇಧಿಸಿರುವ ಹಿನ್ನೆಲೆಯಲ್ಲಿ ಮಾಂಸಾಹಾರದ ಪ್ರಮಾಣ ಕಡಿಮೆಯಾಗಿದೆ. ಅಲ್ಲದೆ ಸ್ವಲ್ಪ ಮಿತಕಾರಿಯಾದರೂ ರುಚಿಗೆ ತಕ್ಕ ಹೆಚ್ಚಿನ ಪದಾರ್ಥಗಳನ್ನು ಬಳಸುತ್ತಿದ್ದಾರೆ. ಮೊದಲಿಗೆ ಒಂದು ಇದ್ದರೆ ಮತ್ತೊಂದು ಆಹಾರ

ಪದಾರ್ಥಗಳು ಇಲ್ಲದಿದ್ದರೂ ಹಾಗೆಯೇ ಸೇವಿಸುತ್ತಿದ್ದರು. ಈಗ ಸ್ವಲ್ಪ ಬದಲಾವಣೆಯಾಗಿದೆ. ಕೆಂಪಿರುವ ಚಟ್ನಿಯು ಮೊದಲಿನಷ್ಟು ರೂಡಿಯನ್ನು ಕಳೆದುಕೊಂಡಿದೆ. ಕಾರಣ ಅನ್ಯ ಸಮುದಾಯದವರು ಗೇಲಿ ಮಾಡುತ್ತಾರೆ ಅಥವಾ ಅಸಹ್ಯಪಡುತ್ತಾರೆ ಎನ್ನುವ ಭಾವನೆಯಿಂದ. ಅಲ್ಲದೆ ಯುವ ಪೀಳಿಗೆ ಶಾಲೆ, ಕಾಲೇಜು ಮೆಟ್ಟಲು ತುಳಿಯಲು ಪ್ರಾರಂಭಿಸಿದ್ದಾರೆ. ಆಧುನಿಕ ಸ್ಪರ್ಶವನ್ನು ಹೊಂದಿದಂತೆಲ್ಲಾ ಇವರಿಗೆ ಈ ಕೆಂಪಿರುವೆ ಚಟ್ನಿಯು ಉಡಾಫೆಯಾಗಿ ಕಾಣಬಹುದಾದ ಸಾಧ್ಯತೆ ಇದೆ. ಔಷಧಿಯಾಗಿ ಬಳಸಲ್ಪಡುತ್ತಿರುವ ಈ ಚಟ್ನಿಯು ಮುಂದೆ ಸಂಪೂರ್ಣವಾಗಿ ಮಾಯವಾದರೂ ಅಚ್ಚರಿಪಡಬೇಕಿಲ್ಲ.

**೩.೧೭ ನ್ಯಾಯ ಪದ್ಧತಿ**

ಮಾನವನು ಭೂಮಿಯ ಮೇಲೆ ಹುಟ್ಟಿದಂದಿನಿಂದ ಇಂದಿನವರೆಗೆ ಒಂದಲ್ಲಾ ಒಂದು ರೀತಿಯ ನ್ಯಾಯ ವ್ಯವಸ್ಥೆಯನ್ನು ರೂಡಿಸಿಕೊಂಡು ಬಂದಿದ್ದಾನೆ. ಆಸ್ತಿ ಅಥವಾ ಮಿಗುತಾಯ ಎಂಬುದು ಅಸ್ಥಿತ್ವಕ್ಕೆ ಬಂದ ಮೇಲೆ ನ್ಯಾಯ ಪದ್ದತಿ ಹೆಚ್ಚಾಗಿ ರೂಡಿಯಾಯಿತು. ಸಿದ್ದಿ ಸಮುದಾಯದವರು ಅನುಸರಿಸುವ ಜೀವನ ವಿಧಾನವು ಅವರ ಕುಲ ಮತ್ತು ಕಟ್ಟಳೆಗಳಲ್ಲಿ ಅಡಕವಾಗಿರುತ್ತದೆ. ಸಿದ್ದಿ ಸಮುದಾಯದವರು ಗುಲಾಮರಾಗಿ, ಒತ್ತಾಯಪೂರ್ವಕವಾಗಿ ಎಳೆದುತಂದಿರುವುದರಿಂದ ಅವರ ಮೂಲ ಸಂಸ್ಕೃತಿ ಮಾಯವಾಗಿದೆ. ಸ್ಥಳೀಯ ಪ್ರಭಾವಿ ಸಮುದಾಯಗಳ ಕೆಲವೊಂದು ಆಚರಣೆಗಳನ್ನು ಅನುಸರಿಸುವುದು ಕಂಡುಬರುತ್ತಿದೆ. ಈ ಸಮುದಾಯದವರು ದಟ್ಟವಾದ ಅರಣ್ಯದಲ್ಲಿ ಒಂದೆಡೆ ಸ್ಥಿರವಾಗಿ ನೆಲೆಯನ್ನು ಕಂಡುಕೊಂಡಿದ್ದಾರೆ. ಮೊದಲಿಗೆ ಈ ಸಮುದಾಯದವರು ಕಾಡಿನಲ್ಲಿ ಒಂದೆಡೆ ನೆಲೆನಿಲ್ಲದೆ ಅರೆ ಅಲೆಮಾರಿಯಾಗಿದ್ದರು. ಬೇರೆಡೆ ಕೆಲಸಕ್ಕೆ ಹೋದರೂ ಮರಳಿ ತಮ್ಮ ಮೂಲ ಸ್ಥಾನಕ್ಕೆ ಬರುವುದರಿಂದ ಇವರು ಇಂದು ಸ್ಥಿರವಾಗಿ ನೆಲೆನಿಂತವರೆಂದು ಹೇಳಬಹುದು. ಸಮುದಾಯದ ಜನರನ್ನು ನಿಯಂತ್ರಿಸಿ ಸಮಾಜವನ್ನು ಉತ್ತಮವಾದ ಮಾರ್ಗದಲ್ಲಿ ಸಾಗಿಸಲು ನ್ಯಾಯವ್ಯವಸ್ಥೆ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಒಂದೆಡೆ ಸ್ಥಿರವಾಗಿ ನೆಲೆನಿಂತ ನಂತರ ತಮ್ಮದೇ ಆದ ನ್ಯಾಯ ಪದ್ದತಿಯನ್ನು ರೂಡಿಸಿಕೊಂಡು ಬಂದರು. ಶಿಕ್ಷಣದಿಂದ ವಂಚಿತವಾದ ಸಮುದಾಯವಾಗಿದ್ದರೂ, ಸಮಾಜವನ್ನು ಸ್ವಾಸ್ತ್ಯವಾಗಿಡುವಲ್ಲಿ ಇವರ ನ್ಯಾಯ ಪದ್ದತಿ ಮಹತ್ವದ್ದಾಗಿದೆ. ನ್ಯಾಯ ಪದ್ದತಿಯಲ್ಲಿ ತಮ್ಮದೇ ಆದ ವಿಧಿ ವಿಧಾನಗಳನ್ನು ಹೊಂದಿದ್ದಾರೆ. ಆಧುನಿಕ ಕಾನೂನು, ನ್ಯಾಯ ವ್ಯವಸ್ಥೆ, ಶಾಸನಗಳ ಬಗೆಗಿನ ತಿಳುವಳಿಕೆ ಇಲ್ಲದಿದ್ದರೂ, ತಮ್ಮದೇ ಆದ ಮಹತ್ವದ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ತಮ್ಮ ಸಮುದಾಯದಲ್ಲಿ ಬರುವ ವ್ಯಾಜ್ಯಗಳನ್ನು ಅಥವಾ ತಂಟೆ ತಕರಾರುಗಳನ್ನು ಕುಲಪಂಚಾಯತಿಯಲ್ಲಿಯೇ ಬಗೆಹರಿಸಲಾಗುತ್ತದೆ. ಆದರೆ ಇದಕ್ಕೆ ಅಪವಾದವೆನ್ನುವಂತೆ ಆಧುನಿಕತೆಯ ಸ್ಪರ್ಶದ ಫಲವಾಗಿ

ಕೆಲವರು ಪೋಲಿಸ್ ಮತ್ತು ನ್ಯಾಯಾಲಯದ ಮೆಟ್ಟಿಲು ಏರುತ್ತಿರುವುದಾಗಿ ಸಮುದಾಯದ ಕೆಲವು ಹಿರಿಯರು ತಿಳಿಸುತ್ತಾರೆ.

ಸಮುದಾಯದಲ್ಲಿ ಸಣ್ಣಪುಟ್ಟ ವ್ಯಾಜ್ಯಗಳಿಂದ ಹಿಡಿದು ಎಷ್ಟೇ ದೊಡ್ಡ ಪ್ರಮಾಣದ ತಂಟೆ ತಕರಾರುಗಳಿದ್ದರೂ ಸಮುದಾಯದ ಕುಲ ಪಂಚಾಯುತಿಯಲ್ಲಿಯೇ ಬಗೆಹರಿಸಲಾಗುತ್ತದೆ. ಸಮುದಾಯದಲ್ಲಿ ಯಾವುದೇ ತಂಟೆ ಕರಾರುಗಳಿದ್ದರೂ ಮೊದಲು ಬುದುವಂತನ ಪತ್ತಿರ ಬರುತ್ತದೆ. ನಂತರ ಬುದುವಂತನು ಕೋಲ್ಕಾರನಿಗೆ ವಿಷಯ ತಿಳಿಸುತ್ತಾನೆ. ಕೋಲ್ಕಾರನು ಮನೆ ಮನೆಗೆ ಹೋಗಿ ವಿಷಯ ಮತ್ತು ಪಂಚಾಯತಿ ಸೇರುವ ಸಮಯವನ್ನು ಸಮುದಾಯದವರಿಗೆ ತಿಳಿಸಿ ಬರುತ್ತಾನೆ. ತಿಳಿಸಿದ ಸಮಯಕ್ಕನುಗುಣವಾಗಿ ಸಮುದಾಯದ ಸದಸ್ಯರು ಪಂಚಾಯತಿ ಹತ್ತಿರ ಸೇರುತ್ತಾರೆ.

**೩.೧೭.೧ ಕುಲ ಪಂಚಾಯತಿಯ ಸ್ವರೂಪ**

ಪ್ರತಿ ಗ್ರಾಮದಲ್ಲಿಯೂ ಒಂದೊಂದು ಸಿದ್ದಿ ಕೂಟಗಳಿರುತ್ತವೆ. ಪ್ರತಿ ಗ್ರಾಮದ ಸಿದ್ದಿ ಕೂಟಕ್ಕೆ ಆ ಗ್ರಾಮದಲ್ಲಿನ ಪ್ರತಿ ಕುಟುಂಬದ ಯಜಮಾನನು ಸದಸ್ಯನಾಗಿರುತ್ತಾನೆ. ಗ್ರಾಮದ ಸಿದ್ದಿ ಕೂಟದ ಸದಸ್ಯರಲ್ಲಿ ಐದು ಜನ ಸದಸ್ಯರನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಇವರನ್ನು ಪಂಚರೆಂದು ಕರೆಯಲಾಗುತ್ತದೆ. ಈ ಪಂಚರಲ್ಲಿ ಒಬ್ಬ ಬುದುವಂತನನ್ನು ಆರಿಸಲಾಗುತ್ತದೆ. ಬುದುವಂತ, ಕೋಲ್ಕಾರರಾದಿಯಾಗಿ ಪಂಚರ ಮುಖಾಂತರ ನ್ಯಾಯ ನಿರ್ಣಯ ಕೈಗೊಳ್ಳಲಾಗುತ್ತದೆ. ಹಿಂದೆ ತಲೆತಲಾಂತರವಾಗಿ ಅಂದರೆ ಅನುವಂಶಿಯವಾಗಿ ಬುದುವಂತರ ಕುಟುಂಬದವರೇ ಮುಖ್ಯಸ್ಥರಾಗಿರುತ್ತಿದ್ದರು. ಇಂದಿಗೂ ಈ ವ್ಯವಸ್ಥೆ ಕಂಡುಬರುವುದಾದರೂ ಕೆಲವು ಮಹತ್ವದ ಬದಲಾವಣೆಗಳಾಗಿವೆ. ಬುದುವಂತನ ಮಗ ಅನೀತಿವಂತನಾಗಿದ್ದರೆ ಅಥವಾ ಅಯೋಗ್ಯನಾಗಿದ್ದರೆ ಕುಟುಂಬದ ಇತರರನ್ನು ಮುಖ್ಯಸ್ಥನನ್ನಾಗಿ ಮಾಡಲಾಗುತ್ತದೆ. ಒಂದು ವೇಳೆ ಕುಟುಂಬದ ಇತರೆ ವ್ಯಕ್ತಿಯೂ ಸಹ ಅನೀತಿವಂತನಾಗಿದ್ದರೆ, ಸಮುದಾಯದ ಅಂಗೀಕಾರದ ಮೂಲಕ ಬೇರೊಬ್ಬ ಸಮರ್ಥನನ್ನು ಆಯ್ಕೆ ಮಾಡಲಾಗುತ್ತದೆ. ಕಾಲ ಗತಿಸಿದಂತೆಲ್ಲಾ ಸಮುದಾಯದ ಜನರು ಅದರಲ್ಲಿಯೂ ಮುಖ್ಯವಾಗಿ ಪ್ರಭಾವಿ ವ್ಯಕ್ತಿಗಳು ಮುಖ್ಯಸ್ಥರನ್ನು ಆಯ್ಕೆ ಮಾಡುವಂತಾಯಿತು. ಸಮುದಾಯದಲ್ಲಿ ಬುದುವಂತನಾಗಬೇಕಾದರೆ ವಂಶಪರಂಪರೆಯೊಂದೇ ಮುಖ್ಯವಾಗುವುದಿಲ್ಲ. ಬದಲಾಗಿ ಸಮರ್ಥನಾದವನಾಗಿರಬೇಕು ಎಂದು ತಿಳಿದುಬರುತ್ತದೆ. ಬುದುವಂತನಿಗೆ ಸಮುದಾಯದಲ್ಲಿ ಅಗ್ರ ಪ್ರಾಶಸ್ತ್ಯ. ಸಮುದಾಯದ ಅತ್ಯಂತ ಪ್ರಭಾವಿ ಮತ್ತು ಉನ್ನತ ಅಂತಸ್ತನ್ನುಳ್ಳ ವ್ಯಕ್ತಿಯಾಗಿರುತ್ತಾನೆ. ಈತನು ನೀತಿ-ನಿಯಮ, ಶಿಸ್ತು, ಸಂಯಮಗಳನ್ನು ಅಚ್ಚುಕಟ್ಟಾಗಿ ಪಾಲಿಸಬೇಕಾಗುತ್ತದೆ. ಇಡೀ ಸಮಾಜ ಈತನನ್ನು ಪ್ರಮುಖವಾಗಿ ಗಮನಿಸುವುದರಿಂದ ಉತ್ತಮ ನಡುವಳಿಕೆಗಳನ್ನು ಹೊಂದಿರಬೇಕಾಗುತ್ತದೆ.

ಒಂದು ವೇಳೆ ಬುದುವಂತನು ಅನೀತಿ ಮಾರ್ಗವನ್ನು ಅನುಸರಿಸಿದರೆ, ಸಮುದಾಯಕ್ಕೆ ವಿರುದ್ಧವಾಗಿ ಇಲ್ಲವೇ ಸಮುದಾಯ ಬಾಹಿರನಾಗಿ ನಡೆದುಕೊಂಡರೆ ಆತನನ್ನು ಕಿತ್ತಿಹಾಕುವ ಅಧಿಕಾರವನ್ನು ಸಮುದಾಯದವರು ಹೊಂದಿರುತ್ತಾರೆ. ಬುದುವಂತ, ಕೋಲ್ಕಾರ ಅಥವಾ ಇತರೆ ಪಂಚರು ಪಕ್ಷಪಾತಿಗಳಾಗಿದ್ದರೆ ಅವರನ್ನು ತೆಗೆದುಹಾಕುವ ಅಧಿಕಾರವನ್ನು ಸಮುದಾಯ ಹೊಂದಿರುತ್ತದೆ.

ಹಿಂದೆ ಮೂರು ಸಮುದಾಯಗಳಿಗೂ ಪ್ರತ್ಯೇಕವಾದ ಕುಲ ಪಂಚಾಯತಿಗಳಿದ್ದುದು ತಿಳಿದುಬರುತ್ತದೆ. ಮುಸ್ಲಿಂ ಧರ್ಮದ ಸಮುದಾಯದವರು 'ಜಮಾತ್' ಎಂದು ಕರೆಯಲ್ಪಡುವ ಕುಲಪಂಚಾಯತಿಯನ್ನು ಹೊಂದಿತ್ತು. ಈಗ ಜಮಾತ್ ಎನ್ನುವ ಹೆಸರಿನ ಸಂಘಟನೆ ರಚನೆಯಾಗಿದೆ. ಹೀಗಾಗಿ ನಂತರದ ದಿನಗಳಲ್ಲಿ ಊರಿನಲ್ಲಿ ಬರುವ ತಂಟೆ ತಕರಾರುಗಳನ್ನು ಬಗೆಹರಿಸಲು ಮೂರೂ ಧರ್ಮದವರಿಗೆ ಒಂದೇ ಪಂಚಾಯತಿಯನ್ನು ಅಸ್ಥಿತ್ವಕ್ಕೆ ತರಲಾಗಿದೆ. ಹಿಂದೆ ಒಂದು ಸಮುದಾಯದವರ ಪಂಚಾಯತಿಗೆ ಇನ್ನೊಂದು ಸಮುದಾಯದವರು ಹೋಗುತ್ತಿರಲಿಲ್ಲ. ಆದರೆ ಇಂದು ಮೂರೂ ಧರ್ಮದವರಿಗೆ ಒಂದೇ ಪಂಚಾಯತಿ ಅಸ್ಥಿತ್ವಕ್ಕೆ ಬಂದಿದೆ. ಇಂದು ಆಧುನಿಕತೆಯ ಸ್ಪರ್ಶದಿಂದಾಗಿ ಇವರ ಕುಲಪಂಚಾಯತಿಗಳು ಶಿಥಿಲಾವಸ್ಥೆಯನ್ನು ಹೊಂದುತ್ತಿವೆ. ಕುಲಪಂಚಾಯತಿಗಳು ಸಮುದಾಯದ ಮೇಲೆ ಮೊದಲು ಹೊಂದಿದ್ದಂತಹ ಹಿಡಿತವನ್ನು ಇಂದು ಹೊಂದಿಲ್ಲ. ಕುಲಪಂಚಾಯತಿಯ ಹಿಡಿತ ಸಡಿಲಗೊಂಡಿದೆ. ಸಾಂಪ್ರದಾಯಿಕ ಮೌಲ್ಯಗಳು ಕಳಾಹೀನವಾಗುತ್ತಿವೆ. ಪಂಚಾಯತಿಯ ನಿರ್ಣಯದ ಸ್ಥಾನಕ್ಕೆ ಪೋಲಿಸ್ ಮತ್ತು ನ್ಯಾಯಾಲಯಗಳು ಲಗ್ಗೆ ಹಾಕಿ ಆ ಸ್ಥಾನವನ್ನು ಆಕ್ರಮಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಆಧುನಿಕತೆಯ ಸೋಗಿನಿಂದಾಗಿ ಯುವಪೀಳಿಗೆಯು ಪಂಚಾಯತಿಯ ನಿರ್ಣಯ ಮತ್ತು ಮುಖ್ಯಸ್ಥನನ್ನು ಪ್ರಶ್ನಿಸುವ ವ್ಯವಸ್ಥೆ ಕಂಡುಬರುತ್ತಿದೆ.

### ೩.೧೭.೨ ಕುಲಪಂಚಾಯತಿ ನಡೆಯುವ ಕ್ರಮ ಮತ್ತು ಶಿಕ್ಷೆಯ ಸ್ವರೂಪ

ಅನ್ಯಾಯಕ್ಕೆ ಒಳಗಾದವನು ಕುಲಪಂಚಾಯತಿಗೆ ಮೊದಲು ದೂರು ನೀಡುತ್ತಾನೆ. ದೂರು ನೀಡಿದ ನಂತರ ಬುದುವಂತನು ಕೋಲ್ಕಾರನಿಗೆ ತಿಳಿಸಿ ಸಮುದಾಯದವರನ್ನು ಯಾವ ಸಮಯಕ್ಕೆ ಪಂಚಾಯತಿ ಕಟ್ಟೆಯ ಹತ್ತಿರ ಬರಬೇಕೆಂದು ತಿಳಿಸುತ್ತಾನೆ. ಅದರ ಪ್ರಕಾರ ಕೋಲ್ಕಾರನು ಸಮುದಾಯದವರ ಮನೆ ಮನೆಗೆ ತೆರಳಿ ತಿಳಿಸಿ ಬರುತ್ತಾನೆ. ಪಂಚಾಯತಿ ಕಟ್ಟೆಯ ಹತ್ತಿರ ಜನ ಮತ್ತು ಮುಖಂಡರು ಸೇರಿದ ನಂತರ ತನಗಾದ ಅನ್ಯಾಯವನ್ನು ದೈವದವರ ಮುಂದೆ ತಿಳಿಸುತ್ತಾನೆ. ನಡೆದ ಘಟನೆಯನ್ನು ವಿವರಿಸುತ್ತಾನೆ. ಆಗ ಆರೋಪಿಯನ್ನು ಕರೆಯಿಸಿ ವಿಚಾರಿಸಲಾಗುತ್ತದೆ. ನಡೆದ ಸತ್ಯ ಘಟನೆಯ ವಿವರಣೆಯನ್ನು

ಕೇಳಲಾಗುತ್ತದೆ. ದೂರು ಸಲ್ಲಿಸಿದವನು ಮತ್ತು ಆರೋಪಿ ಸ್ಥಾನದಲ್ಲಿರುವವರು ಪಂಚಾಯತಿಯ ಮುಂದೆ ಮಾತಿನ ವಾಗ್ವಾದಕ್ಕೆ ಇಳಿಯುವಂತಿಲ್ಲ. ಇಬ್ಬರೂ ಪಂಚಾಯತಿ ಕಟ್ಟೆಯ ಎರಡೂ ಬದಿಗಳಲ್ಲಿ ಎದುರುಬದುರಾಗಿ ತಲೆತಗ್ಗಿಸಿ ನಿಂತುಕೊಂಡಿರಬೇಕಾಗುತ್ತದೆ. ದುರ್ವರ್ತನೆಯಿಂದ ನಡೆದುಕೊಳ್ಳುವುದಕ್ಕೆ ಅವಕಾಶವಿರುವುದಿಲ್ಲ. ಮಧ್ಯದಲ್ಲಿ ಬೇರೆ ಯಾರೂ ಮಾತನಾಡುವಂತಿಲ್ಲ. ಕೇಳಿದ ಪ್ರಶ್ನೆಗಳಿಗೆ ಮಾತ್ರ ಉತ್ತರಿಸಬೇಕು. ನೆರೆದಿರುವ ಜನರೂ ಸಹ ಮಧ್ಯದಲ್ಲಿ ಮಾತನಾಡುವಂತಿಲ್ಲ. ಆದರೆ ಆ ಘಟನೆಗೆ ಸಾಕ್ಷಿಯಾದ ವ್ಯಕ್ತಿಗಳನ್ನು ವಿಚಾರಿಸಲಾಗುತ್ತದೆ. ಪಂಚರೆಲ್ಲರೂ ಸೇರಿ ನಿರ್ಣಯ ತೆಗೆದುಕೊಂಡು ಶಿಕ್ಷೆಯನ್ನು ಪ್ರಕಟಿಸುತ್ತಾರೆ. ಪಂಚರ ನಿರ್ಣಯದಲ್ಲಿ ಏರುಪೇರು ಕಂಡುಬರಬಹುದಾದ ಸಾಧ್ಯತೆ ಇದ್ದಾಗ ಬುದುವಂತ ನೇರ ನಿರ್ಣಯ ತೆಗೆದುಕೊಳ್ಳುತ್ತಾನೆ. ಪಂಚರು ನಿರ್ಣಯ ತೆಗೆದುಕೊಂಡರೂ ಬುದುವಂತನ ನಿರ್ಣಯವೇ ಅಂತಿಮ. ಪಂಚಾಯತಿ ನೀಡಿದ ತೀರ್ಪು ಅಂತಿಮವಾಗಿರುತ್ತದೆ. ಮೇಲ್ಮನವಿ ಸಲ್ಲಿಸುವುದಕ್ಕೆ ಅವಕಾಶವಿರುವುದಿಲ್ಲ.

ಕೆಲವು ಬುಡಕಟ್ಟು ಸಮುದಾಯಗಳಲ್ಲಿ ತಪ್ಪಿತಸ್ಥರಿಗೆ ಘೋರವಾದ ಶಿಕ್ಷೆಯನ್ನು ನೀಡಲಾಗುತ್ತದೆ. "ಇತ್ತೀಚಿನ ದಿನಗಳಲ್ಲೂ ಅಪಾತನಿ ನ್ಯಾಯಾಲಯಗಳು ಕೊಲೆ, ವ್ಯಭಿಚಾರ ಹಾಗೂ ಕಳ್ಳತನಗಳಿಗೆ ಮರಣದಂಡನೆಯನ್ನು ವಿಧಿಸಿವೆ. ದಾಫ್ಲಾ ಜನರು ಅನೀತಿಗೆ ಹೆಸರಾಗಿರುವ ಹುಡುಗಿಯನ್ನು ಬೆತ್ತಲೆ ಮಾಡಿ ಮರಕ್ಕೆ ಕಟ್ಟಿ ಹೊಡೆಯುತ್ತಿದ್ದರು. ಇವರು ಅಪ್ರಾಮಾಣಿಕರಾದ ತಮ್ಮ ಹೆಂಡತಿಯರನ್ನೇ ಹೊಡೆದು ಮರ್ಮಾಂಗಗಳಿಗೆ ನೋವನ್ನುಂಟು ಮಾಡುತ್ತಿದ್ದರು. ಅಪಾತನಿಗಳು ಮತ್ತು ದಾಫ್ಲಾಗಳು ತಮ್ಮ ಸೆರೆಯಾಳುಗಳನ್ನು ಕಬ್ಬಿಣದ ದಸಿಯ ಬೇಲಿಯ ಹಿಂದೆ ಒತ್ತೆಯಾಳುಗಳಾಗಿ ಬಂಧನದಲ್ಲಿಡುತ್ತಿದ್ದರು. ಅನೈತಿಕ ಹುಡುಗಿಯರ ಕೂದಲನ್ನು ಕತ್ತರಿಸುತ್ತಿದ್ದರು. ಅನೈತಿಕ ವರ್ತನೆಗೆ ಮೂಗನ್ನು ಕೊಯ್ಯುವ ಶಿಕ್ಷೆ ಭಾರತದಲ್ಲಿ ಅಲ್ಲಲ್ಲಿ ಅಪರೂಪವಾಗಿ ಕಂಡುಬರುತ್ತವೆ. ಕೆಲವು ಸ್ಥಳಗಳಲ್ಲಿ ಅಂತಹ ಹುಡುಗಿಯರನ್ನು ಬೆತ್ತಲೆಯಾಗಿ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಿದ್ದರು. ಬುಡಕಟ್ಟಿನ ಅಪರಾಧದ ವಿಷಯದಲ್ಲಿ ಬಹಿಷ್ಕಾರ ಎಂಬುದು ಎಷ್ಟು ಶಕ್ತವಾದುದೆಂದರೆ ಬುಡಕಟ್ಟಿನ ಯಾವ ವ್ಯಕ್ತಿಯೂ ಮಂಡಳಿಯ ತೀರ್ಮಾನವನ್ನು ಎದುರಿಸುವಂತಿಲ್ಲ."[೮] ಸಿದ್ದಿಯರಲ್ಲಿ ಈ ರೀತಿಯಾದ ಘೋರ ರೂಪದ ಶಿಕ್ಷೆಗಳಿಲ್ಲ. ಬದಲಾಗಿ ದಂಡ ಕೊಡುವುದು, ಕುಲದಿಂದ ಬಹಿಷ್ಕಾರ, ಶುದ್ಧಿಗೊಳ್ಳುವುದು, ದಂಡಿಸುವುದು ಅಥವಾ ದೈಹಿಕ ಶಿಕ್ಷೆ ನೀಡುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲವೆ ಸಣ್ಣ ಪುಟ್ಟ ತಪ್ಪುಗಳಾಗಿದ್ದರೆ ಇಬ್ಬರ ಮಧ್ಯೆ ರಾಜಿ ಮಾಡಿಸಲಾಗುತ್ತದೆ.

ಮೊದಲಿಗೆ ಸಿದ್ದಿ ಸಮುದಾಯದವರು ಮೇಲು ಜಾತಿಯ ಸಮುದಾಯದವರಿಗೆ ತಪ್ಪು ಮಾಡಿದರೆ ಕೆಲವು ಸಲ ಕಠಿಣ ಶಿಕ್ಷೆಯನ್ನು ನೀಡಲಾಗುತ್ತಿತ್ತು. ಅನ್ಯ ಸಮುದಾಯದವರು ತಪ್ಪು

ಮಾಡಿದ ಸಿದ್ದಿ ವ್ಯಕ್ತಿಯನ್ನು ಕಟ್ಟಿ ಸಾಕಾಗುವಷ್ಟು ಹೊಡೆಯುತ್ತಿದ್ದರು. ಅಲ್ಲದೆ ರಾತ್ರಿ ಪೂರ್ತಿ ಅವನನ್ನು ಕಂಬಕ್ಕೆ ಕಟ್ಟಲಾಗುತ್ತಿತ್ತು. ಊಟವನ್ನು ಕೊಡದೆ ಉಪವಾಸವಿಡಲಾಗುತ್ತಿತ್ತು. ಶಿಕ್ಷೆಗೆ ಒಳಗಾಗಿ ಕಂಬಕ್ಕೆ ಕಟ್ಟಿಸಿಕೊಂಡ ವ್ಯಕ್ತಿಯನ್ನು ಕುಟುಂಬದವರಾಗಲಿ ಅಥವಾ ಸಮುದಾಯದವರಾಗಲಿ ನೆರವಿಗೆ ಬರುವಂತಿಲ್ಲ. ಮೇಲು ಜಾತಿಯ ಅನ್ಯ ಸಮುದಾಯದವರು ಇವರಿಗೆ ಪಶುಗಳಿಗೆ ನೀಡುವಂತೆ ಚಿತ್ರಹಿಂಸೆ ನೀಡುತ್ತಿದ್ದರು. ಆದರೆ ಇಂದು ಇದರ ಚಿತ್ರಣ ಬದಲಾಗಿದೆ. ಇವರು ತಪ್ಪು ಮಾಡಿದರೆ ಬಯ್ಯುವುದು ಇಲ್ಲವೇ ಎಚ್ಚರಿಕೆ ಕೊಡುವುದನ್ನು ಮಾಡುತ್ತಿದ್ದಾರೆ. ದೊಡ್ಡ ಪ್ರಮಾಣದ ತಪ್ಪು ಮಾಡಿದರೆ ಪೋಲಿಸರಿಗೆ ಒಪ್ಪಿಸುವಂತಹ ಸಾಧ್ಯತೆ ಕಂಡುಬರುತ್ತಿದೆ.

ಸಮುದಾಯದಲ್ಲಿ ತಪ್ಪಿತಸ್ಥ ವ್ಯಕ್ತಿಯು ದೊಡ್ಡ ಪ್ರಮಾಣದ ತಪ್ಪನ್ನು ಮಾಡಿದ್ದರೆ ಅಥವಾ ಸಮುದಾಯಕ್ಕೆ ಭಂಗ ತರುವ ಪ್ರಯತ್ನ ಮಾಡಿದ್ದರೆ ಕುಲದಿಂದ ಬಹಿಷ್ಕಾರ ಹಾಕಲಾಗುತ್ತದೆ. ಅಲ್ಲದೆ ಪಂಚಾಯತಿಯು ದಂಡ ವಿಧಿಸಿದಾಗ, ದಂಡವನ್ನು ನಿಗದಿತ ಅವಧಿಯ ಒಳಗೆ ಪಾವತಿ ಮಾಡದಿದ್ದರೆ ಬಹಿಷ್ಕಾರ ಹಾಕುವರು. ಸಮುದಾಯದಿಂದ ಬಹಿಷ್ಕಾರಕ್ಕೆ ಒಳಗಾಗುವುದೆಂದರೆ ಉಗ್ರವಾದ ಶಿಕ್ಷೆಯಾಗಿದೆ. ಆದ್ದರಿಂದ ಇದಕ್ಕೆ ಭಯಪಟ್ಟು ಯಾರೂ ಕುಲಪಂಚಾಯತಿಯ ನಿರ್ಣಯ ತಿರಸ್ಕರಿಸುವುದಿಲ್ಲ. ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿಯನ್ನು ಕುಲದಿಂದ ದೂರವಿಡಲಾಗುತ್ತದೆ. ಅವನೊಂದಿಗೆ ಕುಲಸ್ಥರು ಯಾರೂ ಮಾತನಾಡುವಂತಿಲ್ಲ. ಅವನಿಗೆ ಸಮುದಾಯದವರು ಬೆಂಕಿ, ನೀರು, ಆಹಾರ ಏನನ್ನೂ ಕೊಡುವಂತಿಲ್ಲ. ಒಟ್ಟಿನಲ್ಲಿ ಅವನೊಂದಿಗೆ ಯಾರೂ ಸಂಪರ್ಕವನ್ನು ಹೊಂದುವಂತಿಲ್ಲ. ಒಂದು ವೇಳೆ ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿಯನ್ನು ಸಮುದಾಯದವರು ಯಾರಾದರೂ ಮನೆಯ ಒಳಗೆ ಕರೆದುಕೊಂಡರೆ, ಮಾತನಾಡಿದರೆ ಅಥವಾ ಸಂಪರ್ಕವನ್ನಿಟ್ಟುಕೊಂಡರೆ ಅವರಿಗೂ ಸಹ ದಂಡವನ್ನು ವಿಧಿಸಲಾಗುತ್ತದೆ. ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿಯು ತನ್ನ ತಪ್ಪನ್ನು ಒಪ್ಪಿಕೊಂಡು ದಂಡವನ್ನು ಕಟ್ಟಿ ಅತ್ತು ಕರೆದು ಮಾಡಿದರೆ ಪಂಚಾಯತಿಯು ಶಿಕ್ಷೆಯಿಂದ ಮುಕ್ತಗೊಳಿಸುತ್ತದೆ. ಆಗ ಅವನನ್ನು ಶುದ್ಧ ಮಾಡಿಕೊಂಡು ಕುಲಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಬಹಿಷ್ಕಾರದ ಪ್ರಮಾಣ ಕಡಿಮೆಯಾಗುತ್ತಿದೆ. ಮುಖ್ಯವಾಗಿ ಆಧುನಿಕತೆಯ ಸಂಪರ್ಕದಿಂದಾಗಿ ಸಮುದಾಯದಲ್ಲಿ ಸಂಘಟನೆ, ಗುಂಪುಗಾರಿಕೆ ಹೆಚ್ಚುತ್ತಿರುವುದರ ಫಲವಾಗಿ ಈ ಪ್ರಮಾಣ ಕಡಿಮೆಯಾಗಿದೆ. ಹೊರಗಿನ ಪ್ರಪಂಚದ ಸಂಪರ್ಕದಿಂದಾಗಿ ಸಂವಿಧಾನದ ಅಥವಾ ನ್ಯಾಯಾಂಗ ವಲಯದ ತಿಳುವಳಿಕೆಯ ಫಲವಾಗಿ ಈ ಶಿಕ್ಷೆ ಕಡಿಮೆಯಾಗಿರಬಹುದು.

ತಪ್ಪು ಮಾಡಿದ ವ್ಯಕ್ತಿಗೆ ದಂಡ ವಿಧಿಸುವುದು ಎಲ್ಲಾ ಸಮುದಾಯಗಳಲ್ಲಿ ಕಂಡುಬರುವ ಸಾಮಾನ್ಯ ಶಿಕ್ಷೆಯಾಗಿದೆ. ಅದರಂತೆ ಸಿದ್ದಿ ಸಮುದಾಯದವರಲ್ಲಿಯೂ ಸಹ ತಪ್ಪಿತಸ್ಥರಿಗೆ

ದಂಡ ವಿಧಿಸುವುದು ಪ್ರಮುಖವಾಗಿ ಕಂಡುಬರುತ್ತದೆ. ತಪ್ಪಿನ ಪ್ರಮಾಣವನ್ನು ಆಧರಿಸಿ ಶಿಕ್ಷೆ ಅಥವಾ ದಂಡವನ್ನು ವಿಧಿಸಲಾಗುತ್ತದೆ. ಹಿಂದೆ ಘೋರ ಅಪರಾಧಗಳೆಂದು ಪರಿಗಣಿಸಲಾಗುತ್ತಿದ್ದ ವಿಷಯಗಳನ್ನು ಇಂದು ದಂಡದ ರೂಪದಲ್ಲಿ ಶಿಕ್ಷಿಸಲಾಗುತ್ತಿದೆ. ಹಿಂದೆ ಹುಡುಗಿಯ ಅತ್ಯಾಚಾರ ಮಾಡಿದರೆ ಬಹಿಷ್ಕಾರ ಹಾಕಲಾಗುತ್ತಿತ್ತು. ಆದರೆ ಇಂದಿನ ದಿನಗಳಲ್ಲಿ ಅಂತಹ ಕೃತ್ಯಕ್ಕೆ ಒಂದು ಇಲ್ಲವೇ ಎರಡು ಸಾವಿರ ರೂಪಾಯಿಗಳ ದಂಡ ವಿಧಿಸಿ ಬಗೆಹರಿಸಲಾಗುತ್ತದೆ. ಕೆಲವು ಸಂದರ್ಭದಲ್ಲಿ ಅತ್ಯಾಚಾರ ಮಾಡಿದವನು ಅನ್ಯಾಯಕ್ಕೆ ಒಳಗಾದ ಹುಡುಗಿಯನ್ನು ವಿವಾಹ ಮಾಡಿಕೊಳ್ಳುವ ಶಿಕ್ಷೆಯನ್ನು ನೀಡಲಾಗುತ್ತಿದೆ.

ಸಣ್ಣ ಅಥವಾ ದೊಡ್ಡ ಪ್ರಮಾಣದ ತಪ್ಪುಗಳಿಗೆ ಕೆಲವೊಮ್ಮೆ ದೇವರ ಹೆಸರಿನಲ್ಲಿ ಇಳೆಕಾಯಿ ಇಟ್ಟು ಪಶ್ಚಾತ್ತಾಪ ಪಡುವಂತೆ ಮಾಡಲಾಗುತ್ತದೆ. ಇಳೆಕಾಯಿ ಎಂದರೆ ಎಲೆ, ಅಡಿಕೆ ಮತ್ತು ತೆಂಗಿನ ಕಾಯಿಯನ್ನು ದೇವರಿಗೆ ಅರ್ಪಿಸಿ ತನ್ನ ತಪ್ಪಿಗೆ ಪ್ರಾಯಶ್ಚಿತ್ತವಾಗುವಂತೆ ಮಾಡಲಾಗುತ್ತದೆ. ಆದರೆ, ಇಂದು ದಿನಗಳೆದಂತೆ ಸಮುದಾಯದ ಶಿಕ್ಷೆಯ ಪ್ರಮಾಣದಲ್ಲಿ ಬದಲಾವಣೆ ಕಂಡುಬರುತ್ತಿದೆ. ಅನ್ಯಾಯಕ್ಕೆ ಒಳಗಾದ ವ್ಯಕ್ತಿಯು ಪಂಚಾಯತಿಯ ತೀರ್ಮಾನ ತನಗೆ ತೃಪ್ತಿ ನೀಡದಿದ್ದರೆ ಪೊಲೀಸ್ ಅಥವಾ ನ್ಯಾಯಾಲಯದ ಮೆಟ್ಟಿಲು ಏರುತ್ತಿರುವುದು ಕಂಡುಬರುವ ಅಭಿಪ್ರಾಯವನ್ನು ಸಮುದಾಯದ ಹಲವರು ತಿಳಿಸುತ್ತಾರೆ.

"ನ್ಯಾಯವನ್ನು ಕೊಡುವ ವಿಧಾನಗಳು ದೇಶದಿಂದ ದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ, ಬುಡಕಟ್ಟಿನಿಂದ ಬುಡಕಟ್ಟಿಗೆ ಬೇರೆಯಾಗುತ್ತವೆಂಬುದರಲ್ಲಿ ಸಂದೇಹವಿಲ್ಲ. ಭಿನ್ನ ಪರಿಸರಗಳು, ಆಚಾರ, ವಾತಾವರಣ, ಜೀವನ ನಿರ್ವಹಣೆಯ ವಿಧಾನ ಇತ್ಯಾದಿಗಳು ಇದಕ್ಕೆ ಕಾರಣಗಳಾಗುವುವು."[೧೦] ಸಿದ್ದಿ ಸಮುದಾಯ ದಾಸ್ಯದಿಂದ ತಪ್ಪಿಸಿಕೊಂಡು ದಟ್ಟವಾದ ಅರಣ್ಯವನ್ನು ಸೇರಿದ ಸಮುದಾಯವಾಗಿದೆ. ತಪ್ಪಿಸಿಕೊಂಡು ಬಂದವರೆಲ್ಲಾ ಒಮ್ಮೆಲೆ ಮತ್ತು ಒಂದೆಡೆ ನೆಲೆನಿಂತಿರಲು ಸಾಧ್ಯವಿಲ್ಲದಿರುವುದರಿಂದ ಇವರಲ್ಲಿ ಶಿಕ್ಷೆಯ ಪ್ರಮಾಣ ಅಷ್ಟೊಂದು ದೊಡ್ಡ ಮಟ್ಟದಲ್ಲಿ ಕಂಡುಬರುವುದಿಲ್ಲವೆಂದು ಹೇಳಬೇಕಾಗುತ್ತದೆ. ಆದರೆ ಪಂಚಾಯತಿಯ ವಿಷಯದಲ್ಲಿ ಸಮುದಾಯವು ತನ್ನದೇ ಆದ ಕೆಲವೊಂದು ಕಟ್ಟಳೆಗಳನ್ನು ಒಳಗೊಂಡಿದೆ.

- ಕುಲಪಂಚಾಯತಿ ನೀಡುವ ತೀರ್ಮಾನಕ್ಕೆ ಬದ್ಧವಾಗಿರಬೇಕು.
- ಪಂಚಾಯತಿ ನಡೆಯುವ ಸಂದರ್ಭದಲ್ಲಿ ಆಪಾದಿತ ಮತ್ತು ಅನ್ಯಾಯಕ್ಕೊಳಗಾದವನು ವಾಗ್ವಾದ ಅಥವಾ ಜಗಳಕ್ಕೆ ತೊಡಗುವಂತಿಲ್ಲ.
- ಪಂಚಾಯತಿ ಸಂದರ್ಭದಲ್ಲಿ ಸುಳ್ಳು ಹೇಳಬಾರದು.
- ದಂಡದ ಮೊತ್ತವನ್ನು ನಿಗದಿತ ಸಮಯದೊಳಗೆ ಸಂದಾಯ ಮಾಡಬೇಕು.

- ಪೋಲಿಸ್ ನ್ಯಾಯಾಲಯ ಮೆಟ್ಟಿಲು ಏರಿದರೆ ಕುಲದಿಂದ ತಿರಸ್ಕಾರ.
- ಸಮುದಾಯದ ಮುಖಂಡನಿಗೆ ಬೆಲೆ ನೀಡಬೇಕು.

ಹೀಗೆ ಹತ್ತು ಹಲವಾರು ಕಟ್ಟಳೆಗಳನ್ನು ಒಳಗೊಂಡಿದೆ.

**೩.೧೮ ವೈದ್ಯ ಪದ್ಧತಿ**

ನಾಗರಿಕ ಸಮಾಜದಿಂದ ದೂರವಿದ್ದು, ದಟ್ಟವಾದ ಅರಣ್ಯಗಳಲ್ಲಿ ವಾಸಿಸುತ್ತಿರುವ ಇವರಲ್ಲಿ 'ಇಂದಿಗೂ ನಾಟಿ ವೈದ್ಯ ಪದ್ಧತಿ ರೂಢಿಯಲ್ಲಿದೆ. ಇವರು ನಾಗರಿಕ ಸಮಾಜದ ಔಷಧಿಗಳಿಗಿಂತ ತಮ್ಮ ಸಮುದಾಯದಲ್ಲಿ ರೂಢಿಯಲ್ಲಿರುವ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಕಾಡಾಡಿಗಳಾದ ಸಿದ್ದಿಯರು ಕಾಡಿನಲ್ಲಿ ದೊರೆಯುವ ಔಷಧ ಸಸ್ಯದ ಹೂವು, ಮೊಗ್ಗು, ಎಲೆ, ಚಿಗುರು, ಬೇರುಗಳು, ಚೆಕ್ಕೆಗಳನ್ನು ಬಳಸಿ ಔಷಧಿಗಳನ್ನು ತಯಾರಿಸುತ್ತಾರೆ. ಸಮುದಾಯದ ಹಿರಿಯರು ಔಷಧ ಕೊಡುವುದು ತಿಳಿದುಬರುತ್ತದೆ. ಆದರೆ ಇವರಲ್ಲಿ ನಾಟಿ ಔಷಧ ನೀಡುವ ಪ್ರತ್ಯೇಕ ವೈದ್ಯರುಗಳು ಕಂಡುಬರುವುದಿಲ್ಲ. ಕಾಡಿನಲ್ಲಿಯೇ ವಾಸವಾಗಿರುವುದರಿಂದ ಹೆಚ್ಚಾಗಿ ವಯಸ್ಕರೆಲ್ಲರೂ ಯಾವ ರೋಗಕ್ಕೆ ಯಾವ ಔಷಧ ಎನ್ನುವುದನ್ನು ತಿಳಿದುಕೊಂಡಿರುತ್ತಾರೆ. ಸಮುದಾಯದಲ್ಲಿ ಈ ಔಷಧಿ ಸಸ್ಯಗಳು ಒಬ್ಬರಿಂದ ಇನ್ನೊಬ್ಬರಿಗೆ ಪರಿಚಿತವಾಗುತ್ತವೆ.

ಅರಣ್ಯವೇ ಕೇಂದ್ರಬಿಂದುವಾಗಿರುವುದರಿಂದ ಪ್ರತಿಯೊಂದು ಸಸ್ಯ, ಗೆಡ್ಡೆಗೆಣಸು ಮತ್ತು ಗಿಡಮೂಲಿಕೆಗಳಲ್ಲಿ ನಿಸ್ಸೀಮರು. ಕೆಲವು ಗೆಡ್ಡೆ ಗೆಣಸು ಮತ್ತು ಹಣ್ಣು ಹಂಪಲುಗಳನ್ನು ಬಳಸುವುದರಿಂದ ಕೆಲವೊಂದು ರೋಗ ರುಜಿನಗಳು ಬಾದಿಸುವುದಿಲ್ಲ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ. ಅರಣ್ಯದಲ್ಲಿ ದೊರೆಯುವ  ಗಿಡಮೂಲಿಕೆಗಳನ್ನು ಸಂಗ್ರಹಿಸುತ್ತಾರೆ. ಕೆಲವೊಂದು ಗಿಡಮೂಲಿಕೆಗಳನ್ನು ಅವಶ್ಯಕತೆ ಇದ್ದಾಗ ಮಾತ್ರ ಸಂಗ್ರಹಿಸಲಾಗುತ್ತದೆ. ವ್ಯಕ್ತಿ ಇಲ್ಲವೇ ಮಗುವಿಗೆ ಯಾವ ಕಾಯಿಲೆ ಬಂದಿದೆ ಎನ್ನುವುದನ್ನು ತಿಳಿದುಕೊಂಡು ಅದಕ್ಕೆ ತಕ್ಕುದಾದ ಮೂಲಿಕೆಯನ್ನು ಬಳಸುತ್ತಾರೆ. ಕಾಯಿಲೆಯ ಪ್ರಮಾಣವನ್ನು ಆಧರಿಸಿ ಚಿಕಿತ್ಸೆ ಪಡೆದರೂ ಹಣ ಅಥವಾ ವಸ್ತುಗಳನ್ನು ಪಡೆಯುವುದಿಲ್ಲ. ನಾಟಿ ಔಷಧಿಯನ್ನು ತೆಗೆದುಕೊಳ್ಳುವಾಗ ಸಾಮಾನ್ಯವಾಗಿ ಪತ್ಯ ಮಾಡಲಾಗುತ್ತದೆ. ಇವರು ಮನುಷ್ಯರಿಗೆ ಮಾತ್ರವಲ್ಲದೆ ದನಕರುಗಳು ಹಾಗೂ ಸಸ್ಯಗಳಿಗೂ ಮದ್ದು ನೀಡುವುದು ಕಂಡುಬರುತ್ತದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಸಿದ್ದಿ ಸಮುದಾಯದವರನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವೈದ್ಯ ಪದ್ಧತಿಗೆ ಸಂಬಂಧಿಸಿದಂತೆ ಕೆಲವು ಮಾಹಿತಿಯನ್ನು ಪಡೆಯಲಾಗಿದೆ. ವೈದ್ಯ ಪದ್ಧತಿಗೆ ಸಂಬಂಧಿಸಿದಂತೆ ಇಲ್ಲಿ ಮಾನವ ವೈದ್ಯ, ಪಶು ವೈದ್ಯ ಮತ್ತು ಸಸ್ಯ ವೈದ್ಯವೆಂದು ವಿಭಾಗಿಸಿಕೊಂಡು ಈ ಕೆಳಗಿನಂತೆ ವಿವರಿಸಲಾಗಿದೆ.

### ೩.೧೮.೧ ಮಾನವ ವೈದ್ಯ

'ಕಾಯಿಲೆಗಳು ಮನುಷ್ಯನಿಗೆ ಬರದೆ ಮರಕ್ಕೆ ಬರುತ್ತವೆಯೇ?' ಎನ್ನುವ ನಾಣ್ಣುಡಿ ಪ್ರಸಿದ್ಧಿಯಾಗಿದೆ. ಪ್ರತಿಯೊಂದು ಸಮುದಾಯದಲ್ಲಿ ಮಾನವನಿಗೆ ಕಾಯಿಲೆ ಬರುವುದು ಸರ್ವೇ ಸಾಮಾನ್ಯ. ಆದರೆ ಈ ಕಾಯಿಲೆಗೆ ಕೆಲವೊಂದು ಸಮುದಾಯಗಳು ತಾವೇ ಔಷಧಿಯನ್ನು ಸಿದ್ಧಪಡಿಸಿಕೊಳ್ಳುತ್ತವೆ. ಇದರಿಂದ ಕಾಯಿಲೆಯನ್ನು ಪರಿಹರಿಸಿಕೊಳ್ಳಲಾಗುತ್ತದೆ. ವೈದ್ಯ ಪದ್ಧತಿಯಲ್ಲಿ ಸ್ತ್ರೀ, ಪುರುಷ ಮತ್ತು ಮಕ್ಕಳಿಗೆ ಸಂಬಂಧಿಸಿದಂತೆ ಔಷಧ ಮತ್ತು ಪ್ರಮಾಣದಲ್ಲಿ ಬದಲಾವಣೆ ಇರುತ್ತದೆ. ಒಂದೇ ರೀತಿಯಾದ ಕಾಯಿಲೆ ಇದ್ದರೂ ಸಹ ಮಗುವಿಗೆ ಕಡಿಮೆ ಪ್ರಮಾಣದ ಔಷಧಿಯನ್ನು ನೀಡಿದರೆ, ದೊಡ್ಡವರಿಗೆ ಹೆಚ್ಚಿನ ಪ್ರಮಾಣದ ಔಷಧಿಯನ್ನು ನೀಡಲಾಗುತ್ತದೆ. ಸಮುದಾಯದವರು ಬಾಣಂತಿಯರಿಗೆ ವಿಶೇಷವಾದ ಚಿಕಿತ್ಸಾ ವಿಧಾನವನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಕಾಯಿಲೆಗೆ ಸಂಬಂಧಿಸಿದಂತೆ ವೈದ್ಯ ವಿಧಾನ, ಪ್ರಮಾಣ, ಬಳಸುವ ಮೂಲಿಕೆ ಅಥವಾ ಔಷಧಿಗಳು ಸಮುದಾಯದಿಂದ ಸಮುದಾಯಕ್ಕೆ ಮತ್ತು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ.

**ಕೆಮ್ಮು:** ಜೇನುತುಪ್ಪದೊಂದಿಗೆ ಶುಂಠಿಯನ್ನು ಸೇರಿಸಿ ತಿನ್ನಬೇಕು. ಜೇನುತುಪ್ಪವನ್ನು ಸೇವಿಸುವುದರಿಂದ ಕೆಮ್ಮು ವಾಸಿಯಾಗುತ್ತದೆ. ನಾಲಿಗೆ ಬಿದ್ದು ಕೆಮ್ಮು ಬಂದಿದ್ದರೆ ಜೋಳದ ದಂಟು ಇಲ್ಲವೇ ಹೆಬ್ಬೆರಳಿನ ಮೇಲೆ ಪುಡಿ ಉಪ್ಪನ್ನು ಹಾಕಿಕೊಂಡು ಕಿರುನಾಲಿಗೆಗೆ ಒತ್ತಿಕೊಂಡರೆ ಕೆಮ್ಮು ಕಡಿಮೆಯಾಗುತ್ತದೆ. ಲವಂಗವನ್ನು ತಿನ್ನುವುದರಿಂದ ಅಥವಾ ಕಷಾಯ ಮಾಡಿ ಕುಡಿಯುವುದರಿಂದ ಕೆಮ್ಮು ವಾಸಿಯಾಗುತ್ತದೆ. ಮಕ್ಕಳಿಗೆ ಕೆಮ್ಮು ಬಂದರೆ ಅಜ್ವಾನವನ್ನು ಬಿಸಿನೀರು ಮತ್ತು ಅರಿಶಿನ ಮಿಶ್ರಣ ಮಾಡಿ ಕುಡಿಸಲಾಗುತ್ತದೆ. ಕೆಮ್ಮು ಮತ್ತು ನೆಗಡಿಗೆ ತುಳಸಿಯನ್ನು ತಿನ್ನಲಾಗುತ್ತದೆ.

**ನೆಗಡಿ:** ಇದು ಒಂದು ಅಂಟು ರೋಗವಾಗಿದೆ. ಮೂಗು ಇರುವವರೆಗೆ ನೆಗಡಿ ಸರ್ವೇ ಸಾಮಾನ್ಯವಾದುದು. ಇದರ ಪರಿಹಾರಕ್ಕಾಗಿ ಶುಂಠಿಯನ್ನು ಹೆಚ್ಚಾಗಿ ಬಳಸುತ್ತಾರೆ. ಶುಂಠಿಯಿಂದ ಚಹಾ ಇಲ್ಲವೇ ಗೋದಿಯ ಆಹಾರದಲ್ಲಿ ಇದನ್ನು ಬಳಸಿ ಸೇವಿಸುತ್ತಾರೆ. ಇಲ್ಲವೇ ಅಂಬಲಿಯಲ್ಲಿ ಸೇರಿಸಿ ಕುಡಿಯುತ್ತಾರೆ. ಜೊತೆಗೆ ಮೆಣಸನ್ನು ಕೂಡಾ ಬಳಸುತ್ತಾರೆ. ಕಷಾಯದ ಬೇರಿನಿಂದ ತಯಾರಿಸಲಾದ ಕಷಾಯವನ್ನು ಕುಡಿಯುವುದರಿಂದ ನೆಗಡಿ ದೂರವಾಗುತ್ತದೆ ಎನ್ನುವ ನಂಬಿಕೆ ಸಮುದಾಯದಲ್ಲಿ ಕಂಡುಬರುತ್ತದೆ.

**ವಾತ:** ದೂಪದ ಮರದ ಬೀಜಗಳಿಂದ ಎಣ್ಣೆಯನ್ನು ತೆಗೆದು ಸೇವಿಸುವುದರಿಂದ ವಾತಶೂಲೆ ಹೋಗುತ್ತದೆ ಎಂದು ಯಲ್ಲಾಪುರದ ಮಾರ್ಶಲ್ ಸಿದ್ದಿರವರು ತಿಳಿಸುತ್ತಾರೆ.

**ಸಂದುನೋವು:** ಉಪ್ಪಾಗೆ ಎನ್ನುವ ಗಿಡದ ಬೀಜಗಳಿಂದ ಎಣ್ಣೆಯನ್ನು ತೆಗೆದು ಸಂದುನೋವು ಇರುವ ಸ್ಥಳದಲ್ಲಿ ಹಚ್ಚಿದರೆ ನೋವು ಕಡಿಮೆಯಾಗುತ್ತದೆ. ಅಲ್ಲದೆ ಕೆಲವು ಆಹಾರ ಪದಾರ್ಥಗಳಲ್ಲಿ ಸೇರಿಸಿ ಊಟಕ್ಕಿಂತ ಪೂರ್ವದಲ್ಲಿ ಕುಡಿದರೆ ನೋವು ಮಾಯವಾಗುತ್ತದೆ. ಸಂದುನೋವಿಗೆ ಔಷಧಿಯನ್ನು ಸೇವಿಸುವ ಸಮಯದಲ್ಲಿ ಪತ್ಯೆ ಮಾಡಬೇಕಾಗುತ್ತದೆ. ಮುಖ್ಯವಾಗಿ ನಂಜಿನ ಪದಾರ್ಥಗಳನ್ನು ವರ್ಜಿಸಬೇಕಾಗುತ್ತದೆ.

**ಜ್ವರ:** ಸುವಾಸನೆಯನ್ನು ಹೊಂದಿರುವ ಕಷಾಯದ ಬೇರನ್ನು ನೀರಿನಲ್ಲಿ ಚೆನ್ನಾಗಿ ಕುದಿಸಿ, ಆ ನೀರನ್ನು ಕುಡಿಯಲಾಗುತ್ತದೆ. ಈ ಕಷಾಯಕ್ಕೆ ಕೆಲವು ಕಡೆ ಕಾಳು ಮೆಣಸನ್ನು ಬಳಸುವುದುಂಟು. ತಣ್ಣೀರಿನ ಬಟ್ಟೆಯನ್ನು ಒದ್ದೆ ಮಾಡಿ ಹಣೆಯ ಮೇಲೆ ಹಾಕಲಾಗುತ್ತದೆ. ಕಾಳು ಮೆಣಸು, ಬೆಳ್ಳುಳ್ಳಿ, ಕಷಾಯದ ಬೇರನ್ನು ಕುದಿಸಿ ಮಾಡಿದ ಕಷಾಯವನ್ನು ಕುಡಿಸಲಾಗುತ್ತದೆ.

**ನಿದ್ರಾಹೀನತೆ:** ಕಷಾಯದ ಬೇರನ್ನು ನೇರವಾಗಿ ತಿನ್ನುವುದು ಇಲ್ಲವೇ ಕಷಾಯ ಮಾಡಿಕೊಂಡು ಕುಡಿದರೆ ಸರಿಯಾದ ನಿದ್ರೆ ಬಂದು, ಈ ರೋಗದಿಂದ ಮುಕ್ತಿಯನ್ನು ಪಡೆಯಬಹುದು ಎನ್ನುವ ಅಭಿಪ್ರಾಯ ಸಮುದಾಯದಲ್ಲಿ ತಿಳಿದುಬರುತ್ತದೆ.

**ನಂಜು:** ನಂಜು ಹತ್ತಿದ ವ್ಯಕ್ತಿಗಳಿಗೆ ಮತ್ತು ಬಾಣಂತಿಯರಿಗೆ ಕೆಂಪಿರುವೆ ಚಟ್ನಿಯನ್ನು ಕೊಡಲಾಗುತ್ತದೆ. ಉಳಿದವರೂ ಸಹ ಇದನ್ನು ಬಳಸುತ್ತಾರೆ. ಕೆಂಪಿರುವೆಯನ್ನು ಬೊಗಣಿಯಲ್ಲಿ ಹಾಕಿ ಕುದಿಸುತ್ತಾರೆ, ಅದಕ್ಕೆ ಕೊಬ್ಬರಿ ಪುಡಿ, ಬೆಳ್ಳುಳ್ಳಿ ಇಲ್ಲವೇ ಈರುಳ್ಳಿ ಸೇರಿಸಿ ಅರೆದು ತಿನ್ನುತ್ತಾರೆ. ಬಾಣಂತಿಯರಿಗೆ ಮತ್ತು ನಂಜು ಹತ್ತಿದ ವ್ಯಕ್ತಿಗಳಿಗೆ ಇದನ್ನು ಕಡ್ಡಾಯವಾಗಿ ನೀಡಲಾಗುತ್ತದೆ.

**ಹಲ್ಲುನೋವು ಮತ್ತು ಒಸಡುಗಳ ನೋವು :** ದಾಲ್ಚಿನ್ನಿ ಗಿಡದ ಚಕ್ಕೆಯನ್ನು ಹಲ್ಲು ನೋವು ಇರುವ ಸ್ಥಳದಲ್ಲಿ ಇಟ್ಟುಕೊಳ್ಳುತ್ತಾರೆ. ಇಲ್ಲವೇ ಇದನ್ನು ಪುಡಿ ಮಾಡಿ ಹಲ್ಲಿಗೆ ಮೆತ್ತಿಕೊಳ್ಳುತ್ತಾರೆ. ಇದರಿಂದಾಗಿ ಹಲ್ಲುನೋವು ಮತ್ತು ವಸಡು ನೋವು ಮಾಯವಾಗಿ ಗಟ್ಟಿಯಾಗುತ್ತವೆ ಎನ್ನುವ ನಂಬಿಕೆ ಇದೆ. ಅಲ್ಲದೆ ತಂಬಾಕನ್ನು ಬಾಯಲ್ಲಿಟ್ಟು ಜಗಿದರೆ ನೋವು ಮಾಯವಾಗುತ್ತದೆ ಎನ್ನುವ ನಂಬಿಕೆಯಿದೆ.

**ಅತಿಸಾರ (ಬೇದಿ):** ಆಹಾರವು ಸ್ವಚ್ಛವಿಲ್ಲದಿದ್ದರೆ ಅತಿಸಾರ ಶುರುವಾಗುತ್ತದೆ. ಜೇನುತುಪ್ಪವನ್ನು ಬಿಸಿನೀರಿನೊದಿಗೆ ಸೇವಿಸಿದರೆ ಅತಿಸಾರ ನಿವಾರಣೆಯಾಗುತ್ತದೆ. ಕೋಡುಮುರುಕಿ ಗಿಡದ ಬೇರುಗಳಿಂದ ಕಷಾಯವನ್ನು ಮಾಡಿ ಕುಡಿದರೆ ಅತಿಸಾರ ಕಡಿಮೆಯಾಗುತ್ತದೆ.

**ವಾಂತಿ:** ಸಿದ್ದಿಯರು ವಾಂತಿಯಾಗುವ ಸೂಚನೆ ಕಂಡರೆ ನಿಂಬೆ ಹಣ್ಣಿನ ರಸವನ್ನು ಕುಡಿಯುತ್ತಾರೆ ಇಲ್ಲವೇ ಅದನ್ನು ಮೂಸಿಸುತ್ತಾರೆ, ಏಲಕ್ಕಿಯನ್ನು ತಿನ್ನುತ್ತಾರೆ. ಇದರಿಂದ ವಾಂತಿ ಕಡಿಮೆಯಾಗುತ್ತದೆ.

**ಮರೆವು (ಮರುಗುಳಿ):** ವ್ಯಕ್ತಿಗೆ ಜ್ಞಾಪಕ ಶಕ್ತಿ ಸರಿಯಾಗಿಲ್ಲದಿದ್ದರೆ ಅದನ್ನು ಮರೆವು ಅಥವಾ ಮರುಗುಳಿ ಎಂದು ಕರೆಯಲಾಗುತ್ತದೆ. ಜ್ಞಾಪಕ ಶಕ್ತಿ ಹೆಚ್ಚಾಗಬೇಕಾದರೆ ಮೀನಿನ ಮರಿಯನ್ನು ತಿನ್ನಬೇಕೆನ್ನುವುದು ಸಮುದಾಯದವರ ಬಹುತೇಕ ಅಭಿಪ್ರಾಯವಾಗಿದೆ.

**ಬಾಯಿಹುಣ್ಣು:** ನೆನಹಾಕಿದ ಗಸಗಸೆಯನ್ನು ತಿನ್ನಬೇಕು ಇಲ್ಲವೇ ಒಣಕೊಬ್ಬರಿಯನ್ನು ತಿನ್ನುವುದರಿಂದ ಬಾಯಿ ಹುಣ್ಣು ಮಾಯವಾಗುತ್ತದೆ.

**ಕುರು:** ಇದ್ದಿಲು ಮತ್ತು ಬೆಳ್ಳುಳ್ಳಿಯನ್ನು ತೇಯ್ದು ಹಚ್ಚಬೇಕು ಇಲ್ಲವೇ ಕುರುವಿನ ತಪ್ಪಲು ತಂದು ಕೊಬ್ಬರಿ ಎಣ್ಣೆ ಹಚ್ಚಿ ದೀಪಕ್ಕೆ ಅಥವಾ ಬೆಂಕಿಗೆ ಹಿಡಿದು ಸ್ವಲ್ಪ ಬೆಚ್ಚಗೆ ಮಾಡಿ ಆ ಸ್ಥಳಕ್ಕೆ ಹಚ್ಚಿದರೆ ನೋವು ಮಾಯವಾಗುತ್ತದೆ.

**ಬೆನ್ನುನೋವು:** ಉಡದ ಎಣ್ಣೆ ಅಥವಾ ಕೊಬ್ಬನ್ನು ಬೆನ್ನಿಗೆ ಹಚ್ಚುವುದರಿಂದ ಬೆನ್ನುನೋವು ಕಡಿಮೆಯಾಗುತ್ತದೆ.

**ಹಾವು ಕಡಿತ:** ಹಾವು ಕಡಿದ ಜಾಗವನ್ನು ಗಾಯಗೊಳಿಸಿ ರಕ್ತ ಹೊರಚೆಲ್ಲುವಂತೆ ಮಾಡಲಾಗುತ್ತದೆ. ಹಾವು ಕಡಿದ ಜಾಗಕ್ಕೆ ಕೋಳಿಯ ಗುದದ್ವಾರವನ್ನು ಒತ್ತಿ ಹಿಡಿಯಲಾಗುತ್ತದೆ. ಕೋಳಿ ಸತ್ತುಹೋದರೆ ಆ ವಿಷವನ್ನು ಹೀರಿಕೊಂಡಿದೆ ಎಂದರ್ಥ. ಹಾವು ಕಡಿದ ದಿನದ ರಾತ್ರಿ ವ್ಯಕ್ತಿಯನ್ನು ಮಲಗಲು ಬಿಡುವುದಿಲ್ಲ.

ಹೀಗೆ ಹಲವಾರು ರೋಗಗಳಿಗೆ ಸಮುದಾಯಗಳಲ್ಲಿಯೇ ನಾಟಿ ಔಷಧಗಳನ್ನು ನೀಡಲಾಗುತ್ತದೆ. ಅಂಸಗೋಳಿ ಬೇರು, ಅರಳೆಗಿಡದ ಎಲೆ ಮತ್ತು ತೊಗಟೆಗಳು, ಕರೆ ಉತ್ತತ್ತಿಯ ಕಾಯಿ ಮತ್ತು ತೊಗಟೆ ಮುಂತಾದವುಗಳನ್ನು ಔಷಧಿಯನ್ನಾಗಿ ಬಳಸುತ್ತಾರೆ. ಯಾವುದೇ ರೀತಿಯಾದ ಕಾಯಿಲೆಗಳು ಬಂದರೂ ನಾಟಿ ಔಷಧದ ಮುಖಾಂತರ ಚಿಕಿತ್ಸೆ ನೀಡಿ ಗುಣಪಡಿಸಲಾಗುತ್ತದೆ. ಮೊದಲಿಗೆ ನಾಗರೀಕ ಸಮುದಾಯದೊಂದಿಗೆ ಬೆರೆಯದೆ ಕಣ್ಣುತಪ್ಪಿಸಿಕೊಂಡು ಕಾಡಿನಲ್ಲಿಯೇ ಅಲೆಯುತ್ತಿದ್ದುದರಿಂದ ಪ್ರತಿಯೊಂದು ಸಸ್ಯದ ಉಪಯೋಗಗಳು ಇವರ ತಿಳುವಳಿಕೆಗೆ ಬಂದವು. ಆದರೆ ಇಂದು ನಾಗರೀಕ ಸಮಾಜದೊಂದಿಗೆ ಬೆರೆಯುತ್ತಿದ್ದಾರೆ. ಯಾವುದಾದರೂ ರೋಗ ರುಜಿನಗಳು ಬಂದರೆ ಆಸ್ಪತ್ರೆಗಳಿಗೆ ಬಂದು ಚಿಕಿತ್ಸೆ ಪಡೆಯುತ್ತಿರುವುದು ಕಂಡುಬರುತ್ತಿದೆ. ನಾಟಿ ಔಷಧವನ್ನು ಇಂದಿಗೂ ಬಳಸುತ್ತಿದ್ದಾರೆ. ಅದರ ಜೊತೆಗೆ ದೊಡ್ಡ ಪ್ರಮಾಣದ ರೋಗಗಳು ಬಂದರೆ ಅಥವಾ ಜೀವಕ್ಕೆ ಕುತ್ತು ಬರುವ ಸಂದರ್ಭದಲ್ಲಿ ಮಾತ್ರ ಆಸ್ಪತ್ರೆಗಳನ್ನು ಅವಲಂಬಿಸುತ್ತಿದ್ದಾರೆ.

### ೩.೧೮.೨ ಪಶು ವೈದ್ಯ

ಮಾನವನು ತನ್ನ ಉಪಜೀವನಕ್ಕಾಗಿ ಪಶುಪಾಲನೆಯನ್ನೂ ಸಹ ಅವಲಂಬಿಸಿ ಜೀವಿಸುತ್ತಿದ್ದಾನೆ. ಬೇಟೆಗಾರಿಕೆಯ ಹಂತದಲ್ಲಿ ಸಾದುಪ್ರಾಣಿಗಳನ್ನು ಸಾಕಿಕೊಂಡು ಅವುಗಳನ್ನು ತಿನ್ನುತ್ತಾ, ಸಲಹುತ್ತಾ ಬದುಕನ್ನು ಸಾಗಿಸಿದ. ಜೊತೆಗೆ ಮೇಕೆ, ಹಸುಗಳಂತಹ ಪ್ರಾಣಿಗಳನ್ನು ಸಾಕಲು ಪ್ರಾರಂಭಿಸಿದ. ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳುವಂತೆ, ತಾನು ಸಾಕಿದ ಪ್ರಾಣಿಗಳ ಆರೋಗ್ಯದ ಕಡೆಯೂ ಸಹ ಗಮನಹರಿಸಿದ. ಅವುಗಳು ಲವಲವಿಕೆಯಿಂದಿರುವುದರ ಸಲುವಾಗಿ ಅವುಗಳ ಕಾಯಿಲೆಗೆ ಔಷಧಿಯನ್ನು ಕಂಡುಕೊಂಡ. ಈ ಪದ್ದತಿ ಸಿದ್ದಿಯರಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಇವರು ಮುಖ್ಯವಾಗಿ ಕೃಷಿ ಕೂಲಿಯನ್ನು ಮತ್ತು ಅರಣ್ಯ ಒತ್ತುವರಿ ಮಾಡಿಕೊಂಡ ಭೂಮಿಯಲ್ಲಿ ಕೃಷಿಯನ್ನು ಅನುಸರಿಸುವವರಾಗಿದ್ದಾರೆ. ಸಿದ್ದಿಯರ ಹಲವರ ಮನೆಗಳಲ್ಲಿ ದನಕರುಗಳು ಇತ್ತೀಚೆಗೆ ಕಂಡುಬರುತ್ತಿವೆ. ಅವುಗಳಿಗೆ ರೋಗ ರುಜಿನಗಳು ಇಲ್ಲವೇ ಕಾಯಿಲೆಗಳು ಬಂದಾಗ ಸೂಕ್ತವಾದ ಔಷಧಿಯನ್ನು ನೀಡಿ ಗುಣಮುಖವಾಗುವಂತೆ ಮಾಡುತ್ತಾರೆ.

### ೩.೧೮.೩ ಸಸ್ಯ ವೈದ್ಯ

ಸಮುದಾಯದವರು ಕಾಡಿನ ಮಧ್ಯದಲ್ಲಿ ವಾಸಿಸುವವರಾಗಿದ್ದಾರೆ. ಜೊತೆಗೆ ಕೃಷಿ ಮತ್ತು ಕೃಷಿ ಕೂಲಿಯನ್ನು ಪ್ರಮುಖ ವೃತ್ತಿಯನ್ನಾಗಿಸಿ ಜೀವನ ನಡೆಸುತ್ತಿದ್ದಾರೆ. ಕಾಡಿನಲ್ಲಿ ಮರಗಿಡಗಳಿಗೆ ಬಂದಿರುವ ರೋಗಗಳನ್ನು ಗುರುತಿಸುತ್ತಾರೆ. ಕೃಷಿ ಬೆಳೆಗೆ ತಗಲುವ ಬೂದಿರೋಗ, ನುಸಿಪೀಡೆ, ಕಾಂಡ ಕೊರಕ, ಹಾಲು ಸೋರುವುದು, ಗೆದ್ದಲು ಹಿಡಿಯುವ ರೋಗಕ್ಕೆ ಸೂಕ್ತ ಪರಿಹಾರೋಪಾಯವನ್ನು ಸಮುದಾಯ ಕಂಡುಕೊಂಡಿದೆ. ಬೇವು, ಬೂದಿ, ಉಪ್ಪನ್ನು ಪ್ರಮುಖವಾಗಿ ಬಳಸುವುದರ ಮೂಲಕ ಸಸ್ಯ ಸಂಪತ್ತನ್ನು ಕಾಪಾಡಿಕೊಳ್ಳುತ್ತಾರೆ. ಇಂದಿನ ದಿನಗಳಲ್ಲಿ ಪ್ರಮುಖವಾಗಿ ಮಾರುಕಟ್ಟೆಯಲ್ಲಿ ದೊರೆಯುವ ಕ್ರಿಮಿನಾಶಕವನ್ನು ಬಳಸುತ್ತಿರುವುದು ಸಹ ಕಂಡುಬರುತ್ತದೆ. ಹೀಗೆ ಹಲವಾರು ವಿಧದಲ್ಲಿ ವೈದ್ಯ ಪದ್ದತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

### ೩.೧೯ ನಂಬಿಕೆ–ನಿಷೇಧಗಳು

ನಂಬಿಕೆ ಮತ್ತು ನಿಷೇಧಗಳನ್ನು ಹೊಂದಿರದ ಸಮುದಾಯಗಳನ್ನು ಕಾಣುವುದು ಅಸಾಧ್ಯ. ಇವು ಸಮುದಾಯದ ಬೆಳವಣಿಗೆಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತವೆ. ನಡೆ–ನುಡಿ, ಸಂಪ್ರದಾಯ, ಲೋಕರೂಡಿಗಳು, ನೈತಿಕ ನಿಯಮಗಳು, ಆಚರಣೆ, ನಂಬಿಕೆ–ನಿಷೇಧಗಳು ಸಮುದಾಯದ ಅಲಿಖಿತ ಕಾನೂನುಗಳಾಗಿ ನಿಯಂತ್ರಣ ಕಾರ್ಯವನ್ನು ನಿರ್ವಹಿಸುತ್ತಿರುತ್ತವೆ. ಇವುಗಳನ್ನು ಸಮುದಾಯಗಳು ತಲತಲಾಂತರವಾಗಿ

ಮುಂದುವರೆಸಿಕೊಂಡು ಬಂದಿರುತ್ತವೆ. ಇವುಗಳು ವ್ಯಕ್ತಿಗೆ ಸಮಾಜದಲ್ಲಿ ಶಿಸ್ತನ್ನು ಅಳವಡಿಸಿಕೊಂಡು ಉತ್ತಮವಾದ ಜೀವನ ನಿರ್ವಹಣೆಗೆ ಅನುವು ಮಾಡಿಕೊಡುತ್ತವೆ. ಇವುಗಳಿಗೆ ವಿರುದ್ಧವಾಗಿ ನಡೆದರೆ ಅಂತಹವರನ್ನು ಸಮುದಾಯ ಬಹಿಷ್ಕರಿಸುತ್ತದೆ. ಆದ್ದರಿಂದ ಇವುಗಳನ್ನು ಕಟ್ಟುನಿಟ್ಟಾಗಿ ಅನುಕರಣೆ ಮಾಡಲಾಗುತ್ತದೆ.

ನಂಬಿಕೆ ಮತ್ತು ನಿಷೇಧಗಳು ಈಗ ತಾನೇ ರೂಡಿಯಲ್ಲಿ ಬಂದಿರದೇ ಇವು ವಂಶಪಾರಂಪರ್ಯವಾಗಿ ಅಂದರೆ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸಲ್ಪಟ್ಟಿರುತ್ತವೆ. ಇವುಗಳು ತನ್ನದೇ ಆದ ವಿಧಿ ವಿಧಾನಗಳನ್ನು ಒಳಗೊಂಡು ಆಚರಿಸಲ್ಪಡುತ್ತವೆ. ಇವುಗಳನ್ನು ಕಡ್ಡಾಯವಾಗಿ ಸಮುದಾಯದ ಎಲ್ಲರೂ ಪಾಲಿಸುತ್ತಾ ಬರುತ್ತಾರೆ. ಇವರಿಗೆ ತಮ್ಮದೇ ಆದ ಪ್ರತ್ಯೇಕ ಸಂಸ್ಕೃತಿಯನ್ನು ಅಳವಡಿಸಿಕೊಳ್ಳಲು ದುಸ್ತರವಾಗಿತ್ತು. ಆಗ ಪ್ರಾದೇಶಿಕ ಸಮುದಾಯಗಳ ಸಂಪರ್ಕದಿಂದ ಅದರಲ್ಲಿಯೂ ಹವ್ಯಕರ ಸಂಪರ್ಕದಿಂದಾಗಿ ಅವರ ಹಲವಾರು ನಡೆ-ನುಡಿಗಳನ್ನು ಅನುಕರಣೆ ಮಾಡಿರುವುದು ತಿಳಿದುಬರುತ್ತದೆ.

ಸಿದ್ದಿ ಸಮುದಾಯದವರು ದೃಢಕಾಯಸ್ತರಾಗಿದ್ದರೂ ಸಹ ಅಂಜಿಕೆ ಸ್ವಭಾವವನ್ನು ಹೊಂದಿದ್ದಾರೆ. ಈ ಅಂಜಿಕೆ ಸ್ವಭಾವ ಅವರಲ್ಲಿ ಬರಲು ಪ್ರಮುಖ ಕಾರಣವೆಂದರೆ ಗುಲಾಮಗಿರಿ ಪದ್ಧತಿ. ಅಧ್ಯಯನದಲ್ಲಿ ಮೊದಲೇ ತಿಳಿಸಿದಂತೆ ಇವರನ್ನು ಮೂಲ ಪ್ರದೇಶದಿಂದ ಸಾಗಿಸುವ ಅವಧಿಯಿಂದ ಹಿಡಿದು ಹರಾಜಿನಲ್ಲಿ ಕೊಂಡುಕೊಂಡ ಮಾಲಿಕನವರೆಗೆ ಚಿತ್ರಹಿಂಸೆಯನ್ನು ಅನುಭವಿಸಿರುವುದರಿಂದ ಹೆದರಿಕೆಯ ಸ್ವಭಾವ ಇವರಲ್ಲಿ ಸಾಮಾನ್ಯವಾಗಿರಬಹುದು. ಸಮುದಾಯದವರು ದೆವ್ವ ಭೂತಗಳನ್ನು ಹೆಚ್ಚಾಗಿ ನಂಬುತ್ತಾರೆ. ದೆವ್ವ ಭೂತದ ಪರಿಹಾರಕ್ಕಾಗಿ ಹಲವಾರು ಕ್ರಮಗಳನ್ನು ಕೈಗೊಳ್ಳುತ್ತಾರೆ. ಸಿದ್ದಿನಾಸ, ಹಿರಿಯರು, ಮಾರಿಯಮ್ಮ, ಚೌಡಿ, ಯಲ್ಲಮ್ಮ, ದುರುಗಮ್ಮ, ರೇಣುಕಾದೇವಿ, ಗಣಪತಿ, ವೆಂಕಟೇಶ್ವರ ಮುಂತಾದ ದೇವರುಗಳ ಮೇಲೆ ಹರಕೆ ಕಟ್ಟಿಕೊಳ್ಳುತ್ತಾರೆ. ಜ್ಯೋತಿಷಿಗಳು, ಭಟ್ಟರು ಹೇಳುವ ಮಾರ್ಗದರ್ಶನದಲ್ಲಿ ನಡೆಯುತ್ತಾರೆ. ಇವರು ಯಾವುದೇ ಶುಭ ಕಾರ್ಯಗಳನ್ನು ಕೈಗೊಳ್ಳಬೇಕಾದರೆ ಮೊದಲಿಗೆ ಹಿರಿಯರ ಪೂಜೆಯನ್ನು ಮಾಡಿ ನಂತರ ಮುಂದುವರೆಸುತ್ತಾರೆ.

ಇವರು ಹೆಚ್ಚಾಗಿ ಭಟ್ಟರು ಅಥವಾ ಹವ್ಯಕ ಬ್ರಾಹ್ಮಣರು ನೀಡುವ ಸೂಚನೆ ಮತ್ತು ಮಾರ್ಗದರ್ಶನವನ್ನು ಪ್ರಮುಖವಾಗಿ ಅನುಸರಿಸುತ್ತಾರೆ. ವೈಯಕ್ತಿಕವಾಗಿ, ಕುಟುಂಬದ ಮತ್ತು ಸಮುದಾಯಕ್ಕೆ ಒದಗಿದ ಸಮಸ್ಯೆಗೆ ದೇವರಲ್ಲಿ ಮೊರೆ ಹೋಗುತ್ತಾರೆ ಮತ್ತು ಭಟ್ಟರ ಸೂಚನೆಯನ್ನು ಪಾಲಿಸುತ್ತಾರೆ.

### ೩.೧೯.೧ ನಂಬಿಕೆಗಳು

- ಒಂದೇ ಬಳಿ ಅಥವಾ ಬೆಡಗಿನವರು ಸೋದರ ಸಂಬಂಧಿಗಳು.
- ಮನೆಯ ಮಾಳಿಗೆಯ ಮೇಲೆ ಕಾಗೆ ಕೂಗಿದರೆ ಅತಿಥಿಗಳು ಬರುತ್ತಾರೆ.
- ಮೈಲಿಗೆಯಾದವರನ್ನು ಮುಟ್ಟುವುದು ಅಥವಾ ಮುಟ್ಟಿಸಿಕೊಳ್ಳುವುದು ಅಶುಭ.
- ಹೆಣ್ಣುಮಕ್ಕಳು ಋತುಮತಿಯಾದರೆ ಪ್ರತ್ಯೇಕ ಕೋಣೆ ಅಥವಾ ಒಂದು ಮೂಲೆಯಲ್ಲಿರಬೇಕು.
- ಶುಭ ಕಾರ್ಯಗಳಲ್ಲಿ ಮುತ್ತೈದೆಯರು ಮುಂದಾಗಿ ಕಾರ್ಯನಿರ್ವಹಿಸಿದರೆ ಶ್ರೇಯಸ್ಸು.
- ಹಿರಿಯರು ಎಂದು ಪೂಜಿಸುವ ತೆಂಗಿನ ಕಾಯಿಯಲ್ಲಿ ಮೂರು ತಲೆಮಾರಿನವರು ನೆಲೆಸಿರುತ್ತಾರೆ.
- ಹಿರಿಯರು ಕುಟುಂಬಕ್ಕೆ ಬರುವ ಅಡ್ಡಿ ಆತಂಕಗಳನ್ನು ದೂರ ಮಾಡುತ್ತಾರೆ.
- ಮನೆಗೆ ಏನಾದರೂ ಕೆಡುಕು ಪದೇ ಪದೇ ಸಂಭವಿಸುತ್ತಿದ್ದರೆ, ತಾವು ಹಿರಿಯರಿಗೆ ಏನೋ ತಪ್ಪು ಮಾಡಿದ್ದೇವೆ ಎನ್ನುವ ನಂಬಿಕೆ.
- ಮದುಮಕ್ಕಳು ಹಿರಿಯರ ಆಶೀರ್ವಾದವನ್ನು ಪಡೆದು ಕೋಳು ಪೂಜೆ ಸಲ್ಲಿಸಬೇಕು.
- ಗರ್ಭಿಣಿ ಮಹಿಳೆ ಹೊರಗಡೆ ಹೋಗಬೇಕಾದರೆ ಕಾಲಲ್ಲಿ ಚಪ್ಪಲಿ ಮತ್ತು ಕೈಯಲ್ಲಿ ಕುಡುಗೋಲನ್ನು ಜೊತೆಯಲ್ಲಿ ಒಯ್ಯಬೇಕು.
- ಋತುಮತಿ ಮತ್ತು ಬಾಣಂತಿ ಮಲಗುವ ಸ್ಥಳದಲ್ಲಿ ಚಪ್ಪಲಿ, ಕುಡುಗೋಲು ಇಲ್ಲವೇ ಕಸಪೊರಕೆಯನ್ನು ಇಟ್ಟರೆ ದುಷ್ಟ ಶಕ್ತಿಗಳು ಸುಳಿಯುವುದಿಲ್ಲ.
- ಸತ್ತ ವ್ಯಕ್ತಿಯ ಶವಸಂಸ್ಕಾರಕ್ಕೆ ವಿವಸ್ತ್ರಗೊಳಿಸಬೇಕು.
- ಎದುರಿಗೆ ಹೂ ಬಂದರೆ ಶುಭ.
- ಮೂರು ಸಂಖ್ಯೆ ಅಪಶಕುನ.
- ಹಿರಿಯರಿಗೆ ಮತ್ತು ದೇವರಿಗೆ ಬಲಿ ಕೊಡಬೇಕು.
- ಹಿರಿಯರು ಮತ್ತು ದೇವರುಗಳನ್ನು ನೆನೆದರೆ ದುಷ್ಟ ಶಕ್ತಿಗಳು ಹತ್ತಿರ ಸುಳಿಯುವುದಿಲ್ಲ.
- ಯಾವುದೇ ವಿವಾಹಿತ ಮಹಿಳೆ ಕೂದಲನ್ನು ಬಾಚದೆ ಹಾಗೇ ಕೂದಲನ್ನು ಹರಡಿಕೊಂಡು ಬಂದರೆ ಅಶುಭ.

- ಕಸಪೊರಕೆ ಎದುರು ಬಂದರೆ ಅಥವಾ ಶುಭಕಾರ್ಯಕ್ಕೆ ಹೋಗುವಾಗ ಕಸ ಹೊಡೆಯುತ್ತಿದ್ದರೆ ಅಪಶಕುನ.
- ಕಟ್ಟಿಗೆಯ ಹೊರೆ ಎದುರಿಗೆ ಬಂದರೆ ಅಪಶಕುನ.
- ಋತುಮತಿಯಾದವಳು ಗಂಗೆ ಪೂಜೆ ಮುಗಿಸುವ ದಿನದವರೆಗೆ ಎದ್ದು ಕಂಡಕಂಡಲ್ಲಿ ಓಡಾಡುವಂತಿಲ್ಲ.
- ಋತುಮತಿಯಾದವಳು ಪರಪುರುಷನನ್ನು ನೋಡುವಂತಿಲ್ಲ.
- ಚೊಚ್ಚಲ ಹೆರಿಗೆ ತವರುಮನೆಯಲ್ಲಿಯೇ ನಡೆಯಬೇಕು.
- ಶವ ಸಂಸ್ಕಾರಕ್ಕೆ ಹೋದವರು ನೇರವಾಗಿ ಮನೆಯೊಳಗೆ ಪ್ರವೇಶಿಸುವಂತಿಲ್ಲ.
- ಶುಭ ಕಾರ್ಯಕ್ಕೆ ಹೊರಡುವಾಗ ವಿದವೆಯು ಎದುರು ಬಂದರೆ ಅಪಶಕುನ.

ಹೀಗೆ ಹಲವಾರು ರೀತಿಯ ನಂಬಿಕೆ ನಿಷೇಧಗಳನ್ನು ಹೊಂದಿದ್ದಾರೆ. ಆಧುನಿಕತೆಯ ಸಂಪರ್ಕವಾಗಿದ್ದರೂ. ಈ ಸಂದರ್ಭದಲ್ಲಿಯೂ ಅವರ ನಂಬಿಕೆ ಮತ್ತು ನಿಷೇಧಗಳಲ್ಲಿ ಹೇಳಿಕೊಳ್ಳುವಂತಹ ಗಣನೀಯವಾದ ಬದಲಾವಣೆಗಳೇನೂ ಸಂಭವಿಸಿಲ್ಲದಿರುವುದು ಕಂಡುಬರುತ್ತದೆ.

**೩.೨೦ ಸಮುದಾಯದ ಸಾಮಾಜಿಕ ಸಮಸ್ಯೆಗಳು**

ಆಫ್ರಿಕಾ ದೇಶದಿಂದ ಗುಲಾಮರಾಗಿ ಭಾರತಕ್ಕೆ ಸಿದ್ದಿಗಳು ಬಂದಾಗ ಈ ಬುಡಕಟ್ಟು ಸಮುದಾಯ ದೇಹಸಿರಿಯನ್ನು ಬಿಟ್ಟು ಬೇರೆ ಏನನ್ನೂ ತರಲಿಲ್ಲ. ಸರ್ವಸ್ವವನ್ನೂ ಕಳೆದುಕೊಂಡು ಭಾರತಕ್ಕೆ ಪಾದಾರ್ಪಣೆ ಮಾಡಿದರು. ಈ ಸಮುದಾಯವನ್ನು ಸಮಾಜ ತಿರಸ್ಕೃತ ದೃಷ್ಟಿಯಿಂದ ನೋಡುತ್ತಾ ಬಂದಿದೆ. ಇವರನ್ನು ಅಸ್ಪೃಶ್ಯರನ್ನಾಗಿ ಕಾಣಲಾಗುತ್ತಿತ್ತು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಪ್ರಭಲ ವರ್ಗಗಳ ಕೈಗೊಂಬೆಗಳಾಗಿ ಎಸೆಯಲ್ಪಟ್ಟರು. ನಾಗರಿಕ ಸಮಾಜದವರು ಯಾರಾದರೂ ಕಂಡುಬಂದರೆ ಹೆದರಿಕೆಯಿಂದ ಓಡಿಹೋಗುತ್ತಿದ್ದರು. ಇವರು ಹಲವಾರು ಸಮುದಾಯದವರಿಂದ ನಿರಂತರ ಹಿಂಸೆಯನ್ನು ಅನುಭವಿಸಿ ಇಂದು ತಕ್ಕ ಮಟ್ಟಿಗೆ ಸ್ವತಂತ್ರ ಜೀವನವನ್ನು ನಿರ್ವಹಿಸುತ್ತಿದ್ದಾರೆ. ದೃಢಕಾಯಸ್ಥರಾದ್ದರಿಂದ ಕಡಿಮೆ ಕೂಲಿ ಕೊಟ್ಟು ಹೆಚ್ಚಿನ ಕೆಲಸವನ್ನು ಮಾಡಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇವರನ್ನು ಹೀನಾಯವಾಗಿ ಕಾಣುವುದು ಮತ್ತು ಅವಾಚ್ಯ ಶಬ್ದಗಳಿಂದ ಬಯ್ಯುವುದು ಸರ್ವೇ ಸಾಮಾನ್ಯ. ಸಮುದಾಯದ ಮಹಿಳೆಯರಿಗೆ ಲೈಂಗಿಕ ಕಿರುಕುಳ ನೀಡುತ್ತಿರುವುದು ಇತಿಹಾಸದ ಪುಟಗಳಿಂದ ಇಂದಿನವರೆಗೂ ತಿಳಿಯಬಹುದಾಗಿದೆ.

ಸಮುದಾಯದ ಹೆಚ್ಚಿನ ಸಂಖ್ಯೆಯ ಜನರು ಬಡತನ ರೇಖೆಗಿಂತ ಕೆಳಗಿದ್ದಾರೆ. ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲಾಗದ ಸ್ಥಿತಿಯಲ್ಲಿದ್ದಾರೆ. "ನಾಳಿನ ಚಿಂತೆಯಿಲ್ಲದೆ ತಿರುಗುವ ಇವರಿಗೆ ಪ್ರಾಣಿಗಳಂತೆ ಇಂದು ಹೊಟ್ಟೆ ತುಂಬಿದರಾಯಿತು. ತಮ್ಮ ಭವಿಷ್ಯದ ಬದುಕಿಗಾಗಿ ಸಂಗ್ರಹಿಸಿಟ್ಟುಕೊಳ್ಳುವುದು ಇವರಿಗೆ ಗೊತ್ತಿಲ್ಲ. ಮನೆಯಲ್ಲಿ ಒಂದು ದಿನದ ಊಟಕ್ಕಾದರೂ ಸಾಕು ದುಡಿಯಲು ಹೋಗುವುದೇ ಇಲ್ಲ. ಹಾಗಂತ ಇವರು ಸೋಮಾರಿಗಳೂ ಅಲ್ಲ. ಇವರು ಕ್ರಿಯಾಶೀಲರಾಗಬೇಕಾದರೆ ಇವರ ಹೊಟ್ಟೆ ಹಸಿಯಬೇಕು. ಆಗ ಕೆಲಸಕ್ಕೆ ಇವರು ಹುಲಿಗಳು"[೧೧] ನಾಳಿನ ಬಗೆಗೆ ಚಿಂತೆ ಇಲ್ಲದ ಇವರು ಆಸ್ತಿಯನ್ನು ಸಂಗ್ರಹಿಸಿಕೊಳ್ಳುವ ಸ್ವಭಾವವನ್ನು ಹೊಂದಿಲ್ಲ. ಆದರೆ ಇತ್ತೀಚೆಗೆ ಕಾಲ ಬದಲಾದಂತೆಲ್ಲಾ ಸಂಪತ್ತಿನ ಸಂಗ್ರಹ ಅಥವಾ ದುಡಿಮೆಯ ಕಡೆ ಒಗ್ಗಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇಂದಿಗೂ ಇವರು ಆಳುವ ವರ್ಗವನ್ನು ಅಂದರೆ ಮಾಲಿಕ ವರ್ಗವನ್ನು ಅವಲಂಬಿಸಿಕೊಂಡೇ ಜೀವನ ನಡೆಸಬೇಕಾದ ಅನಿವಾರ್ಯತೆಯನ್ನು ಹೊಂದಿದ್ದಾರೆ.

ಸಮುದಾಯದವರಲ್ಲಿ ಮೊದಲಿಗೆ ಬಾಲ್ಯ ವಿವಾಹ ಪ್ರಮುಖವಾಗಿ ಕಂಡುಬರುತ್ತಿತ್ತು. ಇಂದಿಗೂ ಅಲ್ಲಲ್ಲಿ ಕೆಲವು ಕಡೆ ಕಂಡುಬರುತ್ತಾದರೂ ಇದರ ಪ್ರಮಾಣ ಕಡಿಮೆಯಾಗಿದೆ. ಇವರು ಬಡತನದ ಬೇಗೆಯಲ್ಲಿ ಬೇಯುತ್ತಿರುವುದರಿಂದ ಜೀತದಾಳುಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಜೊತೆಗೆ ಸಮುದಾಯದಲ್ಲಿ ಬಾಲಕಾರ್ಮಿಕರು ಅಥವಾ ಮಕ್ಕಳ ದುಡಿಮೆಯೂ ಸಹ ಪ್ರಮುಖವಾಗಿ ಕಂಡುಬರುತ್ತದೆ. "ಸಮಾಜದ ಸಕಲ ಸಮಸ್ಯೆಗಳಿಗೆ ಶಿಕ್ಷಣವೇ ಸಂಜೀವಿನಿ"[೧೨] ಅಂತಹ ಸಂಜೀವಿನಿ ಸಮುದಾಯದಿಂದ ಬಹುದೂರದಲ್ಲಿದೆ. ಸಮುದಾಯದ ಬಹುತೇಕರು ಅನಕ್ಷರಸ್ಥರಾಗಿದ್ದಾರೆ. ಹೀಗೆ ಹಲವಾರು ರೀತಿಯ ಸಮಸ್ಯೆಗಳನ್ನು ಸಮುದಾಯ ಎದುರಿಸುತ್ತಿದೆ. ಬಡತನವನ್ನು ಸರ್ವ ಸಮಸ್ಯೆಗಳ ಮೂಲ ಅಥವಾ ತಾಯಿ ಎಂದು ಕರೆಯಲಾಗುತ್ತದೆ. ಹೀಗಿರುವಾಗ ಸಮುದಾಯದ ಆರ್ಥಿಕ ಚಟುವಟಿಕೆಗಳು ನೀರಸವಾಗಿ ಕಂಡುಬರುತ್ತವೆ. ತಮ್ಮ ಉಪಜೀವನಕ್ಕಾಗಿ ಕೃಷಿ ಕೂಲಿ ಮತ್ತು ಕೃಷಿಯನ್ನು ಪ್ರಮುಖವಾಗಿ ಅವಲಂಬಿಸಿದ್ದಾರೆ. ಕಾಡಿನ ಮಧ್ಯದಲ್ಲಿ ಸಣ್ಣಪುಟ್ಟ ಅತಿಕ್ರಮಣ ಮಾಡಿಕೊಂಡು ಕೂಲಿನಾಲಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ಇದರಿಂದಲೂ ಅವರಿಗೆ ನೆಮ್ಮದಿ ಇಲ್ಲದಂತಾಗಿದೆ. ಸರಕಾರದವರು ಅತಿಕ್ರಮಣ ಭೂಮಿಯನ್ನು ಯಾವಾಗ ವಶಪಡಿಸಿಕೊಳ್ಳುತ್ತಾರೋ ಎನ್ನುವ ಭಯ ಅವರನ್ನು ಕಾಡುತ್ತಿದೆ. ಮತ್ತೆ ಅತಂತ್ರರಾಗುವ ಸ್ಥಿತಿಯಲ್ಲಿ ಸಮುದಾಯದವರು ಕಂಡುಬರುತ್ತಾರೆ.

ವರ್ತಮಾನದ ಅವಧಿಯಲ್ಲಿ ತೀವ್ರವಾಗಿ ರೂಪಾಂತರಗೊಂಡಿರುವ ಸಾಮಾಜಿಕ ಸ್ಥಿತ್ಯಂತರಕ್ಕೆ ಸಿದ್ದಿ ಸಮುದಾಯ ಪ್ರಮುಖ ಉದಾಹರಣೆಯಾಗಿದೆ. ಈ

ಸಮುದಾಯದಲ್ಲಿ ಕಂಡುಬರುವಂತಹ ಸ್ಥಿತ್ಯಂತರ ಭಾರತದ ಬೇರೆ ಯಾವ ಸಮುದಾಯದಲ್ಲಿ ಇಷ್ಟು ವೇಗದಲ್ಲಿ ಕಂಡುಬರಲಿಕ್ಕಿಲ್ಲ. ಬದಲಾದ ಭಾರತೀಯ ಸಮಾಜದ ಆರ್ಥಿಕ ಮತ್ತು ರಾಜಕೀಯ ಸನ್ನಿವೇಶಗಳಿಗೆ ತಕ್ಕಂತೆ ತಮ್ಮ ಸ್ಥಿತಿಗತಿಗಳನ್ನು ಬದಲಾಯಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ. ಸಮುದಾಯದಲ್ಲಿ ಬಡತನದ ಜೊತೆಗೆ ನಿರುದ್ಯೋಗ ಪ್ರಮುಖವಾಗಿ ಕಾಡುತ್ತಿದೆ. ಕೃಷಿ ಕೂಲಿಯ ಕೆಲಸ ಇವರಿಗೆ ತೃಪ್ತಿ ನೀಡಿಲ್ಲವಾದರೂ ಅನಿವಾರ್ಯವಾಗಿದೆ. ಸರ್ಕಾರ ಇವರ ಸಮಸ್ಯೆಗಳನ್ನು ಬಗೆಹರಿಸುವುದರ ಮೂಲಕ ಇವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನ ಮಾಡಬೇಕಾಗಿದೆ. ಇವರ ಜೀವನಕ್ಕೆ ಭದ್ರತೆಯನ್ನು ಒದಗಿಸಬೇಕಾಗಿದೆ. ಸರ್ಕಾರದಿಂದ ಪರಿಶಿಷ್ಟ ಪಂಗಡದವರಿಗೆ ದೊರೆಯಬೇಕಾದ ಸೌಲಭ್ಯಗಳನ್ನು ಇವರಿಗೆ ಸಂಪೂರ್ಣವಾಗಿ ಒದಗಿಸಿದರೆ ಮಾತ್ರ ಪರಿಸ್ಥಿತಿ ಸುಧಾರಿಸಬಹುದು. ಜೊತೆಗೆ ಇಂತಹ ಪ್ರಯತ್ನದಲ್ಲಿ ಸರ್ಕಾರೇತರ ಸಂಘಟನೆಗಳು ಸ್ವಾರ್ಥರಹಿತವಾಗಿ ಕಾರ್ಯನಿರ್ವಹಿಸಿದರೆ ಮಾತ್ರ ಸಮುದಾಯದ ಅಭಿವೃದ್ಧಿಯನ್ನು ಕಾಣಬಹುದು.

**೩.೨೧ ವರ್ತಮಾನದ ಸ್ಥಿತಿಗತಿಗಳು**

ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಪ್ರಮುಖ ಮತ್ತು ವಿಶಿಷ್ಟ ಬುಡಕಟ್ಟು ಸಮುದಾಯಗಳಲ್ಲೊಂದಾಗಿದೆ. ಇನ್ನುಳಿದಂತೆ ಈ ಸಮದಾಯದವರು ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಗೋದಳ್ಳಿ, ಗೋದುಗೇರ, ತಾವರಕಟ್ಟ, ಬೋರುಣುಕಿ ಪ್ರದೇಶಗಳಲ್ಲಿ. ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಡುಮುಗೊಳ್ಳಿ, ಕಂದ್ಲಿ, ಸುರೇಕಟ್ಟಾ, ಸಂಗಮೇಶ್ವರ, ಕೂಡಲಗಿ, ಜುಂಜರಬೈಲ್ ಮತ್ತು ಧಾರವಾಡ ತಾಲೂಕಿನ ಅಂಬಲಿಕೊಪ್ಪ ಪ್ರದೇಶದಲ್ಲಿ ಕಂಡುಬರುತ್ತಾರೆ. ಆದರೆ ಸಿದ್ದಿ ಸಮುದಾಯದವರ ಅಧ್ಯಯನಕ್ಕೆ ಉತ್ತರ ಕನ್ನಡ ಜಿಲ್ಲೆಯನ್ನು ಮಾತ್ರ ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಈ ಪ್ರದೇಶದಲ್ಲಿ ಇವರು ಹೆಚ್ಚಾಗಿ ನೆಲೆಸಿರುವುದರಿಂದ ಈ ಜಿಲ್ಲೆಯನ್ನು ಆಯ್ದುಕೊಳ್ಳಲಾಗಿದೆ. ಈ ಸಮುದಾಯದ ಸ್ಥಿತಿಗತಿಯನ್ನು ಅರಿಯುವುದರ ಸಲುವಾಗಿ ಸಮುದಾಯದ ಹಲವಾರು ತಿಳುವಳಿಕೆದಾರರನ್ನು ಸಂದರ್ಶಿಸಲಾಗಿದೆ. ಈ ಸಂದರ್ಶನದ ಮೂಲಕ ಸಮುದಾಯದ ಸ್ಥಿತಿಗತಿಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಕೆಲವೊಂದು ಇತರೆ ಬುಡಕಟ್ಟು ಸಮುದಾಯಗಳೊಂದಿಗೆ ಸಂಪರ್ಕವನ್ನಿಟ್ಟುಕೊಂಡು ಇವರ ಸ್ಥಿತಿಗತಿಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಸಮುದಾಯದವರು ನೆಲೆಸಿರುವ ಹಲವಾರು ಗ್ರಾಮಗಳಿಗೆ ಭೇಟಿ ಕೊಟ್ಟು ಅವರ ವಾಸ್ತವ ಜೀವನ ಅರಿಯುವ ಪ್ರಯತ್ನ ಮಾಡಲಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಪ್ರತಿಯೊಂದು ಸಿದ್ದಿ ಸಮುದಾಯದವರ ಕುಟುಂಬಗಳ ಕೌಟುಂಬಿಕ ಸಮೀಕ್ಷೆಯನ್ನು ಮಾಡುವುದರ ಮುಖಾಂತರ ಅಂಕಿಅಂಶಗಳ ಕ್ರೂಢೀಕರಣ ಮಾಡಲಾಗಿದೆ.

ಸಮುದಾಯ ಬಡತನದ ಬೇಗೆಯಲ್ಲಿ ನರಳುತ್ತಿರುವುದರಿಂದ ತ್ರಾಸದಾಯಕ ಜೀವನ ನಿರ್ವಹಿಸುತ್ತಿದೆ. ಮೂಲಭೂತ ಸೌಕರ್ಯಗಳನ್ನು ಪೂರೈಸಿಕೊಳ್ಳಲಾಗದೆ ಕಾಡಿನಲ್ಲಿ ಒಂದು ಪ್ರಾಣಿಯಂತೆ ಜೀವನ ನಡೆಸುತ್ತಿದ್ದಾರೆ. ಇವರ ಗುಡಿಸಲುಗಳನ್ನು ನೋಡಿದರೆ ಇವರ ಜೀವನ ಯಾವ ರೀತಿಯಾಗಿದೆ ಎಂದು ಊಹಿಸಬಹುದು. ಆದರೆ ಇತ್ತೀಚೆಗೆ ಸರ್ಕಾರದ ಆಶ್ರಯ ಮನೆಗಳು ದೊರೆಯುತ್ತಿರುವುದರಿಂದ ವಸತಿ ವ್ಯವಸ್ಥೆಯಲ್ಲಿ ಸ್ವಲ್ಪ ಮಟ್ಟಿನ ಸುಧಾರಣೆಯಾಗಿದೆ. ಕೂಲಿಯೇ ಇವರ ಜೀವನಕ್ಕೆ ಆಧಾರ. ಕೃಷಿ ಕಾರ್ಮಿಕರಾಗಿ ಹೊಟ್ಟೆ ಹೊರೆಯುತ್ತಿದ್ದಾರೆ. ಇವರ ಬಹುತೇಕ ಜೀವನ ಭೂಮಾಲಿಕರು ನೀಡುವ ಕೂಲಿಯಿಂದ ನಿರ್ವಹಿಸಲ್ಪಡುತ್ತಿದೆ. ಬಲಾಡ್ಯ ಶರೀರವನ್ನು ಹೊಂದಿರುವ ಇವರಿಗೆ ಸೂಕ್ತವಾದ ಉದ್ಯೋಗವಿಲ್ಲ. ಇಂತಹ ಮಾನವ ಸಮೂಹದ ಸದ್ಬಳಕೆಯಾಗುತ್ತಿಲ್ಲ. ಕೆಲವೊಂದು ಮುಂದುವರೆದ ರಾಷ್ಟ್ರಗಳು ಒಲಂಪಿಕ್ಸ್‌ಗಾಗಿ ಕರಿಯರನ್ನು ಆಯ್ಕೆ ಮಾಡಿಕೊಳ್ಳುತ್ತಿವೆ. ಅದೇ ರೀತಿಯ ಮಾರ್ಗವನ್ನು ನಮ್ಮ ದೇಶ ಅನುಸರಿಸುವ ಪ್ರಯತ್ನ ಮಾಡಿತಾದರೂ ಸರಿಯಾದ ಸದುಪಯೋಗ ಪಡಿಸಿಕೊಳ್ಳಲಿಲ್ಲ.

ಸಮುದಾಯದಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿದೆ. ಶಿಕ್ಷಣ ಪಡೆದು ಸರ್ಕಾರಿ ಹುದ್ದೆ ಗಿಟ್ಟಿಸಿಕೊಂಡವರು ಅತ್ಯಂತ ವಿರಳ. ಇವರಲ್ಲಿ ಕೆಲವೇ ಕೆಲವು ಬೆರಳೆಣಿಕೆಯಷ್ಟು ಜನ ಮಾತ್ರ ಸರ್ಕಾರಿ ಹುದ್ದೆಯನ್ನು ಗಿಟ್ಟಿಸಿಕೊಂಡಿದ್ದಾರೆ. ಅನಕ್ಷರತೆ ಪ್ರಮುಖವಾಗಿರುವುದರಿಂದ ನಿರುದ್ಯೋಗ ತಾಂಡವವಾಡುತ್ತಿದೆ. ಇತ್ತೀಚಿನ ದಿನಗಳಲ್ಲಿ ಇತರೆ ಸಮುದಾಯಗಳೊಂದಿಗೆ ಮತ್ತು ನಾಗರಿಕ ಸಮಾಜದೊಂದಿಗೆ ಮುಕ್ತವಾಗಿ ಬೆರೆಯುತ್ತಿರುವುದರಿಂದ ವಿವಿಧ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಕೆಲವರು ಸರ್ಕಾರೇತರ ಸ್ವಯಂ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ವ್ಯಾಪಾರ, ಚಾಲಕ, ಕೃಷಿ ಮುಂತಾದ ವೃತ್ತಿಗಳನ್ನು ನಿರ್ವಹಿಸುತ್ತಾ ಆರ್ಥಿಕವಾಗಿ ತಕ್ಕಮಟ್ಟಿಗೆ ಭದ್ರತೆಯನ್ನು ಪಡೆಯುವ ಪ್ರಯತ್ನ ಮಾಡುತ್ತಿದ್ದಾರೆ. ಇಂದಿಗೂ ಪೂರ್ಣ ಪ್ರಮಾಣದ ಅಸ್ಥಿತ್ವವನ್ನು ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಈ ಸಮುದಾಯದವರಿಗೆ ಉದ್ಯೋಗದ ಭದ್ರತೆ ದೊರೆಯಬೇಕಾಗಿದೆ. ದುಡಿಯುವ ಕೈಗಳಿಗೆ ಸಮರ್ಪಕವಾದ ಕೆಲಸ ನೀಡುವ ಅನಿವಾರ್ಯತೆ ಇದೆ. ಅಂದಾಗ ಮಾತ್ರ ಸಮುದಾಯ ಮುಂದುವರೆಯಲು ಸಾಧ್ಯವಾಗುತ್ತದೆ.

ಸಮುದಾಯದವರು ಆಧುನಿಕತೆಯ ಧ್ಯೋತಕವೆನ್ನುವಂತೆ ಇಂದು ಅಭಿವೃದ್ಧಿಯ ಕಡೆ ಮುಖಮಾಡುತ್ತಿದ್ದಾರೆ. ಅದರಲ್ಲಿಯೂ ಮುಖ್ಯವಾಗಿ ಸ್ಥಳೀಯ ಆಡಳಿತ ವ್ಯವಸ್ಥೆಯಾದ ಪಂಚಾಯತಿಗೆ ಸದಸ್ಯರಾಗುವ ಮುಖಾಂತರ ರಾಜಕೀಯದಲ್ಲಿ ಅಂಬೆಗಾಲನ್ನು ಇಡುತ್ತಿರುವುದು ಸಂತೋಷದಾಯಕವಾದುದು. ಪಂಚಾಯತಿಯ ಸ್ಥಾನಕ್ಕೆ ಆಯ್ಕೆಯಾದ ಕೆಲವು ಸದಸ್ಯರು ತಮ್ಮ ತೀರ್ಮಾನವನ್ನು ಮತ್ತು ಅಧಿಕಾರವನ್ನು ತಾವೇ ನಿರ್ವಹಿಸುವುದರ

ಬದಲು ಪ್ರಬಲ ಸಮುದಾಯದವರ ಹಿತಾಸಕ್ತಿಯಂತೆ ನಡೆದುಕೊಳ್ಳಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾರೆ. ಕಾರಣವೆಂದರೆ ಪಂಚಾಯತಿಯ ಸದಸ್ಯರಾಗಿದ್ದರೂ ಇವರ ಬಡತನ ಇವರನ್ನು ಕೂಲಿ ಕೆಲಸಕ್ಕೆ ಕಳುಹಿಸುತ್ತಿದೆ. ಇಂತಹ ಸಂದರ್ಭದಲ್ಲಿ ಮಾಲಿಕ ವರ್ಗದವರ ಮಾರ್ಗದರ್ಶನದ ಮೇಲೆ ಅಧಿಕಾರ ನಡೆಸುವಂತಹ ಸ್ಥಿತಿ ನಿರ್ಮಾಣವಾಗಿದೆ ಎಂದರೂ ತಪ್ಪಾಗಲಿಕ್ಕಿಲ್ಲ.

ಸಮುದಾಯದಲ್ಲಿ ಮಕ್ಕಳ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಲಾಗುತ್ತಿದೆ. ಮಗು ಸ್ವಲ್ಪ ಕೈಗೆ ಬಂದ ನಂತರ ನಾಲ್ಕಾರು ಕಾಸು ಸಂಪಾದಿಸಬಹುದೆಂದು ಶಾಲೆ ಬಿಡಿಸಿ ಕೂಲಿಗೆ ಕಳುಹಿಸಲಾಗುತ್ತಿದೆ. ಇವರು ಅಭಿವೃದ್ಧಿಯನ್ನು ಹೊಂದಬೇಕಾದರೆ ಇವರಿಗೆ ಮೊದಲಿಗೆ ಶಿಕ್ಷಣದ ಬಗೆಗೆ ಜಾಗೃತಿ ಮೂಡಿಸಬೇಕಾಗಿದೆ. ದಟ್ಟವಾದ ಕಾಡಿನ ಮಧ್ಯೆಯಲ್ಲಿ ವಾಸವಾಗಿರುವುದರಿಂದ ಇವರ ಮಕ್ಕಳು ಹೊರಗಿನ ಪ್ರಪಂಚಕ್ಕೆ ಬಂದು ಶಿಕ್ಷಣ ಕಲಿಯುವುದು ತೊಂದರೆಯಾಗುತ್ತಿದೆ. ಆದ್ದರಿಂದ ಇವರು ನೆಲೆಸಿರುವ ಪ್ರದೇಶಗಳಲ್ಲಿ ಶಾಲೆಯನ್ನು ಪ್ರಾರಂಭಿಸುವುದರ ಮೂಲಕ ಅವರಿಗೆ ಶಿಕ್ಷಣವನ್ನು ನೀಡಬೇಕಾಗಿದೆ. ನಂತರ ಕಾಲೇಜು ಮತ್ತು ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಬೇಕಾಗಿದೆ. ಇವರು ಕೂಲಿಯನ್ನು ಪ್ರಮುಖವಾಗಿ ಆಧರಿಸಿರುವುದರಿಂದ ಇವರಿಗೆ ಕೃಷಿ ಭೂಮಿಯನ್ನು ಒದಗಿಸಬೇಕು. ಜೊತೆಗೆ ಅತಿಕ್ರಮಣ ಮಾಡಿಕೊಂಡಿರುವ ಭೂಮಿಯನ್ನು ಸಕ್ರಮಗೊಳಿಸಬೇಕು. ಕೃಷಿಗೆ ಪೂರಕವಾಗುವಂತಹ ಹಲವಾರು ಸೌಲಭ್ಯಗಳನ್ನು ಸರ್ಕಾರ ಒದಗಿಸಬೇಕಾಗಿದೆ. ಸರ್ಕಾರ ಕೇವಲ ಆಶ್ರಯ ಮನೆ ಮತ್ತು ವಿದ್ಯುತ್ ನೀಡಿದರೆ ಸಾಲದು, ಬದಲಾಗಿ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಪ್ರಯತ್ನ ಮಾಡಬೇಕಾಗಿದೆ. ಅರಣ್ಯದಲ್ಲಿನ ಕಿರು ಉತ್ಪನ್ನಗಳನ್ನು ಪಡೆಯಲು ಅನುಮತಿ ನೀಡಿದರೆ ಸ್ವಲ್ಪ ಮಟ್ಟಿನ ಆರ್ಥಿಕ ಸುಧಾರಣೆ ಕಂಡುಬರುತ್ತದೆ. ಸರ್ಕಾರ ಈ ಸಮುದಾಯವನ್ನು ಪರಿಶಿಷ್ಟ ಪಂಗಡವಾಗಿ ಘೋಷಿಸಿರುವುದು ಮಾತ್ರ ಅಭಿವೃದ್ಧಿಗೆ ಸಾಕಾಗುವುದಿಲ್ಲ. ಪರಿಶಿಷ್ಟ ಪಂಗಡದವರಿಗೆ ದೊರೆಯಬೇಕಾದ ಎಲ್ಲಾ ಸೌಲಭ್ಯಗಳನ್ನು ಸಮುದಾಯ ಸದುಪಯೋಗಪಡಿಸಿಕೊಳ್ಳುವಂತೆ ನೋಡಿಕೊಳ್ಳಬೇಕಾಗಿದೆ. ಸಿದ್ದಿ ಸಮುದಾಯದವರ ಸರ್ವಾಂಗೀಣ ಪ್ರಗತಿ ಸಾಧ್ಯವಾಗಬೇಕಾದರೆ ಸರ್ಕಾರ ಇವರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ ಸ್ಥಿತಿಗತಿಯನ್ನು ಅಧ್ಯಯನ ಮಾಡಿ ಅದಕ್ಕೆ ತಕ್ಕುದಾದ ರೀತಿಯಲ್ಲಿ ಮಾರ್ಗೋಪಾಯಗಳು ಮತ್ತು ಸೌಲಭ್ಯಗಳನ್ನು ಕಲ್ಪಿಸಬೇಕಾಗಿದೆ. ಈ ರೀತಿಯಾದ ಯೋಜನೆಯನ್ನು ಹಾಕಿಕೊಂಡಾಗ ಮಾತ್ರ ಸಮುದಾಯದ ಅಭಿವೃದ್ಧಿ ಸಾಧ್ಯವಾಗುತ್ತದೆ.

## ಅಡಿಟಿಪ್ಪಣಿಗಳು

೧. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪುಟ ೨೮.

೨. ಎನ್.ಆರ್.ನಾಯಕ್, ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೧೮.

೩. ಅದೇ, ಪುಟ ೧೮.

೪. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪುಟ ೪೩.

೫. ಎನ್.ಆರ್.ನಾಯಕ್, ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೧೫.

೬. ಕೆ.ಭೈರಪ್ಪ, ಭಾರತೀಯ ಸಮಾಜ, ಪುಟ ೧೬೭.

೭. ಡಾ. ಕೆ.ಎಂ.ಮೈತ್ರಿ, ಬುಡಕಟ್ಟು ಕುಲ ಕಸುಬುಗಳು, ಪುಟ ೩.

೮. ಎನ್.ಆರ್.ನಾಯಕ್, ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೨೧.

೯. ಅನು: ಅಕ್ಕಮಹಾದೇವಿ, ಬುಡಕಟ್ಟು ನ್ಯಾಯ, ಪುಟ ೪೫ ಮತ್ತು ೪೬.

೧೦. ಸಂ: ಎ.ಎಸ್.ಪ್ರಭಾಕರ, ಆದಿವಾಸಿ ಆಖ್ಯಾನ, ಪುಟ ೨೦೭.

೧೧. ಹಿ.ಚಿ.ಬೋರಲಿಂಗಯ್ಯ, ನಮ್ಮೊಳಗೊಂದು ಪುಟ್ಟ ಆಫ್ರಿಕಾ, ಪುಟ ೨೦.

೧೨. ಕೆ.ಭೈರಪ್ಪ, ಭಾರತೀಯ ಸಮಾಜ, ಪುಟ ೨೦೯.

ಅಧ್ಯಾಯ–೪

# ಸಮುದಾಯದ ಧಾರ್ಮಿಕತೆ

೪.೧ ಸಿದ್ದಿ ಸಮುದಾಯದ ಧಾರ್ಮಿಕ ಪಂಗಡಗಳು
೪.೧.೧ ಹಿಂದೂ ಸಿದ್ದಿ
೪.೧.೨ ಮುಸ್ಲಿಂ ಸಿದ್ದಿ
೪.೧.೩ ಕ್ರೈಸ್ತ ಸಿದ್ದಿ
೪.೨ ದೈವಾರಾಧನೆ
೪.೩ ಧಾರ್ಮಿಕ ನಂಬಿಕೆಗಳು
೪.೪ ವಾರ್ಷಿಕಾವರ್ತನ ಆಚರಣೆಗಳು
೪.೪.೧ ಸಾವಿನ ನಂತರದ ಆಚರಣೆಗಳು
೪.೪.೨ ನಿಸರ್ಗ ಸಂಬಂಧಿ ಆಚರಣೆಗಳು
೪.೪.೩ ಕೃಷಿ ಸಂಬಂಧಿ ಆಚರಣೆಗಳು
೪.೪.೩.೧ ಜಟ್ಟಿಗ
೪.೪.೩.೨ ನಾಗದೇವತೆ
೪.೪.೩.೩ ಪಾಂಡವರ ಆಚರಣೆ
೪.೪.೩.೪ ರಾಶಿಪೂಜೆ
೪.೪.೩.೫ ಅಚ್ಚಕನ್ಯೆ
೪.೪.೩.೬ ಕಾಪ್ರಿ–ಭೂತ
೪.೪.೪ ಕುಲದೈವ ಸಂಬಂಧಿ ಆಚರಣೆಗಳು
೪.೪.೪.೧ ಹಿರಿಯರ ಹಬ್ಬ
೪.೪.೪.೨ ಸಿದ್ದಿನಾಸ
೪.೪.೫ ಇತರ ಆಚರಣೆಗಳು
೪.೪.೫.೧ ಹುಲಿಪೂಜೆ
೪.೪.೫.೨ ಬೇಟೆನಾಸ
೪.೪.೫.೩ ಡಬ್ಬಿ ಬಾರಿಸುವುದು
೪.೫ ಸಾಹಿತ್ಯ ಮತ್ತು ಕಲೆ
೪.೫.೧ ಡಮಾಮಿ ಕುಣಿತ
೪.೫.೨ ಪುಗಡಿ ಕುಣಿತ
೪.೫.೩ ಸುಗ್ಗಿ ಕುಣಿತ
೪.೫.೪ ಅಲಗುಂ ಕುಣಿತ
೪.೫.೫ ಇತರ ಕಲೆಗಳು

ವಿಶ್ವದ ಪ್ರತಿಯೊಂದು ಸಮಾಜದಲ್ಲಿ ಧರ್ಮವು ಪ್ರಮುಖವಾಗಿ ಕಂಡುಬರುತ್ತದೆ. ಮಾನವ ಜೀವನದಲ್ಲಿ ಧರ್ಮವು ಹಾಸುಹೊಕ್ಕಾಗಿದೆ. ಪ್ರತಿಯೊಬ್ಬ ವ್ಯಕ್ತಿಯು ಒಂದಲ್ಲಾ ಒಂದು ಧರ್ಮವನ್ನು ಅನುಸರಿಸಿ ನಡೆಯುತ್ತಿದ್ದಾನೆ. ಧರ್ಮಕ್ಕೆ ಅನುಗುಣವಾಗಿ ನಡೆದುಕೊಳ್ಳುವುದರ ಮುಖಾಂತರ ಉತ್ತಮ ಜೀವನ ನಡೆಸಲು ಸಾಧ್ಯವಾಗಿದೆ. ಧರ್ಮವು ಮಾನವನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತದೆ. ಭಾರತೀಯ ಸಮಾಜದಲ್ಲಿ ಹಲವಾರು ಧರ್ಮಗಳು ಪ್ರಮುಖವಾಗಿ ಕಂಡುಬರುತ್ತವೆ. ಅವುಗಳೆಂದರೆ ಹಿಂದೂ, ಮುಸ್ಲಿಂ, ಕ್ರೈಸ್ತ, ಬೌದ್ಧ, ಜೈನ, ಸಿಖ್, ಪಾರ್ಸಿ, ಯಹೂದಿ ಮುಂತಾದವುಗಳು. ಪ್ರತಿಯೊಂದು ಧರ್ಮವು ಮಾನವನ ಒಳಿತನ್ನು ಬಯಸುತ್ತವೆ. ಧರ್ಮವು ಮಾನವನ ಉನ್ನತ ಜೀವನಕ್ಕೆ ದಾರಿದೀಪಗಳಾಗಿವೆ. ಧರ್ಮಕ್ಕೆ ಅನುಗುಣವಾಗಿ ನಡೆದರೆ ಅವನ ಜೀವನ ಉಜ್ವಲವಾಗಿರುತ್ತದೆ. "ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ । ತಸ್ಮಾದ್ಧರ್ಮೋನ ಹಂತವ್ಯ ಮನೋಧರ್ಮೋ ಹತೋವಧೀತ್ ॥

ಮನುಸ್ಮೃತಿಯಲ್ಲಿ ಹೇಳಿರುವ ಮೇಲಿನ ಸಂಸ್ಕೃತ ಭಾಷೆಯ ಸೂಕ್ತಿಯ ಅರ್ಥ. ಧರ್ಮವನ್ನು ಮೀರಿ ನಡೆದರೆ ಹಾನಿಯುಂಟಾಗುತ್ತದೆ. ಧರ್ಮವನ್ನು ಆಚರಿಸಿ ನಡೆದರೆ ಅದು ನಮ್ಮನ್ನು ರಕ್ಷಿಸುತ್ತದೆ. ಆದ್ದರಿಂದ ಧರ್ಮವನ್ನು ಮೀರಬಾರದು. ಧರ್ಮವನ್ನು ಮೀರಿ ಹಾಳಾಗುವುದು ಯುಕ್ತವಲ್ಲ."[1] ಧರ್ಮವನ್ನು ಮೀರಿ ನಡೆದವನಿಗೆ ಸಮಾಜ ಶಿಕ್ಷಿಸುತ್ತದೆ. ಧರ್ಮವು ವ್ಯಕ್ತಿಯನ್ನು ನಿಯಂತ್ರಿಸುವುದರ ಮೂಲಕ ಸಮಾಜದ ನಿಯಂತ್ರಣ ಮಾಡುತ್ತದೆ. ಸಮಾಜದಲ್ಲಿ ನಡೆಯುವ ಪ್ರತಿಯೊಂದು ಘಟನೆಗೂ ಯಾವುದೋ ಒಂದು ಅಗೋಚರ ಶಕ್ತಿಯ ಕೈವಾಡವೆಂದು ನಂಬಲಾಗುತ್ತದೆ. ಈ ಘಟನೆಗಳನ್ನು ಪ್ರತಿಯೊಂದು ಧರ್ಮದವರು ತಮ್ಮ ದೈವದ ಮುಖಾಂತರ ನಡೆಯುತ್ತಿವೆ ಎನ್ನುವುದಾಗಿ ನಂಬುತ್ತಾರೆ.

ಇಂದಿನ ದಿನದಲ್ಲಿ ವ್ಯಕ್ತಿಯ ಮೇಲೆ ಧರ್ಮದ ಹಿಡಿತ ಸಡಿಲವಾಗುತ್ತಿದೆ. ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಮತಾಂತರವಾಗುವುದು ಸಾಮಾನ್ಯ ಎನ್ನುವಂತೆ ಕಾಣುತ್ತಿದೆ. ಮೊದಲಿಗೆ ವ್ಯಕ್ತಿಯು ಯಾವ ಧರ್ಮದಲ್ಲಿ ಜನಿಸಿರುತ್ತಿದ್ದನೋ ಅದೇ ಧರ್ಮದಲ್ಲಿ ಮರಣವನ್ನು ಹೊಂದುತ್ತಿದ್ದ. ಆದರೆ ಇಂದು ಈ ವ್ಯವಸ್ಥೆಯಲ್ಲಿ ಗಣನೀಯವಾದ ಬದಲಾವಣೆ ಕಂಡುಬರುತ್ತಿದೆ. ಒಂದು ಧರ್ಮದಲ್ಲಿ ಜನಿಸಿ, ಇನ್ನೊಂದು ಧರ್ಮದಲ್ಲಿ ಜೀವಿಸಿ, ಮತ್ತೊಂದು ಧರ್ಮದಲ್ಲಿ ಸಾಯುವುದು ಕಂಡುಬರುತ್ತಿದೆ. ಧರ್ಮದ ಬಗೆಗೆ ವಿಶಾಲ ಮನೋಭಾವನೆಯ ಬದಲು ಅಂಧಶ್ರದ್ಧೆ ಪ್ರಮುಖವಾಗಿ ಕಂಡುಬರುತ್ತಿದೆ. ಧರ್ಮ ಧರ್ಮಗಳ ಮಧ್ಯೆ ಗಲಭೆಗಳು ಸಾಮಾನ್ಯವಾಗಿವೆ. ಇತ್ತೀಚಿನ ದಿನಗಳಲ್ಲಿ ಇದರ ಪ್ರಕರಣಗಳು ಹೆಚ್ಚಿನ ಪ್ರಮಾಣದಲ್ಲಿ ಗೋಚರಿಸುತ್ತಿವೆ. ಉದಾಹರಣೆಗೆ ಸಿಖ್ ನರಮೇಧ, ಗೋದ್ರಾ ಹತ್ಯಾಕಾಂಡ, ಬಾಬ್ರಿ ಮಸೀದಿ ಧ್ವಂಸ, ಕ್ರೈಸ್ತ ಚರ್ಚ್‌ಗಳ ಮೇಲೆ ದಾಳಿ ಮುಂತಾದವು. ಪ್ರತಿಯೊಂದು ಧರ್ಮವೂ ಮಾನವ ಕಲ್ಯಾಣವನ್ನು ಬಯಸುತ್ತದೆ. ಆದರೆ ಮೂಲಭೂತವಾದಿಗಳ ಕುಮ್ಮಕ್ಕಿನಿಂದಾಗಿ ಧರ್ಮವನ್ನು ಒಂದು ಅಸ್ತ್ರವಾಗಿ ಬಳಸಿ, ಇನ್ನೊಂದು ಧರ್ಮವನ್ನು ಹಾನಿ ಮಾಡಲು ಪ್ರಯತ್ನಿಸಲಾಗುತ್ತಿದೆ. ಇಂತಹ ಸಂದರ್ಭದಲ್ಲಿ ಒಂದೇ ಸಮುದಾಯದಲ್ಲಿ ಮೂರೂ ಧರ್ಮವನ್ನು ಊಹಿಸಿಕೊಳ್ಳುವುದು ಕಷ್ಟಸಾಧ್ಯವಾದರೂ ಸತ್ಯವಾಗಿದೆ. ಸಿದ್ದಿ ಸಮುದಾಯ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳಲ್ಲಿ ಹಂಚಿಹೋಗಿದೆ. ಈ ಸಮುದಾಯದ ಮೂರೂ ಧರ್ಮದವರಲ್ಲಿ ಯಾವುದೇ ಭೇದ–ಭಾವವಿಲ್ಲದೆ ಅನ್ಯೋನ್ಯತೆಯ ಜೀವನ ನಿರ್ವಹಿಸುತ್ತಿದ್ದಾರೆ. ಭಾವೈಕ್ಯತೆಯ ಪ್ರತೀಕವಾಗಿದ್ದಾರೆ. ಆಧುನಿಕ ಸಮಾಜಕ್ಕೆ ಮಾದರಿಯಾಗಿದ್ದಾರೆ.

**೪.೧ ಸಿದ್ದಿ ಸಮುದಾಯದ ಧಾರ್ಮಿಕ ಪಂಗಡಗಳು**

ಧರ್ಮದಲ್ಲಿ ಪಂಗಡಗಳು ಸರ್ವೇ ಸಾಮಾನ್ಯ. ಈ ಪಂಗಡಗಳು ಜನರ ಜೀವನದ ಆಚಾರ–ವಿಚಾರ ಮತ್ತು ಸಂಸ್ಕೃತಿಯನ್ನು ಗುರುತಿಸುತ್ತವೆ. ಕೆಲವು ಧರ್ಮದಲ್ಲಿನ ಪಂಗಡಗಳು ಶ್ರೇಷ್ಠ ಮತ್ತು ಕನಿಷ್ಠತೆಯನ್ನು ತೋರಿಸುತ್ತವೆ. ಆದರೆ ಸಿದ್ದಿಯರು ಒಂದೇ ಧರ್ಮದ ಪಂಗಡಗಳನ್ನು ಹೊಂದಿಲ್ಲ. ಬದಲಾಗಿ ವಿಶ್ವದ ಮೂರು ಪ್ರಮುಖ ಧರ್ಮಗಳಲ್ಲಿ ಹಂಚಿಹೋಗಿದ್ದಾರೆ. ಅವುಗಳೆಂದರೆ ಹಿಂದೂ ಧರ್ಮ, ಇಸ್ಲಾಂ ಧರ್ಮ ಮತ್ತು ಕ್ರೈಸ್ತ ಧರ್ಮ. ಒಂದೇ ಸಮುದಾಯದಲ್ಲಿ ಮೂರೂ ಧರ್ಮದವರಿದ್ದರೂ ಇವರಲ್ಲಿ ಭಿನ್ನತೆಯಿಲ್ಲ. ಧರ್ಮವು ಕೇವಲ ಅನುಕರಣೆಗೆ ಮಾತ್ರ. ಉಳಿದಂತೆ ಸಿದ್ದಿಯರೆಲ್ಲಾ ಒಂದೇ ಎನ್ನುವ ಭಾವನೆಯನ್ನು ವ್ಯಕ್ತಪಡಿಸುತ್ತಾರೆ. ತಮ್ಮ ಮೂಲ ಸಂಸ್ಕೃತಿ ಮತ್ತು ಧರ್ಮವನ್ನು ಕಳೆದುಕೊಂಡು ಇತರ ಧರ್ಮಗಳಲ್ಲಿ ಹಂಚಿಹೋಗಿರುವುದು ವಿಶ್ವದಲ್ಲಿ ಬೇರೆ ಯಾವ ಸಮುದಾಯಗಳಲ್ಲಿ ಈ ವ್ಯವಸ್ಥೆ ಕಂಡುಬರುವುದಕ್ಕೆ ಸಾಧ್ಯವಿಲ್ಲವೇನೋ? "ಆಫ್ರಿಕಾದಿಂದ ಹಿಡಿದು ತಂದ ಸಂದರ್ಭದಲ್ಲಿ

ಅರಬರ ಕಾಟ, ಕೊಂಡುಕೊಂಡ ಸಂದರ್ಭದಲ್ಲಿ ಪೋರ್ಚುಗೀಸರ ಕಾಟ, ಕಾಡು ಜಿದ್ದ ಸಂದರ್ಭದಲ್ಲಿ ಅಥವಾ ಮರುಮಾರಾಟ ಮಾಡಿದ ಸಂದರ್ಭದಲ್ಲಿ ಹಿಂದೂಗಳ ಕಾಟ ಹೀಗಾಗಿ ಅವರಿದ್ದ ಧಣಿಗಳ ನೆರಳಿನಲ್ಲಿ ಅವರವರದೇ ಧರ್ಮ ಸ್ವೀಕರಿಸುವುದು ಅಥವಾ ಮತಾಂತರಗೊಳ್ಳುವುದು ಅನಿವಾರ್ಯವಾಯಿತು. ಹಾಗೆ ಸ್ವೀಕರಿಸಿದ ಮೇಲೆ ಈ ಧರ್ಮ ಎನ್ನುವುದು ಮಾನಸಿಕ ವಿಚಾರ ತಾನೇ? ದೀಕ್ಷೆ ಪಡೆದವರಂತೆ ಅವರವರು ಸ್ವೀಕರಿಸಿದ್ದ ಧರ್ಮಗಳನ್ನು ಹಾಗೇ ಉಳಿಸಿಕೊಂಡರು. ಸಂದರ್ಭಗಳ ಒತ್ತಡ ಹಾಗೂ ಸಿಕ್ಕಿದ ಅವಕಾಶವನ್ನು ಉಪಯೋಗಿಸಿಕೊಂಡು ಒಂದೆಡೆ ನೆಲೆನಿಂತರು."[೨] ಹೀಗೆ ಆಯಾ ಧರ್ಮಗಳನ್ನು ಅನುಸರಿಸುತ್ತಾ ಒಂದೆಡೆ ನೆಲೆನಿಂತರು. ನೆಲೆನಿಂತ ಸಂದರ್ಭದಲ್ಲಿ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಎನ್ನದೇ ಒಟ್ಟಾಗಿ ಜೀವಿಸುವುದಕ್ಕೆ ಪ್ರಾರಂಭಿಸಿದರು. ಅದರ ಫಲವಾಗಿ "ಒಂದೇ ಮನೆಯಲ್ಲಿ ಅನಂತ, ಅಕ್ಬರ್, ಆಂತೋನಿಗಳನ್ನು ಒಟ್ಟುಗೂಡಿಸುವ ಪ್ರಯತ್ನ ಇವರಲ್ಲಿ ಫಲಿಸಿದೆ. ಇವರು ಕರಿಯರು, ಗುಲಾಮರಾಗಿದ್ದವರು ಎಂಬ ಕಾರಣವೊಡ್ಡಿ ತಮ್ಮಲ್ಲಿ ಸೇರಿಸಿಕೊಳ್ಳಲು ನಿರಾಕರಿಸಿದ ಜನಾಂಗಕ್ಕೆ ಸ್ಪಷ್ಟ ಉತ್ತರ ಎನ್ನುವಂತೆ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಮನೆತನಗಳು ವಿವಾಹ ಸಂಬಂಧ ಏರ್ಪಡಿಸಿಕೊಳ್ಳುವುದರ ಮೂಲಕ 'ಸಿದ್ದಿ ಧರ್ಮ'ವೊಂದರ ಉದಯಕ್ಕೆ ಕಾರಣರಾಗಿದ್ದಾರೆ."[೩] ತಮ್ಮ ಮೂಲ ಧರ್ಮಗಳನ್ನು ಬಿಟ್ಟಿಲ್ಲ, ಬದಲಿಗೆ ಆಧುನಿಕ ಸಮಾಜಕ್ಕೆ ಮಾದರಿಯಾಗುವಂತಹ ಧರ್ಮವೊಂದರ ಉದಯಕ್ಕೆ ಕಾರಣರಾಗಿದ್ದಾರೆ. ಇಂದಿನ ಸಮಾಜಕ್ಕೆ ಭಾವೈಕ್ಯತೆಯ ಸಂದೇಶವನ್ನು ನೀಡಿದ್ದಾರೆ. ಈ ಮಾದರಿ ಸಮಾಜವನ್ನು ಮೆಚ್ಚಿಸುವುದಕ್ಕಾಗಲಿ ಅಥವಾ ಸಮುದಾಯದ ಗುರುತಿಸುವಿಕೆಗಾಗಲೀ ನಡೆದಿಲ್ಲ. ಬದಲಾಗಿ ಅವರ ಅನಿವಾರ್ಯತೆಯಿಂದಾಗಿ ಒಂದೇ ಕುಟುಂಬದಲ್ಲಿ ಮೂರೂ ಧರ್ಮಗಳು ಕಾಣುವಂತಾಗಿದೆ.

ಸಿದ್ದಿಯರಲ್ಲಿರುವ ಮೂರೂ ಧರ್ಮದವರು ಆಯಾ ಧರ್ಮಕ್ಕೆ ಅನುಗುಣವಾದ ಸಂಸ್ಕೃತಿಯನ್ನು ಅನುಕರಿಸುತ್ತಿದ್ದಾರೆ. ಮೊದಲೇ ತಿಳಿಸಿದ ಹಾಗೆ ಒಂದೇ ಕುಟುಂಬದಲ್ಲಿ ಮೂರು ಧರ್ಮದವರು ಕಂಡುಬರುವುದರಿಂದ ಮೂರು ಧರ್ಮದ ಸಂಸ್ಕೃತಿಗಳ ಮಿಶ್ರಣದ ಆಚರಣೆಯೂ ಸಹ ಇವರಲ್ಲಿ ಕಂಡುಬರುತ್ತದೆ. ಮೂರು ಧರ್ಮದವರು ತಮ್ಮದೇ ಆದ ಪ್ರತ್ಯೇಕ ಸಂಸ್ಕೃತಿ ಮತ್ತು ಆಚರಣೆಯನ್ನು ಹೊಂದಿದ್ದಾರೆ. ಇವರಲ್ಲಿರುವ ಹಿಂದೂ ಸಿದ್ದಿ, ಮುಸ್ಲಿಂ ಸಿದ್ದಿ ಮತ್ತು ಕ್ರೈಸ್ತ ಸಿದ್ದಿಯರ ಬಗೆಗೆ ಈ ಕೆಳಗಿನಂತೆ ತಿಳಿದುಕೊಳ್ಳಬಹುದು.

**೪.೧.೧ ಹಿಂದೂ ಸಿದ್ದಿಯರು**

ಹಿಂದೂ ಧರ್ಮದ ಸಿದ್ದಿಯರು ಸ್ಥಳೀಯ ಹಿಂದೂ ಸಮುದಾಯಗಳ ಪ್ರಭಾವಕ್ಕೆ ಒಳಗಾಗಿ ಈ ಧರ್ಮವನ್ನು ಅನುಸರಿಸುತ್ತಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಹಿಂದೂ

ಧರ್ಮದ ಹವ್ಯಕ ಬ್ರಾಹ್ಮಣರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಹಿಂದೂ ಸಿದ್ದಿಯರು ಇವರ ಸಂಸ್ಕೃತಿಯನ್ನು ಪ್ರಮುಖವಾಗಿ ಅಳವಡಿಸಿಕೊಂಡಿದ್ದಾರೆ. ಸಂಸ್ಕೃತಾನುಕರಣ ಪ್ರಕ್ರಿಯೆ ಪ್ರಮುಖವಾಗಿ ಕಂಡುಬರುತ್ತದೆ. ಸಂಸ್ಕೃತಾನುಕರಣವೆಂದರೆ "ಕೆಳಸ್ತರದ ಹಿಂದೂ ಜಾತಿ ಅಥವಾ ಆದಿವಾಸಿ ಅಥವಾ ಇತರ ಸಮೂಹವು ತನ್ನ ಪದ್ಧತಿಗಳನ್ನು, ಕ್ರಿಯಾವಿಧಿ, ತತ್ವಾದರ್ಶ ಮತ್ತು ಜೀವನ ವಿಧಾನಗಳನ್ನು ಉಚ್ಚ ಜಾತಿಯ ಅದರಲ್ಲೂ ಹೆಚ್ಚಾಗಿ ದ್ವಿಜ ಜಾತಿಯ ರೀತಿ-ನೀತಿಗನುಸಾರವಾಗಿ ಮಾರ್ಪಡಿಸಿಕೊಳ್ಳುವ ಪ್ರಕ್ರಿಯೆ"[5]ಯಾಗಿದೆ. ಹಿಂದೂ ಸಿದ್ದಿಯರ ಸಂಸ್ಕೃತಿ ಕೆಳಜಾತಿಯವರಂತೆ ಹೀನಾಯವಾಗಿಲ್ಲ. ಮೇಲ್ಜಾತಿಯವರಂತಹ ನಡವಳಿಕೆಗಳೂ ಸಹ ಕಂಡುಬರುವುದಿಲ್ಲ. ಮಧ್ಯಮ ಪ್ರಮಾಣದ ಸಂಸ್ಕೃತಿಯನ್ನು ಹೊಂದಿದೆ. ಆದರೆ ಮೊದಲಿಗೆ ಇವರನ್ನು ಹೀನಾಯವಾಗಿ ಕಾಣಲಾಗುತ್ತಿತ್ತು. ಅಸ್ಪೃಶ್ಯರಂತೆ ಭಾವಿಸಲಾಗುತ್ತಿತ್ತು. ಕರಿಯರು ಎಂದು ಛೇಡಿಸುತ್ತಿದ್ದರು. ಆದರೆ ಇಂದು ಈ ರೀತಿಯ ವ್ಯವಸ್ಥೆ ಇಲ್ಲ. ಬದಲಾಗಿ ಸ್ವತಂತ್ರವಾಗಿ ಜೀವನ ನಡೆಸುತ್ತಿದ್ದಾರೆ. ಹವ್ಯಕ ಬ್ರಾಹ್ಮಣರು ಅನುಸರಿಸುವ ಮಾದರಿಯಲ್ಲಿಯೇ ಹಲವಾರು ವಿಧಿ ವಿಧಾನಗಳನ್ನು ಅನುಸರಿಸುತ್ತಾರೆ. ಹವ್ಯಕರು ಅಪಾರ ದೈವಭಕ್ತರು. ಅವರಂತೆ ಇವರೂ ಸಹ ಅನುಸರಿಸುವ ಪ್ರಯತ್ನ ಮಾಡುತ್ತಿದ್ದಾರೆ. ಹಿಂದೂ ಸಿದ್ದಿಯರಿಗೆ ಹವ್ಯಕರು ಪ್ರಭಾವ ಬೀರಿರುವುದು ಪ್ರಮುಖವಾಗಿ ತಿಳಿದುಬರುತ್ತದೆ. ಹವ್ಯಕ ಬಾಹ್ಮಣರನ್ನು ಪುರೋಹಿತರನ್ನಾಗಿ ಒಪ್ಪಿಕೊಂಡು ಅವರ ಮೇಲೆ ಅಪಾರ ಭಕ್ತಿಯನ್ನು ಹೊಂದಿದ್ದಾರೆ. ಹವ್ಯಕರು ಸಿದ್ದಿಯರ ಮನೆಗೆ ಬಂದಾಗ ಸಿದ್ದಿಯರ ದಿನನಿತ್ಯದ ಸಂಸ್ಕೃತಿಗಿಂತ ಅಂದಿನ ಸಂಸ್ಕೃತಿ ಭಿನ್ನವಾಗಿರುತ್ತದೆ. ಅಂದರೆ ಬ್ರಾಹ್ಮಣರಂತೆ ಹಲವಾರು ವಿಧಿ ವಿಧಾನಗಳನ್ನು ಅನುಸರಿಸುತ್ತಾರೆ. ಅಲ್ಲದೆ ಬ್ರಾಹ್ಮಣ ಮತ್ತು ಇತರೆ ಮುಂದುವರೆದ ಸಮುದಾಯಗಳಂತೆ ಮಠ-ಮಾನ್ಯಗಳನ್ನು ಒಪ್ಪಿಕೊಂಡಿದ್ದಾರೆ. ಇವರು ಹೊನ್ನಳ್ಳಿಯ ಮಠಕ್ಕೆ ನಿಷ್ಠೆಯನ್ನು ತೋರ್ಪಡಿಸುತ್ತಾರೆ. ಮಠಕ್ಕೆ ತಮ್ಮ ಶಕ್ತಾನುಸಾರ ಕಾಣಿಕೆಯನ್ನು ಸಲ್ಲಿಸುತ್ತಾರೆ. ಹಲವಾರು ಹಿಂದೂ ಸಿದ್ದಿಯರು ಹೊನ್ನಳ್ಳಿಯ ಮಠಕ್ಕೆ ವರ್ಷಕ್ಕೆ ಒಮ್ಮೆಯಾದರೂ ಭೇಟಿಕೊಟ್ಟು ಬರುವ ಸಂಪ್ರದಾಯವನ್ನು ಬೆಳೆಸಿಕೊಂಡಿದ್ದಾರೆ. ಹಿಂದೆ ಸ್ವರ್ಣವಲ್ಲಿಯ ಮಠದ ರಥವನ್ನು ಸಿದ್ದಿಯರು ಎಳೆಯುತ್ತಿದ್ದರು. ಆದರೆ, ಕಾರಣಾಂತರಗಳಿಂದ ಇಂದು ಈ ಆಚರಣೆ ನಿಂತುಹೋಗಿದೆ. ಹಿಂದೂ ಧರ್ಮದವರು ಅನುಸರಿಸುವ ಹಬ್ಬಗಳು ಮತ್ತು ದೇವರುಗಳನ್ನು ಇವರೂ ಸಹ ಅನುಸರಿಸುತ್ತಾರೆ. ಹಿಂದೂ ಸಿದ್ದಿಯರು ಆಚರಿಸುವ ಪ್ರಮುಖ ಹಬ್ಬಗಳೆಂದರೆ ಗಣೇಶ ಚೌತಿ, ನಾಗರ ಪಂಚಮಿ, ಮಹಾನವಮಿ, ದೀಪಾವಳಿ, ಶಿವರಾತ್ರಿ, ಸಂಕ್ರಮಣ ಮುಂತಾದವು. ಇಷ್ಟೆಲ್ಲಾ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದರೂ ಇವರನ್ನು ಹಿಂದೂಗಳೆಂದು ಸಮಾಜ ಸಂಪೂರ್ಣವಾಗಿ ಒಪ್ಪಿಕೊಂಡಿಲ್ಲ. ಗುಡಿಯ ಒಳಗಡೆ ಪ್ರವೇಶಿಸುವುದಕ್ಕೆ ಅವಕಾಶ ಮಾಡಿಕೊಟ್ಟಿಲ್ಲ. ಈ ಸಿದ್ದಿಯರನ್ನು ಇತರ ಮೇಲ್ಜಾತಿಯವರು

ಮನೆಯ ಒಳಗಡೆ ಸೇರಿಸಿಕೊಳ್ಳದೆ, ಕಾಂಪೌಂಡಿನ ಆಚೆಯೇ ಮಾತನಾಡಿಸಿ ಕಳುಹಿಸುವುದು ತಿಳಿಯುತ್ತದೆ. ಮೊದಮೊದಲು ಇವರನ್ನು ಹತ್ತಿರ ಸುಳಿಯಲು ಬಿಡುತ್ತಿದ್ದಿಲ್ಲ. ಆದರೆ ಇತ್ತೀಚೆಗೆ ಈ ವ್ಯವಸ್ಥೆಯಲ್ಲಿ ತಕ್ಕಮಟ್ಟಿನ ಸುಧಾರಣೆಯಾಗುತ್ತಿದೆ. ಇತರೆ ಸಮುದಾಯಗಳು ಇಂದು ತಮ್ಮ ಸಂಪರ್ಕಕ್ಕೆ ಅವಕಾಶ ಮಾಡಿಕೊಟ್ಟಿವೆ.

**೪.೧.೨ ಮುಸ್ಲಿಂ ಸಿದ್ದಿಯರು**

ಅರಬ್ ವರ್ತಕರು ಮತ್ತು ಮುಸ್ಲಿಂ ರಾಜರುಗಳು ಅಥವಾ ವ್ಯಕ್ತಿಗಳು ಕೊಂಡುಕೊಂಡ ಸಿದ್ದಿಯರು ಅನಿವಾರ್ಯವಾಗಿ ಇಸ್ಲಾಂ ಧರ್ಮವನ್ನು ಸ್ವೀಕರಿಸುವಂತಾಯಿತು. ಅಲ್ಲದೆ ಮೊದಲಿಗೆ ಅರಬರು ಇವರನ್ನು ಗುಲಾಮರನ್ನಾಗಿ ಎಳೆದು ತಂದರು. ಇದು ಸಿದ್ದಿಯರ ಮೇಲೆ ಪ್ರಭಾವ ಬೀರಿರಬಹುದಾಗಿದೆ. ಮುಸ್ಲಿಂ ರಾಜರುಗಳ ಹತ್ತಿರ ಸಿದ್ದಿಯರು ಸೈನಿಕರಾಗಿ ಸೇವೆ ಸಲ್ಲಿಸುತ್ತಿದ್ದರೆಂಬುದು ತಿಳಿದುಬರುತ್ತದೆ. "ಕರ್ನಾಟಕದಲ್ಲಿ ವಿಜಾಪುರದ ಆದಿಲ್‌ಶಾಹಿ ಆಳ್ವಿಕೆಯಲ್ಲಿ ನೀಗ್ರೋದಳವೊಂದನ್ನು ಬೆಳಗಾವಿ ಸಮೀಪದ ಪಶ್ಚಿಮ ಘಟ್ಟದಲ್ಲಿ ಇಟ್ಟುದಾಗಿ ತಿಳಿದುಬರುತ್ತದೆ. ಸಿದ್ದಿಯರಲ್ಲಿ ಪ್ರಚಲಿತವಿರುವು ನಾಯ್ಕ, ಪಾಟೀಲ, ಹವಾಲ್ದಾರ ಮುಂತಾದ ಅಡ್ಡ ಹೆಸರುಗಳು ವಿಜಾಪುರದ ಅರಸರಿಂದಲೇ ಬಂದಿರಬೇಕೆಂದು ಊಹಿಸಲಾಗುತ್ತದೆ."[೨] ಹೀಗೆ ಸಿದ್ದಿಯರು ಇಸ್ಲಾಂ ಧರ್ಮವನ್ನು ಅನುಕರಿಸಲು ವೇದಿಕೆ ನಿರ್ಮಾಣವಾಯಿತು. ಸಿದ್ದಿಯರು ಇಸ್ಲಾಂ ಧರ್ಮವನ್ನು ಸೇರಿದಾಕ್ಷಣ ಅವರಿಗೆ ಉನ್ನತವಾದ ಸ್ಥಾನ-ಮಾನಗಳಾಗಲಿ ಅಥವಾ ಗೌರವಾದರಗಳಾಗಲಿ ದೊರೆಯಲಿಲ್ಲ. ಬದಲಿಗೆ ಇಸ್ಲಾಂ ಧರ್ಮದ ಸುನ್ನಿ ಪಂಗಡವಾಗಿ ಗುರುತಿಸಿಕೊಳ್ಳುವಂತಾಯಿತು. ಇವರನ್ನು ಸುನ್ನಿ ಪಂಥದವರನ್ನಾಗಿ ಧರ್ಮಕ್ಕೆ ಸೇರಿಸಿಕೊಳ್ಳಲಾಯಿತು. ಇವರು ತಾವಾಗಿಯೇ ಇಸ್ಲಾಂ ಮತಕ್ಕೆ ಸೇರ್ಪಡೆಗೊಂಡವರಲ್ಲ. ಬದಲಾಗಿ ಒತ್ತಾಯಪೂರ್ವಕವಾಗಿ ಇವರನ್ನು ಸೇರಿಸಿಕೊಳ್ಳಲಾಯಿತು. ಇವರು ತಮ್ಮನ್ನು ನೇರವಾಗಿ ಮುಸ್ಲಿಮರು ಎಂದು ಕರೆದುಕೊಳ್ಳದೆ ಮುಸ್ಲಿಂ ಸಿದ್ದಿಗಳು ಎಂದು ಕರೆದುಕೊಂಡರು. ಸ್ಥಳೀಯ ಮುಸಲ್ಮಾನ್ ಸಮುದಾಯದವರಿಂದ ಪ್ರತ್ಯೇಕವಾಗಿ ಗುರುತಿಸಿಕೊಳ್ಳುತ್ತಾರೆ. ಇಸ್ಲಾಂ ಧರ್ಮದ ಎಲ್ಲಾ ಆಚಾರ-ವಿಚಾರ, ಸಂಪ್ರದಾಯ ಮುಂತಾದ ಆಚರಣೆಗಳನ್ನು ಅನುಸರಿಸುತ್ತಾರೆ. ಸ್ಥಳೀಯ ಮುಸಲ್ಮಾನರು ಇವರೊಂದಿಗೆ ನೇರವಾದ ಸಂಪರ್ಕವನ್ನು ಇಟ್ಟುಕೊಂಡಿಲ್ಲ. ಅಲ್ಲದೆ ಸ್ಥಳೀಯ ಮುಸಲ್ಮಾನರು ಇವರೊಂದಿಗೆ ಯಾವುದೇ ರೀತಿಯಾದ ವೈವಾಹಿಕ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದಿಲ್ಲ. ಕೆಲವು ಕಡೆ ಸ್ಥಳೀಯ ಮುಸಲ್ಮಾನ್ ಸಮುದಾಯದವರು ಇವರನ್ನು ತಿರಸ್ಕಾರ ಭಾವನೆಯಿಂದ ನೋಡುವುದೂ ಸಹ ಕಂಡುಬರುತ್ತದೆ. ಮೂಲಭೂತವಾದಿ ಮುಸ್ಲಿಂ ಸಮುದಾಯದವರಂತೆ ಇವರು ನೇರವಾಗಿ

ಕೆಲವು ಕಡೆ ಮಸೀದಿಗಳಲ್ಲಿ ಹೋಗಿ ಪ್ರಾರ್ಥನೆ ಮಾಡಲು ಅವಕಾಶ ನೀಡಿಲ್ಲ ಎನ್ನುವ ಅಭಿಪ್ರಾಯವನ್ನು ಹಳಿಯಾಳ ತಾಲೂಕಿನ ಇಮಾಮ್ ಹುಸೇನ್ ಸಿದ್ದಿಯವರು ತಿಳಿಸುತ್ತಾರೆ.

ಮುಸಲ್ಮಾನ್ ಸಿದ್ದಿಯರು ಸಂಪೂರ್ಣವಾಗಿ ಅಲ್ಲದೇ ಹೋದರೂ ಹೆಚ್ಚಿನ ಪ್ರಮಾಣದಲ್ಲಿ ಇಸ್ಲಾಂ ಧರ್ಮದ ಆಚರಣೆಯನ್ನು ಅನುಸರಿಸುತ್ತಿದ್ದಾರೆ. ಸ್ಥಳೀಯ ಮುಸಲ್ಮಾನರು ಇವರನ್ನು ಅಪ್ಪಿಕೊಂಡು ಶುಭಾಷಯ ವಿನಿಮಯ ಮಾಡಿಕೊಳ್ಳಲು ಹಿಂಜರಿಯುತ್ತಾರೆ. ಮುಸಲ್ಮಾನ್ ಸಿದ್ದಿಯರು ಸ್ಥಳೀಯ ಮುಸಲ್ಮಾನ ಖಾಜಿಯ ಸಮ್ಮುಖದಲ್ಲಿಯೇ ತಮ್ಮ ಧಾರ್ಮಿಕ ಕಾರ್ಯಕ್ರಮಗಳನ್ನು ಅನುಸರಿಸುತ್ತಾರೆ. ಸ್ಥಳೀಯ ಮುಸಲ್ಮಾನ್ ಖಾಜಿ ಮತ್ತು ಮುಲ್ಲಾಗಳ ಸಮ್ಮುಖದಲ್ಲಿ ಇವರ ಕಾರ್ಯಗಳು ಜರುಗಿದರೂ ಸಹ ಇನ್ನೂ ಸಂಪೂರ್ಣವಾದ ಮುಸಲ್ಮಾನರ ಸ್ಥಾನಮಾನಗಳನ್ನು ಸ್ಥಳೀಯ ಇಸ್ಲಾಂ ಧರ್ಮದವರು ನೀಡಿಲ್ಲ. ಇತ್ತೀಚೆಗೆ ಮುನ್ನುಗ್ಗಿ ಚಾಕಚಕ್ಯತೆಯ ಕಾರ್ಯಗಳಲ್ಲಿ ತೊಡಗುತ್ತಿರುವ ಮುಸ್ಲಿಂ ಸಿದ್ದಿ ಸಮುದಾಯದವರಿಗೆ ಸ್ಥಳೀಯ ಇಸ್ಲಾಮಿಯರು ಬೆಂಬಲ ಮತ್ತು ಅವಕಾಶವನ್ನು ಒದಗಿಸಿಕೊಡುತ್ತಿರುವುದು ಕಾಣುತ್ತದೆ.

**೪.೧.೩ ಕ್ರೈಸ್ತ ಸಿದ್ದಿಯರು**

ಕ್ರೈಸ್ತ ಧರ್ಮ ವಿಶ್ವದಲ್ಲಿ ಅತಿ ಹೆಚ್ಚು ಅನುಯಾಯಿಗಳನ್ನು ಹೊಂದಿರುವ ಧರ್ಮವಾಗಿದೆ. ಭಾರತೀಯ ಸಮಾಜಕ್ಕೆ ವಲಸೆ ಬಂದ ಅಥವಾ ಅಧಿಕಾರ ಸ್ಥಾಪಿಸಲು ಬಂದಂತಹ ವಿದೇಶಿಯರು ಮುಖ್ಯವಾಗಿ ತಮ್ಮ ಧರ್ಮವನ್ನು ಪ್ರಸಾರ ಮಾಡುವ ಉದ್ದೇಶವನ್ನು ಹೊಂದಿದ್ದರು. ಕ್ರೈಸ್ತ ಮತದ ಪ್ರಸಾರದಲ್ಲಿ ಹಲವಾರು ವಿದೇಶಿ ಸಮುದಾಯಗಳು ಪ್ರಮುಖ ಪ್ರಯತ್ನ ಪಟ್ಟಿವೆ. "ಭಾರತದಲ್ಲಿ ರಾಜ್ಯಾಧಿಕಾರವನ್ನು ಕೈವಶಪಡಿಸಿಕೊಂಡ ಸಂದರ್ಭವು ಭಾರತದಲ್ಲಿ ಕ್ರೈಸ್ತ ಮತ ಪ್ರಚಾರಕ್ಕೆ ಇನ್ನೊಂದು ಆಯಾಮವನ್ನು ತಂದುಕೊಟ್ಟಿತು. ರಾಜ್ಯಾಧಿಕಾರ ನಡೆಸಲು ಭಾರತಕ್ಕೆ ಕಾಲಿರಿಸಿದ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಬ್ರಿಟೀಷರಂತಹ ಪಾಶ್ಚಾತ್ಯ ಶಕ್ತಿಗಳೊಂದಿಗೆ ಕ್ರೈಸ್ತಮತ ಪ್ರಚಾರದ ಮುಖ್ಯ ಸಾಧನವಾಗಿರುವ ಚರ್ಚ್ ಸೇರಿಕೊಂಡಿದ್ದುದು ಕ್ರೈಸ್ತಮತ ಪ್ರಚಾರಕ್ಕೆ ಬಹಳ ಸಹಾಯಕವಾಯಿತು."[೬] ಸಿದ್ದಿಯರನ್ನು ಗುಲಾಮರನ್ನಾಗಿ ಹೊತ್ತು ಸಾಗಿಸುವಲ್ಲಿ ಪೋರ್ಚುಗೀಸರು ಮತ್ತು ಬ್ರಿಟೀಷರು ಪ್ರಮುಖವಾಗಿದ್ದಾರೆ. ಇವರ ಪ್ರಭಾವ ಸಿದ್ದಿಯರ ಮೇಲಾಗಿರಬೇಕು. ಅಲ್ಲದೆ ಸ್ಥಳೀಯ ಕ್ರೈಸ್ತ ಧರ್ಮದ ಮಾಲೀಕರು ಇವರನ್ನು ಕೊಂಡುಕೊಂಡ ಪರಿಣಾಮ ಇವರು ಆ ಧರ್ಮವನ್ನು ಅನಿವಾರ್ಯವಾಗಿ ಸ್ವೀಕರಿಸಬೇಕಾಯಿತು.

ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಸಿದ್ದಿಯರಲ್ಲಿ ಹಿಂದೂ ಮತ್ತು ಮುಸ್ಲಿಂ ಸಿದ್ದಿಯರಿಗಿಂತ ಕ್ರೈಸ್ತ ಸಿದ್ದಿಯರಿಗೆ ಹೆಚ್ಚಿನ ಮನ್ನಣೆಯಿದೆ. ಇವರು ಕ್ರೈಸ್ತ ಧರ್ಮದ ಕ್ಯಾಥೋಲಿಕ್ ಪಂಗಡದವರಾಗಿದ್ದಾರೆ. ಇವರ ಚರ್ಚ್‌ಗಳನ್ನು ಅಂದರೆ ಹಳಿಯಾಳ ಮತ್ತು ಯಲ್ಲಾಪುರದ ಚರ್ಚ್‌ಗಳನ್ನು ಗೋವಾದ ಕ್ಯಾಥೋಲಿಕ್ ಚರ್ಚ್ ನಿಯಂತ್ರಿಸುತ್ತದೆ. ಸ್ಥಳೀಯ ಕ್ರಿಶ್ಚಿಯನ್ ಧರ್ಮದವರು ಕ್ರೈಸ್ತ ಸಿದ್ದಿಯರನ್ನು ಭಿನ್ನವಾಗಿ ನೋಡಿದರೂ ಸಹ ಹಿಂದೂ ಮತ್ತು ಮುಸ್ಲಿಂ ಸಿದ್ದಿಯರಲ್ಲಿ ಕಾಣುವಷ್ಟು ಪ್ರತ್ಯೇಕತೆಯನ್ನು ಹೊಂದಿಲ್ಲ. ಇವರು ಸ್ಥಳೀಯ ಕ್ರೈಸ್ತ ಧರ್ಮದವರಂತೆ ಆ ಧರ್ಮದ ಎಲ್ಲಾ ಸಂಪ್ರದಾಯಗಳನ್ನು ವಿಧಿಬದ್ಧವಾಗಿ ಆಚರಿಸುತ್ತಾರೆ. ಇವರ ಧಾರ್ಮಿಕ ಆಚರಣೆಗಳನ್ನು ಪಾದ್ರಿಗಳು ನಡೆಸಿಕೊಡುತ್ತಾರೆ. ಕ್ರೈಸ್ತ ಧರ್ಮದ ಸಿದ್ದಿಯರು ಹಿಂದೂ ಮತ್ತು ಮುಸ್ಲಿಂ ಸಿದ್ದಿಯರನ್ನಲ್ಲದೇ ಅನ್ಯ ಕೆಳಜಾತಿಯ ಸಮುದಾಯದ ಹುಡುಗಿಯರನ್ನೂ ವಿವಾಹ ಮಾಡಿಕೊಂಡಿರುವ ಕೆಲವೊಂದು ಉದಾಹರಣೆಗಳು ಸಿಗುತ್ತವೆ. ಅಂದರೆ, ಇವರಲ್ಲಿಯೂ ಸಹ ಅನ್ಯ ಧರ್ಮದವರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರ ಗೊಳಿಸಿಕೊಳ್ಳುವ ತುಡಿತ ಕಂಡುಬರುತ್ತದೆ. ವಿದೇಶದಿಂದ ಬಂದ ಹೆಚ್ಚಿನ ಸಮುದಾಯಗಳು ಅನ್ಯ ಧರ್ಮೀಯರನ್ನು ತಮ್ಮ ಕ್ರೈಸ್ತ ಧರ್ಮಕ್ಕೆ ಮತಾಂತರ ಮಾಡಿಕೊಳ್ಳುವ ಉದ್ದೇಶವನ್ನು ಹೊಂದಿದ್ದರು. ಆ ಭಾವನೆ ಕ್ರೈಸ್ತ ಸಿದ್ದಿಯರಲ್ಲಿ ಸ್ವಲ್ಪ ಮಟ್ಟಿಗೆ ಬೇರೂರಿರುವುದನ್ನು ಗುರುತಿಸಬಹುದಾಗಿದೆ.

ಇವರು ಗುಡ್‌ಫ್ರೈಡೇ ಮತ್ತು ಕ್ರಿಸ್‌ಮಸ್ ಹಬ್ಬಗಳನ್ನು ಆಚರಿಸುತ್ತಾರೆ. ಚರ್ಚ್‌ನಲ್ಲಿ ನೇರವಾಗಿ ಭಾಗವಹಿಸಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಧರ್ಮದ ಗುರುಗಳು ಅಥವಾ ಪಾದ್ರಿಗಳೊಂದಿಗೆ ನೇರವಾದ ಸಂಪರ್ಕವನ್ನು ಹೊಂದುತ್ತಾರೆ. ಅಲ್ಲದೆ ಕೆಲವು ಚರ್ಚ್‌ಗಳಲ್ಲಿ ಸಿದ್ದಿ ಸಮುದಾಯದವರು ಸಿಸ್ಟರ್ ಆಗಿ, ಪಾದ್ರಿಯಾಗಿ ಕಾರ್ಯನಿರ್ವಹಿಸುತ್ತಿರುವುದು ಕಾಣಲಾಗುತ್ತದೆ. ಅಂದರೆ ಹಿಂದೂ ಮತ್ತು ಮುಸ್ಲಿಂ ಸಿದ್ದಿಯರಿಗಿಂತ ಕ್ರೈಸ್ತ ಸಿದ್ದಿಯರು ಇದ್ದುದರಲ್ಲಿ ಉತ್ತಮವಾದ ಧಾರ್ಮಿಕ ಪರಿಸರವನ್ನು ಹೊಂದಿರುವುದು ಕಂಡುಬರುತ್ತದೆ.

ಉತ್ತರ ಕನ್ನಡ ಜಿಲ್ಲೆಯ ತಾಲೂಕುವಾರು ಸಿದ್ದಿಯರ ಧಾರ್ಮಿಕ ಕುಟುಂಬಗಳು

| ಕ್ರ.ಸಂ. | ತಾಲೂಕು | ಧರ್ಮವಾರು ಕುಟುಂಬಗಳ ಸಂಖ್ಯೆ | | | ಒಟ್ಟು |
|---|---|---|---|---|---|
| | | ಹಿಂದೂ | ಮುಸ್ಲಿಂ | ಕ್ರೈಸ್ತ | |
| ೧ | ಅಂಕೋಲಾ | ೧೯೮ | – | – | ೧೯೮ |
| ೨ | ಹಳಿಯಾಳ | ೩೮ | ೪೯೦ | ೩೮೫ | ೯೧೩ |
| ೩ | ಜೋಯಿಡಾ | – | – | ೧೨ | ೧೨ |
| ೪ | ಕಾರವಾರ | – | ೧ | ೬ | ೭ |
| ೫ | ಮುಂಡಗೋಡ | ೧೪ | ೭೨ | ೨೦ | ೧೦೬ |

| ೬ | ಶಿರಸಿ | ೬೭ | – | – | ೬೭ |
|---|---|---|---|---|---|
| ೭ | ಯಲ್ಲಾಪುರ | ೬೨೦ | ೯೯ | ೨೫೬ | ೯೭೫ |
| ಒಟ್ಟು | | ೯೩೮ | ೬೬೧ | ೬೭೯ | ೨೨೭೮ |

ಸಿದ್ದಿಯರ ತಾಲೂಕುವಾರು ಗ್ರಾಮಗಳ ಒಟ್ಟಾರೆ ಧಾರ್ಮಿಕ ಕುಟುಂಬಗಳ ಸಂಪೂರ್ಣ ವಿವರವನ್ನು ಅಂಕಿ ಅಂಶಗಳ ಪಟ್ಟಿ – ೪ ರಲ್ಲಿ ಗಮನಿಸಿ.

**೪.೨ ದೈವಾರಾಧನೆ**

ಧರ್ಮ ಮತ್ತು ದೇವರು ಒಂದೇ ನಾಣ್ಯದ ಎರಡು ಮುಖಗಳು. ಒಂದನ್ನು ಬಿಟ್ಟು ಮತ್ತೊಂದು ಕಂಡುಬರುವುದಿಲ್ಲ. ಆದಿ ಕಾಲದಿಂದಲೂ ಮಾನವನು ಒಂದಲ್ಲಾ ಒಂದು ರೀತಿಯಲ್ಲಿ ಧರ್ಮವನ್ನು ಆರಾಧಿಸುತ್ತಾ ಬಂದಿದ್ದಾನೆ. ದೈವದ ಆಚರಣೆಗಳು ಮಾನವ ಜೀವನದ ಭಾಗಗಳೇ ಆಗಿ ಬೆಳೆದು ಬಂದಿವೆ. ಪ್ರಕೃತಿಯಲ್ಲಿ ನಡೆಯುವ ಪ್ರತಿಯೊಂದು ವಿದ್ಯಮಾನಕ್ಕೂ ಯಾವುದೋ ಒಂದು ಅಗೋಚರವಾದ ಶಕ್ತಿಯ ಕೈವಾಡವಿದೆಯೆಂದು ನಂಬಲಾಗಿದೆ. ನಂತರದಲ್ಲಿ ತನ್ನ ಧರ್ಮಕ್ಕೆ ಅನುಗುಣವಾದ ದೈವಗಳನ್ನು ಸೃಷ್ಠಿಸಿ, ಆ ಎಲ್ಲಾ ವಿದ್ಯಮಾನಕ್ಕೆ ತಮ್ಮ ಧರ್ಮದ ದೈವವೇ ಕಾರಣವೆಂದು ಆರಾಧಿಸುವ ಸಂಪ್ರದಾಯವನ್ನು ರೂಡಿಸಿಕೊಂಡು ನಿಸರ್ಗವನ್ನು ಮೆಟ್ಟಿ ನಿಲ್ಲುವುದರ ಸಲುವಾಗಿ ದೇವರ ಆಚರಣೆಗಳನ್ನು ಕೈಗೊಂಡ. ಅದರಲ್ಲಿಯೂ ಮುಖ್ಯವಾಗಿ ಸಮುದಾಯದ ಜನರ ನಂಬಿಕೆ ಮತ್ತು ಆಚರಣೆಗಳ ಧ್ಯೋತಕವಾಗಿ ಈ ಪದ್ಧತಿಯನ್ನು ರೂಡಿಸಿಕೊಂಡ. ಕಾಲಗತಿಯಲ್ಲಿ ಧರ್ಮ ಮತ್ತು ದೇವರುಗಳ ಆಚರಣೆಯಲ್ಲಿ ಬದಲಾವಣೆಯಾಗುತ್ತಾ ಬಂದಿದ್ದರೂ ಮುಖ್ಯ ಉದ್ದೇಶ ಒಂದೇ ಆಗಿದೆ. ಒಟ್ಟಾರೆಯಾಗಿ ಅಗೋಚರ ಶಕ್ತಿಯೊಂದು ಸಮಾಜವನ್ನು ನಿಯಂತ್ರಿಸುತ್ತಿದೆ ಎನ್ನುವ ನಂಬಿಕೆಯನ್ನು ಸಮುದಾಯದವರು ಮನಗಂಡಿದ್ದಾರೆ.

ಸಿದ್ದಿಯರಲ್ಲಿರುವ ಮೂರೂ ಧರ್ಮದವರು ತಮ್ಮ ತಮ್ಮ ಧರ್ಮಕ್ಕನುಗುಣವಾಗಿ ದೇವರುಗಳನ್ನು ಆರಾಧಿಸುವುದು ಕಂಡುಬರುತ್ತದೆ. ಹಿಂದೂ ಸಿದ್ದಿಗಳು ಈಶ್ವರ, ಗಣಪತಿ, ಕೃಷ್ಣ, ಮಂಜುನಾಥ, ನರಸಿಂಹ, ತಿರುಪತಿ, ಗೌರಿ, ಲಕ್ಷ್ಮಿ, ಮಾರೆಮ್ಮ, ಯಲ್ಲಮ್ಮ, ಚೌಡಿ, ದುರ್ಗಿ ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಮುಸ್ಲಿಂ ಸಿದ್ದಿಯರು ಅಲ್ಲಾನನ್ನು ಪ್ರಮುಖವಾಗಿ ಆರಾಧಿಸಿದರೂ ಬಾಬಾ, ಬಾಬಾ ಬುಡನ್, ಬಾಬಾ ಗೋರಿ, ದಸ್ತಗೀರ ಶಾವಲಿ, ದವಲ್‌ಸಾಬ್, ಗೋರಿಸಾಬ್, ಹಜರತ್. ಹಸೇ ಹುಸೇನ್, ಹುಸೇನ್‌ಪೀರ್, ಮಹ್ಮದ್ ಪೈಗಂಬರ, ಮೌಲಾಲಿ ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಕ್ರೈಸ್ತ ಸಿದ್ದಿಯರು ಏಸು

ಕ್ರಿಸ್ತನನ್ನು ಆರಾಧಿಸುತ್ತಾರೆ. ಮೂರೂ ಧರ್ಮದ ಸಿದ್ದಿಯರು ಆಯಾ ಧರ್ಮದ ಪ್ರಮುಖ ದೇವರುಗಳನ್ನು ಆರಾಧಿಸುವುದು ತಿಳಿಯುತ್ತದೆ.

**೪.೩ ಧಾರ್ಮಿಕ ನಂಬಿಕೆಗಳು**

ಧರ್ಮ ಮತ್ತು ದೇವರುಗಳ ನಂಬಿಕೆಯಿಂದಾಗಿ ಸಮಾಜವು ಉತ್ತಮ ರೀತಿಯಲ್ಲಿ ಸಾಗುತ್ತಿದೆ. ಧಾರ್ಮಿಕ ನಂಬಿಕೆ ವ್ಯಕ್ತಿಯಲ್ಲಿ ಇಲ್ಲದೇ ಹೋಗಿದ್ದರೆ ಸಾಮಾಜಿಕ ನಿಯಂತ್ರಣ ಸಾಧ್ಯವಾಗುತ್ತಿರಲಿಲ್ಲ. ಸಿದ್ದಿಯರ ಮೂರೂ ಧರ್ಮದವರು ತಮ್ಮದೇ ಆದ ನಂಬಿಕೆಗಳನ್ನು ಹೊಂದಿದ್ದಾರೆ. ಇವರು ಮುಖ್ಯವಾಗಿ ಕೃಷಿ ಕಾರ್ಮಿಕರಾಗಿ ಮತ್ತು ಕೃಷಿಯನ್ನು ನೆಚ್ಚಿಕೊಂಡು ಜೀವನವನ್ನು ಸಾಗಿಸುತ್ತಿರುವುದರಿಂದ ಕೃಷಿಗೆ ಸಂಬಂಧಿಸಿದ ದೈವಗಳು ಮತ್ತು ನಂಬಿಕೆಗಳು ಪ್ರಮುಖವಾಗಿ ಕಂಡುಬರುತ್ತವೆ. ಸಿದ್ದಿಯರ ಧಾರ್ಮಿಕ ಜೀವನ ಶ್ರೀಮಂತವಾಗಿದೆ. ಅಲ್ಲದೇ ಒಂದೇ ಸಮುದಾಯ ಮತ್ತು ಒಂದೇ ಕುಟುಂಬದಲ್ಲಿ ಮೂರೂ ಧರ್ಮದವರು ಕಂಡುಬರುವುದರಿಂದ ಆಧುನಿಕ ಸಮಾಜಕ್ಕೆ ಮಾದರಿಯಾಗಿದ್ದಾರೆ. ಅಲ್ಲದೆ ಧಾರ್ಮಿಕ ಆಚರಣೆಯಲ್ಲಿಯೂ ಸಹ ತಮ್ಮದೇಯಾದ ನಂಬಿಕೆಯನ್ನು ಹೊಂದಿದ್ದಾರೆ. ಆಯಾ ಧರ್ಮಕ್ಕೆ ಅನುಗುಣವಾಗಿ ಸ್ಥಳೀಯರು ಅನುಸರಿಸುವ ವಿಧಾನಗಳನ್ನು ಸಿದ್ದಿಯರಲ್ಲಿ ಪ್ರಮುಖವಾಗಿ ಕಾಣಬಹುದು.

ಹಿರಿಯರು ತಮ್ಮ ಕುಟುಂಬವನ್ನು ಕಾಪಾಡುತ್ತಿರುತ್ತಾರೆ ಎನ್ನುವ ನಂಬಿಕೆ ಮೂರೂ ಧರ್ಮದ ಸಿದ್ದಿಯರಲ್ಲಿದೆ. ಇನ್ನುಳಿದಂತೆ ಆಯಾ ಧರ್ಮದಲ್ಲಿರುವ ಪ್ರಮುಖ ದೇವರುಗಳನ್ನು ಆರಾಧಿಸುತ್ತಾರೆ. ಧರ್ಮಕ್ಕೆ ಅನುಗುಣವಾಗಿ ನಡೆದುಕೊಂಡರೆ ದೇವರು ಸಂಪ್ರಸನ್ನರಾಗಿ ತಮಗೆ ಒಳ್ಳೆಯದು ಮಾಡುತ್ತಾರೆ ಎನ್ನುವ ನಂಬಿಕೆಯನ್ನು ಸಮುದಾಯದವರು ಹೊಂದಿದ್ದಾರೆ. ಸಿದ್ದಿಯರಿಗೆ ತಮ್ಮ ತಮ್ಮ ಧರ್ಮದ ದೇವರುಗಳೇ ಸೃಷ್ಟಿಕರ್ತರಾಗಿದ್ದಾರೆ ಎನ್ನುವ ಅಭಿಪ್ರಾಯ ಹೊಂದಿದ್ದಾರೆ. ತಮ್ಮ ದೈವದಿಂದಲೇ ಸೃಷ್ಟಿಯ ಎಲ್ಲಾ ಕಾರ್ಯಗಳು ನೆರವೇರಲ್ಪಡುತ್ತಿವೆ ಎನ್ನುವ ಪರಿಕಲ್ಪನೆ ಇದೆ. ಒಟ್ಟಾರೆಯಾಗಿ ಧರ್ಮದ ಮೇಲಿನ ನಂಬಿಕೆ ಇವರ ಜೀವಾಳವಾಗಿದೆ.

**೪.೪ ವಾರ್ಷಿಕಾವರ್ತನಾ ಆಚರಣೆಗಳು**

**೪.೪.೧ ಸಾವಿನ ನಂತರದ ಆಚರಣೆಗಳು**

ಮಾನವ ಸಮಾಜದಲ್ಲಿ ಮಗು ಜನಿಸುವುದಕ್ಕಿಂತ ಮುಂಚೆಯೇ ಸಂಸ್ಕಾರಗಳು ಆರಂಭವಾಗುತ್ತವೆ. ಇವು ವ್ಯಕ್ತಿ ಸತ್ತ ನಂತರವೂ ಮುಂದುವರೆಯುತ್ತವೆ. ಮರಣ ಹೊಂದಿದ ನಂತರದಲ್ಲಿ ಹಲವಾರು ವಿಧಿ ವಿಧಾನಗಳನ್ನು ಪ್ರತಿಯೊಂದು ಸಮುದಾಯಗಳು ಅನುಸರಿಸುವುದು ಕಂಡುಬರುತ್ತದೆ. ಇದಕ್ಕೆ ಸಿದ್ದಿ ಸಮುದಾಯ ಹೊರತಾಗಿಲ್ಲ. ಸಿದ್ದಿಯರ

ಮೂರೂ ಧರ್ಮದವರು ಸಾವಿನ ನಂತರ ವಾರ್ಷಿಕ ಆಚರಣೆಯನ್ನು ಅನುಸರಿಸುವ ಪದ್ಧತಿಯನ್ನು ಹೊಂದಿದ್ದಾರೆ. ಸಮುದಾಯದಲ್ಲಿ ವ್ಯಕ್ತಿಯು ಮರಣ ಹೊಂದಿದ ಮೂರು ಮತ್ತು ಹನ್ನೊಂದನೇ ದಿನಗಳಲ್ಲಿ ಹಲವಾರು ಕಾರ್ಯಗಳು ನಿರ್ವಹಿಸಲ್ಪಡುತ್ತವೆ. ವಾರ್ಷಿಕವಾಗಿ ಸಿದ್ದಿಯರ ಮೂರೂ ಧರ್ಮದವರು ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಎಲ್ಲಾ ಸಿದ್ದಿಯರು ಹಿರಿಯರ ಆರಾಧನೆಯಲ್ಲಿ ಹೆಚ್ಚಿನ ನಂಬಿಕೆಯುಳ್ಳವರಾಗಿದ್ದಾರೆ. ಹಿಂದೂ ಸಿದ್ದಿಗಳು ಮನೆಯ ಒಂದು ಗೊತ್ತಾದ ಅಥವಾ ದೇವರ ಪೂಜೆಯ ಸ್ಥಳದಲ್ಲಿ ತೆಂಗಿನ ಕಾಯಿಯನ್ನು ಇರಿಸಿ ಪೂಜಿಸುತ್ತಾರೆ. ಆ ತೆಂಗಿನಕಾಯಿ ಅವರಿಗೆ ಕೇವಲ ಒಂದು ಕಾಯಿಯಾಗಿರದೇ ಪವಿತ್ರತೆಯ ಸಂಕೇತವಾಗಿರುತ್ತದೆ. ಪೂಜಿಸುವ ಆ ತೆಂಗಿನಕಾಯಿಯಲ್ಲಿ ಸತ್ತ ಮನೆಯ ಹಿರಿಯರ ಮೂರು ತಲೆಮಾರಿನ ಆತ್ಮಗಳು ಬಂದು ನೆಲೆಸುತ್ತವೆ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ. ಮೂರು ತಲೆಮಾರಿನ ಸತ್ತ ಮನೆಯವರ ಆತ್ಮಗಳು ಅದರಲ್ಲಿ ನೆಲೆಸುವುದರಿಂದ, ಕುಟುಂಬಕ್ಕೆ ಯಾವ ಆಪತ್ತುಗಳೂ, ಕಷ್ಟ ನಷ್ಟಗಳೂ ಸಂಭವಿಸದಂತೆ ತಡೆಯುತ್ತವೆ ಎನ್ನುವ ಭಾವನೆಯಿದೆ. ಈ ರೀತಿಯಾದ ನಂಬಿಕೆಯ ಆಚರಣೆಯನ್ನು 'ಹಿರಿಯರ ಹಬ್ಬ'ವೆಂದು ಕರೆಯಲಾಗುತ್ತದೆ. ವರ್ಷಕ್ಕೊಮ್ಮೆ ಈ ಹಬ್ಬವನ್ನು ಆಚರಿಸಲಾಗುತ್ತದೆ. ಈ ಹಬ್ಬದಲ್ಲಿ ತೆಂಗಿನಕಾಯಿಯನ್ನು ಬದಲಿಸಲಾಗುತ್ತದೆ. ಬದಲಿಸಿದ ಆ ತೆಂಗಿನಕಾಯಿಯನ್ನು ಒಡೆದು ಅದರಿಂದ ಎಣ್ಣೆಯನ್ನು ತೆಗೆದು ಹಿರಿಯರ ಹಬ್ಬದಲ್ಲಿ ದೇವರ ಮುಂದೆ ದೀಪವನ್ನು ಉರಿಸಲಾಗುತ್ತದೆ. ಈ ಹಬ್ಬವನ್ನು ಮಹಾಲಯದಲ್ಲಿ ಆಚರಿಸಲಾಗುತ್ತದೆ. ಹಿರಿಯರ ಹಬ್ಬದಂದು ಹಿರಿಯರಿಗೆ ಎಡೆ ಮಾಡಿ ಪೂಜಿಸಲಾಗುತ್ತದೆ. ಅಂದು ಹಿರಿಯರಿಗೆ ಹೊಸ ಬಟ್ಟೆಗಳನ್ನು ತರಲಾಗುತ್ತದೆ. ಕೆಲವರು ಸಮುದಾಯದ ಇತರರನ್ನು ಕರೆದು ಉಣಬಡಿಸುವುದು ಕಂಡುಬರುತ್ತದೆ. ಎಡೆ ಮಾಡಿ ದೂಪ ಹಾಕಿ ಪೂಜಿಸುವುದು ಹಿಂದೂ ಧರ್ಮದ ಸಿದ್ದಿಯರಲ್ಲಿ ಪ್ರಮುಖವಾಗಿದೆ. ಹಿರಿಯರ ಹಬ್ಬದ ದಿನದಂದು ಮನೆಯಲ್ಲಿ ಸಡಗರ-ಸಂಭ್ರಮ ಪ್ರಮುಖವಾಗಿರುತ್ತದೆ.

ಮುಸ್ಲಿಂ ಸಿದ್ದಿಯರಾದರೆ ತಮ್ಮ ಮನೆಯ ಒಂದು ಮೂಲೆಯಲ್ಲಿ ಚಿಕ್ಕದಾದ ಗದ್ದುಗೆಯನ್ನು ನಿರ್ಮಾಣ ಮಾಡಿ ಹಿರಿಯರನ್ನು ಆರಾಧಿಸುತ್ತಾರೆ. ಆದರೆ ಇವರು ತೆಂಗಿನ ಕಾಯಿಯನ್ನು ಬಳಸುವುದಿಲ್ಲ. ಬದಲಾಗಿ ಮನೆಯ ಒಂದು ಗೊತ್ತಾದ ಜಾಗದಲ್ಲಿ ಗದ್ದುಗೆಯನ್ನು ನಿರ್ಮಾಣ ಮಾಡಿರುತ್ತಾರೆ. ಹಿರಿಯರ ಹಬ್ಬ ಮಾಡುವ ದಿನದಂದು ಗದ್ದುಗೆಯನ್ನು ಸ್ವಚ್ಛವಾಗಿ ತೊಳೆದು ಶುಭ್ರಗೊಳಿಸುತ್ತಾರೆ. ನಂತರ ಮನೆಯವರೆಲ್ಲರೂ ಸೇರಿ ಗದ್ದುಗೆಗೆ ಊದಿನಕಡ್ಡಿಯನ್ನು ಬೆಳಗುವುದರ ಮೂಲಕ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಇಸ್ಲಾಂ ಧರ್ಮದ ಸಂಪ್ರದಾಯಕ್ಕನುಗುಣವಾಗಿ ಅಂದು ವಿಶೇಷವಾದ ಪ್ರಾರ್ಥನೆಯನ್ನು

ಸಲ್ಲಿಸಲಾಗುತ್ತದೆ. ಎಲ್ಲರೂ ಹೊಸ ಬಟ್ಟೆಯನ್ನು ತೊಟ್ಟು ಸಂಭ್ರಮದಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಕ್ರೈಸ್ತ ಸಿದ್ದಿ ಸಮುದಾಯದವರೂ ಕೂಡ ಹಿರಿಯರ ಆಚರಣೆಯನ್ನು ಮಾಡುತ್ತಾರೆ. ಈ ಧರ್ಮದವರು ವರ್ಷಕ್ಕೊಮ್ಮೆ ಹಿರಿಯರ ಹಬ್ಬವನ್ನು ಮಾಡುತ್ತಾರೆ. ಇವರೂ ಸಹ ತೆಂಗಿನಕಾಯಿಯನ್ನು ಹಿರಿಯರೆಂದು ಬಳಸುವುದಿಲ್ಲ. ಬದಲಾಗಿ ಮನೆಯಲ್ಲಿಯೇ ಹಿರಿಯರ ಹೆಸರಿನಲ್ಲಿ ಒಂದು ಗದ್ದುಗೆಯನ್ನು ನಿರ್ಮಿಸಿರುತ್ತಾರೆ. ತಮ್ಮ ಧರ್ಮದ ಸಂಕೇತವಾಗಿರುವ ಶಿಲುಬೆಯನ್ನು ಆ ಗದ್ದುಗೆಯ ಮೇಲಿಟ್ಟು ಪೂಜಿಸುತ್ತಿರುತ್ತಾರೆ. ಹಿರಿಯರ ಹಬ್ಬದ ದಿನದಂದು ಮೇಣದ ಬತ್ತಿಯನ್ನು ಹಚ್ಚಿ ಆರಾಧಿಸುತ್ತಾರೆ. ಈ ಸಂದರ್ಭದಲ್ಲಿ ಕ್ರೈಸ್ತ ಧರ್ಮಕ್ಕೆ ಅನುಗುಣವಾದ ರೀತಿಯಲ್ಲಿ ಪ್ರಾರ್ಥನೆಯನ್ನು ಸಲ್ಲಿಸಿ ಸಂತೋಷದಿಂದ ಹಬ್ಬವನ್ನು ಆಚರಿಸುತ್ತಾರೆ.

ಮೂರೂ ಸಮುದಾಯದಲ್ಲಿ ಹಿರಿಯರ ಹಬ್ಬವನ್ನು ಸಡಗರ, ಶ್ರದ್ಧೆ, ಭಯ-ಭಕ್ತಿಯಿಂದ ಆಚರಿಸುತ್ತಾರೆ. ಹಿರಿಯರನ್ನು ಆರಾಧಿಸುವುದರಿಂದ ಯಾವುದೇ ಭೂತ ಪಿಶಾಚಿಗಳು ಮನೆಯನ್ನು ಪ್ರವೇಶಿಸುವುದಿಲ್ಲ ಎನ್ನುವ ನಂಬಿಕೆಯನ್ನು ಇವರು ಹೊಂದಿದ್ದಾರೆ. ಭೂತ ಪಿಶಾಚಿಗಳ ಬಗ್ಗೆ ಇವರು ಗಾಢವಾಗಿ ನಂಬುತ್ತಾರೆ. ಈ ಪೂಜೆಯನ್ನು ಕೇವಲ ದುಷ್ಟ ಶಕ್ತಿಗಳನ್ನು ತಡೆಯುವುದಕ್ಕೆ ಮಾತ್ರ ಆಚರಿಸದೇ, ಮರಣ ಹೊಂದಿದ ವ್ಯಕ್ತಿಗಳ ಆತ್ಮಗಳು ಸಂತೃಪ್ತಿಯನ್ನು ಹೊಂದುವ ನಂಬಿಕೆ ಇದೆ. ಜೊತೆಗೆ ಕುಟುಂಬದಲ್ಲಿ ಮರಣ ಹೊಂದಿದ ಹಿರಿಯರನ್ನು ನೆನೆಯುವ ಉದ್ದೇಶವೂ ಸಹ ಈ ಹಬ್ಬದಲ್ಲಿ ಅಡಕವಾಗಿದೆ. ಮರಣ ಹೊಂದಿದ ವ್ಯಕ್ತಿಗಳ ಆತ್ಮಗಳನ್ನು ಸಂತೃಪ್ತಿಪಡಿಸದಿದ್ದರೆ ಕುಟುಂಬವು ಅನೇಕ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಹಿರಿಯರ ಆತ್ಮಗಳು ನಮ್ಮ ಕುಟುಂಬದ ಪ್ರತಿಯೊಂದು ಕಾರ್ಯ ಚಟುವಟಿಕೆಗಳನ್ನು ಗಮನಿಸುತ್ತವೆ. ಆದ್ದರಿಂದ ಹಿರಿಯರ ಹಬ್ಬವನ್ನು ಅಚ್ಚುಕಟ್ಟಾಗಿ ನಿರ್ವಹಿಸಲಾಗುತ್ತದೆ ಎಂದು ಮಾಗೋಡಿನ ಚಂದ್ರೇಶ್ ಸಿದ್ದಿಯವರು ತಿಳಿಸುತ್ತಾರೆ.

**೪.೪.೨ ನಿಸರ್ಗ ಸಂಬಂಧಿ ಆಚರಣೆಗಳು**

ಕಾಡಾಡಿಗಳಾದ ಸಿದ್ದಿಯರು ತಮ್ಮ ಸುತ್ತಲಿನ ಪರಿಸರವನ್ನು ಪ್ರೀತಿಸುತ್ತಾರೆ. ಅಣುರೇಣು ತೃಣಕಾಷ್ಠಗಳಲ್ಲಿಯೂ ದೈವತ್ವದ ನಂಬಿಕೆಯನ್ನು ಹೊಂದಿದ್ದಾರೆ. ತಮ್ಮ ಜೀವನಕ್ಕೆ ಆಶ್ರಯವನ್ನಿತ್ತ ನಿಸರ್ಗವನ್ನು ಆರಾಧಿಸುವ ಪರಂಪರೆ ಇವರಲ್ಲಿ ಇನ್ನೂ ಜೀವಂತವಾಗಿದೆ. ಆದಿವಾಸಿಗಳಿಗೆ ತಾವು ವಾಸಿಸುವ ಸಂಪೂರ್ಣ ಕಾಡು ದೈವತ್ವವಾಗಿದ್ದರೂ, ತಮ್ಮದೇ ಆದ ಗಡಿ ಅಥವಾ ಸೀಮೆಯನ್ನು ಹೊಂದಿರುತ್ತವೆ. "ಯಾವುದೇ ಬುಡಕಟ್ಟು ಜನಾಂಗ ತಾವು ತಲೆತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣ ಮಟ್ಟದ ಬುಡಕಟ್ಟು ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ

ಕಾಡನ್ನು ಹಳ್ಳಿಯ ಸುತ್ತಲೂ ಸಾಂಪ್ರದಾಯಿಕವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿ ರೇಖೆಯನ್ನು ಸೀಮಾ/ಜಮ್ಮಾ/ಎಲ್ಲೆ/ ಗಡಿ ಎಂದು ಕರೆಯಲಾಗುತ್ತದೆ."[೭] ಈ ಗಡಿಯ ಪ್ರದೇಶವ ಒಳಗಿರುವ ಅರಣ್ಯವನ್ನು ಸಿದ್ದಿಯರು ಆರಾಧಿಸುತ್ತಾರೆ. ತಮ್ಮ ಗಡಿಯನ್ನು ಹೊರುತಪಡಿಸಿದ ನಿಸರ್ಗವನ್ನೂ ಸಹ ಇವರು ಆರಾಧಿಸುವವರಾಗಿದ್ದಾರೆ. ಇವರ ಹಿರಿಯರ ಆತ್ಮಗಳು ತಮ್ಮ ಗಡಿಯ ಒಳಗಡೆಯೇ ಇರುತ್ತವೆ ಎನ್ನುವ ನಂಬಿಕೆ ಈ ಸಮುದಾಯದಲ್ಲಿ ಗಾಢವಾಗಿದೆ. ಹಿರಿಯರ ಆತ್ಮಗಳು ಗಡಿಯೊಳಗೆ ಇರುವುದರಿಂದ ನಿಶ್ಚಿಂತರಾಗಿ ಜೀವನ ಸಾಗಿಸುತ್ತಿದ್ದಾರೆ.

ಸಿದ್ದಿಯರು ಯುಗಾದಿಯಲ್ಲಿ ನಿಸರ್ಗ ಸಂಬಂಧಿ ಆಚರಣೆಯಾದ ಗಡಿ ಹಬ್ಬವನ್ನು ಆಚರಿಸುತ್ತಾರೆ. ಸಮುದಾಯದ ಅಥವಾ ಊರಿನವರೆಲ್ಲರೂ ಸೇರಿ ಯುಗಾದಿಯಲ್ಲಿ ಕಾಡಿಗೆ ಬಲಿಯನ್ನು ನೀಡಿ ಆರಾಧಿಸುತ್ತಾರೆ. ಈ ಹಬ್ಬದ ಖರ್ಚಿಗಾಗಿ ಸಮುದಾಯದ ಪ್ರತಿಯೊಂದು ಕುಟುಂಬದಿಂದ ಇಂತಿಷ್ಟು ಹಣ ಎಂದು ನಿಗದಿಮಾಡಿ ಸಂಗ್ರಹಿಸಿಕೊಂಡು ಗಡಿರೇಖೆಯ ಭಾಗದಲ್ಲಿ ಕಾಡಿಗೆ ಪೂಜೆ ಸಲ್ಲಿಸಿ ಕುರಿ ಅಥವಾ ಕೋಳಿಯನ್ನು ಬಲಿ ಕೊಡುತ್ತಾರೆ. ಇದನ್ನು 'ಗಡಿ ಹಬ್ಬ' ಎಂದು ಕರೆಯಲಾಗುತ್ತದೆ. ಆನಂತರ ಸಮುದಾಯದವರೆಲ್ಲರೂ ಸೇರಿ ಊಟ ಮಾಡಿಕೊಂಡು ತಮ್ಮ ತಮ್ಮ ಮನೆಗೆ ಹಿಂದಿರುಗುತ್ತಾರೆ. ನಿಸರ್ಗ ಸಂತೃಪ್ತಿಯಾಗಿದ್ದರೆ ನಾವು ಸುಖವಾಗಿರುತ್ತೇವೆ ಎಂಬ ಸತ್ಯವನ್ನು ಈ ಹಬ್ಬವು ತಿಳಿಸುತ್ತದೆ. ಒಟ್ಟಾರೆಯಾಗಿ ಸಿದ್ದಿ ಸಮುದಾಯದವರು ನಿಸರ್ಗದ ಬಗೆಗೆ ಹೆಚ್ಚಿನ ಕಾಳಜಿ ಮತ್ತು ಭಯ-ಭಕ್ತಿಯನ್ನು ಹೊಂದಿದವರಾಗಿದ್ದಾರೆ.

**೪.೪.೩ ಕೃಷಿ ಸಂಬಂಧಿ ಆಚರಣೆಗಳು**

ಸಿದ್ದಿಯರು ಮುಖ್ಯವಾಗಿ ಕೃಷಿಯನ್ನು ಅವಲಂಬಿಸಿ ಹೊಟ್ಟೆಯನ್ನು ಹೊರೆಯುತ್ತಿದ್ದಾರೆ. ಕೃಷಿ ಕೂಲಿಗಳಾಗಿ ಮತ್ತು ಅಲ್ಪಸ್ವಲ್ಪ ಅತಿಕ್ರಮಣ ಭೂಮಿಯಲ್ಲಿ ಕೃಷಿಯನ್ನು ನಂಬಿಕೊಂಡು ಜೀವನವನ್ನು ನಿರ್ವಹಿಸುತ್ತಿದ್ದಾರೆ. ಕೃಷಿಗೆ ಸಂಬಂಧಿಸಿದಂತೆ ಹಲವಾರು ಆಚರಣೆಗಳನ್ನು ರೂಡಿಸಿಕೊಂಡಿದ್ದಾರೆ. ಭೂಮಿಯನ್ನು ಉಳುಮೆ ಮಾಡುವಾಗ, ಬಿತ್ತುವಾಗ, ಬೆಳೆಗಳು ಬೆಳೆದು ನಿಂತಾಗ, ಫಲವನ್ನು ಕೊಯ್ಯುವಾಗ, ರಾಶಿ ಮಾಡುವಾಗ ಮತ್ತು ಮಾಡಿದ ನಂತರ ಹಲವಾರು ರೀತಿಯಲ್ಲಿ ಪೂಜಿಸುವ ಸಂಪ್ರದಾಯ ಇವರಲ್ಲಿ ಕಂಡುಬರುತ್ತದೆ.

**೪.೪.೩.೧ ಜಟ್ಟಿಗ**

ಜಟ್ಟಿಗ ಸಿದ್ದಿಯರ ಮಹತ್ವದ ದೇವರುಗಳಲ್ಲೊಂದಾಗಿದೆ. ಈ ಜಟ್ಟಿಗ ದೇವರ ಆರಾಧನೆ ಉತ್ತರಕನ್ನಡ ಜಿಲ್ಲೆಯ ಇನ್ನಿತರ ಬುಡಕಟ್ಟು ಸಮುದಾಯಗಳಲ್ಲಿಯೂ ಕಂಡುಬರುತ್ತದೆ. ಈ ದೈವ ಸಿದ್ದಿ ಸಮುದಾಯದವರ ಗ್ರಾಮ ದೇವತೆಯ ಒಂದು

ರೂಪವಾಗಿದೆ. "ಊರಿನ ಹಿತರಕ್ಷಣೆಗಾಗಿ ಜಟ್ಟಿ ಕಾಳಗದಲ್ಲಿ ಮಡಿದ ವೀರನು ಜಟ್ಟಿಗನಾಗಿ ಪೂಜೆಗೊಳ್ಳುತ್ತಾನೆ. ಕಟ್ಟುಮಸ್ತಾದ ದೇಹವುಳ್ಳ ಈ ದಡಿಗ ಜಟ್ಟಿಗಳು ಹೆಗಲ ಮೇಲೆ ಕಂಬಳಿ, ಕೈಯಲ್ಲಿ ಕಂಬಿಗುರುಗಿ ಹಿಡಿದು ಹೊಲವನ್ನು ರಕ್ಷಿಸುತ್ತವೆ ಎಂಬ ನಂಬಿಕೆ ಸ್ಥಳೀಯ ಕೆಳವರ್ಗದ ಹಿಂದೂಗಳಲ್ಲಿ ನೆಲೆಸಿರುವಂತೆ ಸಿದ್ದಿಗಳಲ್ಲಿಯೂ ನೆಲೆಸಿದೆ."[೮] ಸಿದ್ದಿಯರು ತಾವು ಬೆಳೆದ ಬೆಳೆಗಳನ್ನು ರಕ್ಷಿಸುವ ಈ ದೇವರಿಗೆ ಬಲಾಢ್ಯ ವ್ಯಕ್ತಿಯ ರೂಪವನ್ನು ಕೊಟ್ಟು ಪೂಜಿಸುತ್ತಿದ್ದಾರೆ. ಬೆಳೆದ ಬೆಳೆಯನ್ನು ಕಳ್ಳಕಾಕರು ಮತ್ತು ಕಾಡುಪ್ರಾಣಿಗಳಿಂದ ರಕ್ಷಿಸುತ್ತದೆ ಎನ್ನುವ ನಂಬಿಕೆ ಇವರದು. ಸಿದ್ದಿ ಸಮುದಾಯದವರು ಮೂಲತಃ ಕೃಷಿಕರಲ್ಲ. ಆದರೆ, ಗುಲಾಮಗಿರಿಯಿಂದ ತಪ್ಪಿಸಿಕೊಂಡು ಅರಣ್ಯವನ್ನು ಸೇರಿದ ನಂತರ ತಮ್ಮ ಉಪಜೀವನಕ್ಕಾಗಿ ಅಲ್ಪ ಪ್ರಮಾಣದಲ್ಲಿ ಅರಣ್ಯವನ್ನು ಅತಿಕ್ರಮಣ ಮಾಡಿಕೊಂಡು ಕೃಷಿಯನ್ನು ಅನುಸರಿಸುತ್ತಿದ್ದಾರೆ. ಈ ಕೃಷಿ ಭೂಮಿಯ ಬದುಗಳಲ್ಲಿ ಒಂದು ಕಲ್ಲನ್ನಿಟ್ಟು ಪೂಜಿಸುತ್ತಾರೆ. ಅದುವೇ ಇವರ ಬೆಳೆಯ ರಕ್ಷಕ ಜಟ್ಟಿಗ. ಈ ಜಟ್ಟಿಗನನ್ನು ಹವ್ಯಕರೂ ಸೇರಿದಂತೆ ಹಲವಾರು ಬುಡಕಟ್ಟು ಸಮುದಾಯಗಳು ಕೃಷಿ ರಕ್ಷಕ ದೈವವಾಗಿ ಆರಾಧಿಸುವರು. "ಸಿದ್ದಿಯರು ಪೂಜಿಸುವ 'ಜಟ್ಟಿಗ' ಉತ್ತರಕನ್ನಡದ ಗೊಂಡರು, ಹಾಲಕ್ಕಿ ಒಕ್ಕಲಿಗರು ಮುಂತಾಗಿ ಕೃಷಿ ಸಂಬಂಧಿ ಬುಡಕಟ್ಟುಗಳ ಪ್ರಮುಖ ದೇವತೆ."[೯] ಈ ದೈವವನ್ನು ಒಂದೊಂದು ಸಮುದಾಯ ಒಂದೊಂದು ರೀತಿಯಾಗಿ ಆರಾಧಿಸುತ್ತವೆ. ಈ ದೈವವನ್ನು ಆರಾಧಿಸುವ ಪ್ರತಿಯೊಂದು ಸಮುದಾಯಗಳೂ ವರ್ಷಕ್ಕೆ ಒಂದು ಸಲವಾದರೂ ಪೂಜೆ ಸಲ್ಲಿಸುತ್ತವೆ. ಬ್ರಾಹ್ಮಣರು ಆರಾಧಿಸುವ ಈ ಜಟ್ಟಿಗನಿಗೆ ಮಾಂಸದ ಬದಲಾಗಿ ಶಾಖಾಹಾರ ಅಥವಾ ಸಿಹಿ ಅಡುಗೆಯನ್ನು ಮಾಡಿ ಎಡೆ ಹಿಡಿಯುತ್ತಾರೆ. ಆದರೆ ಸಿದ್ದಿ ಸಮುದಾಯದವರು ವರ್ಷಕ್ಕೆ ಒಮ್ಮೆಯಾದರೂ ಈ ಜಟ್ಟಿಗನಿಗೆ ಕೋಳಿ ಕೊಯ್ಯಲೇಬೇಕು. ಅಂದರೆ ಇವರು ಮಾಂಸಾಹಾರವನ್ನು ಇದಕ್ಕೆ ನೈವೇದ್ಯ ಮಾಡುತ್ತಾರೆ. ಈ ದೇವರಿಗೆ ಏಡಿ, ಕೋಳಿ, ಸಾರಾಯಿ, ಭಂಗಿ, ಮೀನು ಮುಂತಾದವುಗಳನ್ನು ನೈವೇದ್ಯವಾಗಿ ಅರ್ಪಿಸುತ್ತಾರೆ. ಸಿದ್ದಿಯರ ಅಥವಾ ಬುಡಕಟ್ಟುಗಳ ಜಟ್ಟಿಗ ಮಾಂಸಾಹಾರಿಯಾಗಿ ಆರಾಧಿಸಲ್ಪಡುತ್ತಿದೆ.

### ೪.೪.೩.೨ ನಾಗದೇವತೆ

ಸಿದ್ದಿಯರು ಬೆಳೆಯುವ ಬೆಳೆಗಳನ್ನು ರಕ್ಷಿಸುವಲ್ಲಿ ನಾಗದೇವತೆಯೂ ಸಹ ಪ್ರಮುಖ ಪಾತ್ರ ವಹಿಸುತ್ತದೆ. ಕೃಷಿ ರಕ್ಷಕ ದೇವರುಗಳಲ್ಲಿ ಇದೂ ಒಂದಾಗಿದೆ. ಹೊಲದಲ್ಲಿ ಬೆಳೆಯುವ ಬೆಳೆಗಳನ್ನು ಹಲವಾರು ಕ್ರಿಮಿ ಕೀಟಗಳು ಮತ್ತು ಪ್ರಾಣಿಗಳು ಹಾಳು ಮಾಡುತ್ತಿರುತ್ತವೆ. ಅವುಗಳಲ್ಲಿ ಇಲಿಯೂ ಒಂದು. ಸಿದ್ದಿಯರು ಬೆಳೆಯುವ ಬೆಳೆಗಳನ್ನು ನಾಶ ಮಾಡುವ ಇಲಿಯನ್ನು ನಾಗದೇವತೆಯು ತಿನ್ನುವದರಿಂದ ಅದನ್ನು ಆರಾಧಿಸುತ್ತಾರೆ. ಕಾಡಾಡಿಗಳಾದ

ತಮ್ಮನ್ನೂ ಸಹ ರಕ್ಷಿಸುತ್ತವೆ ಎನ್ನುವ ಭಾವನೆಯನ್ನು ಹೊಂದಿದ್ದಾರೆ. ಕಲ್ಲಿನ ಮೇಲೆ ನಾಗದೇವತೆಯ ಚಿತ್ರವನ್ನು ಕೆತ್ತಿ ಪೂಜಿಸುತ್ತಾರೆ. ಇವರು ನಾಗರ ಪಂಚಮಿಯ ದಿನದಂದು ಈ ದೇವತೆಗೆ ಹಾಲೆರೆಯುತ್ತಾರೆ. ಹಾವುಗಳು ಮಾಂಸಾಹಾರಿಗಳಾಗಿದ್ದರೂ ಸಹ ಇವುಗಳಿಗೆ ಸಸ್ಯಾಹಾರವನ್ನೇ ನೈವೇದ್ಯವನ್ನಾಗಿ ನೀಡಿ ಆರಾಧಿಸುವುದು ಈ ಸಮುದಾಯದಲ್ಲಿ ಕಂಡುಬರುತ್ತದೆ.

**೪.೪.೩.೩ ಪಾಂಡವರ ಆಚರಣೆ**

ಪಾಂಡವರ ಆಚರಣೆ ಬಹುತೇಕ ಹಿಂದೂ ಸಮುದಾಯಗಳಲ್ಲಿ ಕಂಡುಬರುತ್ತದೆ. ಅದರಲ್ಲಿಯೂ ಮುಖ್ಯವಾಗಿ ಕೃಷಿಕ ಸಮುದಾಯಗಳಲ್ಲಿ ಈ ಪಾಂಡವರನ್ನು ಆರಾಧಿಸಲಾಗುತ್ತದೆ. ಪಾಂಡವರಿಂದಲೇ ಕೃಷಿಯು ಆರಂಭವಾಯಿತು ಎನ್ನುವ ಪ್ರತೀತಿ ಇದೆ. ಪಾಂಡವರು ಸಮರ್ಥ ಕೃಷಿಕರಾಗಿದ್ದಾರೆ. ಇವರನ್ನು ಆರಾಧಿಸಿದರೆ ಭೂಮಿಯು ಫಲವತ್ತತೆಯನ್ನು ಪಡೆದು ಹೆಚ್ಚಿನ ಇಳುವರಿ ನೀಡುತ್ತದೆ ಎನ್ನುವ ನಂಬಿಕೆ ಇದೆ. ಈ ಸಂಪ್ರದಾಯ ಸಿದ್ದಿ ಸಮುದಾಯದಲ್ಲಿಯೂ ಕಂಡುಬರುತ್ತದೆ. ಸುಗ್ಗಿಯಾದ ಕೂಡಲೇ ರಾಶಿಯನ್ನು ಮನೆಗೆ ತರುವುದಕ್ಕಿಂತ ಮುಂಚಿತವಾಗಿ ಈ ಆಚರಣೆಯನ್ನು ಮಾಡುತ್ತಾರೆ. ತಮ್ಮ ಹೊಲದಲ್ಲಿ ಒಂದು ಸೂಕ್ತವೆನಿಸಿದ ಸ್ಥಳದಲ್ಲಿ ಸಗಣಿಯಿಂದ ಸಾರಿಸಿ, ಸಣ್ಣದಾದ ಒಂದು ಚಪ್ಪರವನ್ನು ನಿರ್ಮಿಸುತ್ತಾರೆ. ಅಲ್ಲಿಯೇ ಅಕ್ಕಪಕ್ಕದಲ್ಲಿ ದೊರೆಯುವ ಐದು ಸಣ್ಣ ಕಲ್ಲುಗಳನ್ನು ಆರಿಸಿ ತಂದು ಅವುಗಳನ್ನು ಸಗಣಿಯ ಮುದ್ದೆಯ ಮೇಲಿಡುತ್ತಾರೆ. ಸಗಣಿಯ ಮುದ್ದೆಯ ಮೇಲಿರುವ ಐದು ಕಲ್ಲುಗಳನ್ನು ಪಾಂಡವರೆಂದು ಭಾವಿಸಿ ಅವುಗಳಿಗೆ ಅರಿಶಿನ, ಕುಂಕುಮ, ಹೂವು, ಊದಿನಕಡ್ಡಿಗಳನ್ನು ಹಚ್ಚಿ, ನೈವೇದ್ಯ ಮಾಡಿ ಪೂಜಿಸುತ್ತಾರೆ. ಈ ಆಚರಣೆಯನ್ನು ಸುಮಾರು ಹದಿನೈದು ದಿನಗಳವರೆಗೆ ಅಂದರೆ ಹುಣ್ಣಿಮೆಯವರೆಗೆ ಆಚರಿಸುವುದು ಸಿದ್ದಿ ಸಮುದಾಯದಲ್ಲಿ ಕಂಡುಬರುತ್ತದೆ.

**೪.೪.೩.೪ ರಾಶಿ ಪೂಜೆ**

ಕೃಷಿಯು ಸಿದ್ದಿಯರ ಮುಖ್ಯ ವೃತ್ತಿಯಾಗಿದೆ. ಕೃಷಿಗೆ ಸಂಬಂಧಿಸಿದಂತೆ ಹಲವಾರು ಆಚರಣೆಗಳನ್ನು ನೆರವೇರಿಸುತ್ತಾರೆ. ಅವುಗಳಲ್ಲಿ ರಾಶಿ ಪೂಜೆಯೂ ಒಂದು. ಸಿದ್ದಿಯರು ತಮ್ಮ ಕೃಷಿ ಭೂಮಿಯಲ್ಲಿ ಬೆಳೆದ ಬೆಳೆಗಳನ್ನು ಕೊಯ್ದು ರಾಶಿ ಮಾಡುವಾಗ ಅದಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ. ಇದನ್ನು ರಾಶಿ ಪೂಜೆ ಅಥವಾ 'ಕನಾಪ' ಎಂದು ಕರೆಯಲಾಗುತ್ತದೆ. ರಾಶಿಯನ್ನು ಪೂಜೆ ಮಾಡಿದ ನಂತರವೇ ಧಾನ್ಯಗಳನ್ನು ಚೀಲಗಳಲ್ಲಿ ತುಂಬುತ್ತಾರೆ. ತನ್ನ ಶ್ರಮಕ್ಕೆ ಪ್ರತಿಫಲವಾಗಿ ಭೂಮಿ ತಾಯಿಯು ನೀಡಿದ ಕೊಡುಗೆಯೆಂದು ಭಾವಿಸುವುದು ಈ ಆಚರಣೆಯಲ್ಲಿ ವ್ಯಕ್ತವಾಗುತ್ತದೆ.

### ೪.೪.೩.೫ ಅಚ್ಚಕನ್ನೆ

"ಮದುವೆಯಾಗದ ಕನ್ಯೆಯೆಂದು ನಂಬಲಾದ ಈ ದೇವತೆಯು ಸ್ಥಳೀಯ ಹಳ್ಳದಲ್ಲಿ ವಾಸವಾಗಿರುತ್ತಾಳೆ. ಬೇರೆ ಬೇರೆ ಪ್ರದೇಶಗಳಲ್ಲಿಯ ಅಚ್ಚಕನ್ನೆಯರ ನೆಲೆಗಳೆಲ್ಲಾ ಜಲಾಶಯ (ಮಡು)ಗಳೇ ಆಗಿರುವುದರಿಂದ, ಅಚ್ಚಕನ್ನೆ ಬಹುಶಃ ಜಲದೇವತೆಯಾಗಿರಬೇಕು ಇಲ್ಲವೇ ಜಲಸಮಾದಿ ಹೊಂದಿದ ಕನ್ಯೆಯ ನೆನಪಿಗಾಗಿ ಅವಳನ್ನು ದೇವತೆಯೆಂದು ಪೂಜಿಸಿ ತಮ್ಮ ನೆಲೆಯ ಸಂರಕ್ಷಣೆಯ ಭಾರವನ್ನು ಆ ದೇವತೆಗೆ ಒಪ್ಪಿಸಿರಬೇಕು. ಈ ದೇವತೆಯ ಪೂಜೆಯು ಇಡಿಯ ಊರಿಗೆ ಸಂಬಂಧಿಸಿದ್ದಲ್ಲ."[೧೦] ಕೃಷಿಯನ್ನು ಮಾಡಬೇಕಾದರೆ ನೀರು ಬೇಕೇ ಬೇಕು. ಅಲ್ಲದೆ ಮಾನವ ಸೇರಿದಂತೆ ಸಕಲ ಜೀವರಾಶಿಗಳು ಬದುಕಬೇಕಾದರೂ ನೀರು ಅವಶ್ಯವಾಗಿದೆ. ಆದ್ದರಿಂದ ಸಿದ್ದಿಯರು ಜಲದೇವತೆಯನ್ನು ಆರಾಧಿಸುತ್ತಾರೆ. ಜಲದೇವತೆಗೆ ಸರಿಯಾದ ಭಕ್ತಿ ತೋರ್ಪಡಿಸಿದರೆ ತಮ್ಮನ್ನು ಮತ್ತು ತಮ್ಮ ಬೆಳೆಗಳನ್ನು ರಕ್ಷಿಸುತ್ತಾಳೆ ಎನ್ನುವ ನಂಬಿಕೆ ಸಿದ್ದಿಯರಲ್ಲಿದೆ. ಜಲದೇವತೆ ಮುನಿಸಿಕೊಂಡರೆ ಯಾವ ಜೀವಿಯೂ ಬದುಕುವುದಕ್ಕೆ ಸಾಧ್ಯವಿಲ್ಲ ಎನ್ನುವ ಸತ್ಯವನ್ನು ಅರಿತುಕೊಂಡಿದ್ದಾರೆ.

### ೪.೪.೩.೬ ಕಾಪ್ರಿ ಭೂತ

"ಕಾಪ್ರಿ ಜಾತ್ರೆಯು ಗಾವಡೆವಾಡ ಹಳ್ಳಿಯಲ್ಲಿ ನಡೆಯುತ್ತದೆ. ತುಳಸಿ ಹಬ್ಬದ ಮಾರನೆಯ ದಿನ ನಡೆಯುವ ಅಂದರೆ ದ್ವಾದಶಿ ಕಾರ್ತಿಕ ಪೂರ್ಣಿಮೆಯ ಮಾರನೆಯ ದಿನ ನಡೆಯುವ ಜಾತ್ರೆಗೆ ಕುಣಬಿ ಬುಡಕಟ್ಟುಗಳಲ್ಲದೇ ತಾಲೂಕಿನ ಎಲ್ಲರೂ ಸಾವಿರಾರು ಸಂಖ್ಯೆಯಲ್ಲಿ ಸೇರಿರುತ್ತಾರೆ. ಕಾಪ್ರಿ ದೇವತೆಗೆ ಹರಕೆ ಹೊತ್ತವರು ಕಂಬಳಿಗಳನ್ನು ದೇವರಿಗೆ ಅರ್ಪಿಸುತ್ತಾರೆ. ಕಾಪ್ರಿ ದೇವರೆಂದರೆ ಗಾಂಗೋಡಾದ ಪೂರ್ವಜರ ಆತ್ಮಗಳು. ಇವುಗಳು ವರ್ಷಾದ್ಯಂತ ಗಾಂಗೋಡ ಹಳ್ಳಿಗೆ ಸಂಬಂಧಪಟ್ಟ ಕಾಡಿನ ಇಡೀ ಕ್ಷೇತ್ರದ ವ್ಯಾಪ್ತಿಯನ್ನು ಮತ್ತು ಬೆಳೆದ ಪೈರನ್ನು ರಕ್ಷಿಸುತ್ತಿರುತ್ತವೆ."[೧೧] ಈ ಕಾಪ್ರಿ ಭೂತದ ಆಚರಣೆ ಸಿದ್ದಿಯರಲ್ಲಿಯೂ ಪ್ರಮುಖವಾಗಿ ಕಂಡುಬರುತ್ತದೆ. ಸಿದ್ದಿಯರು ಈ ದೇವತೆಯನ್ನು ಕಾಪ್ರಿ ಭೂತನೆಂದು ಮತ್ತು ನಾಸನೆಂದು ಕರೆಯುತ್ತಾರೆ. ಯಾವುದೋ ಕುತಂತ್ರ ಅಥವಾ ಆಕ್ರಮಣಕ್ಕೆ ಒಳಗಾಗಿ ನಾಶವಾದ ವ್ಯಕ್ತಿಯ ಆತ್ಮವನ್ನು 'ನಾಸ' ಎಂದು ಪೂಜಿಸುತ್ತಾರೆ. ನಾಸನಿಗೆ ಅನುಗುಣವಾಗಿ ನಡೆದರೆ ಅವರಿಗೆ ಒಳ್ಳೆಯದು ಮಾಡುತ್ತಾನೆ. ಸರಿಯಾಗಿ ಭಕ್ತಿ ಹೊಂದಿಲ್ಲದವರಿಗೆ ತೊಂದರೆಯನ್ನು ಕೊಡುತ್ತಾನೆ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ. "ಕಾಪ್ರಿ ಎಂದರೆ ಕಾಫಿರ್‌ದಿಂದ ಬಂದಂತಿದೆ. ಕಾಪ್ರಿ ಆಫ್ರಿಕಾದ ಮೂಲ ನಿವಾಸಿ ಪಂಗಡದಲ್ಲಿ ಒಂದಾಗಿದೆ. ಬಹುಶಃ ಆಫ್ರಿಕಾದಿಂದ ವಲಸೆ ಬಂದ ಸಿದ್ದಿಯರ ಮೂಲ ದೇವತೆ ಇದೇ ಆಗಿರಬೇಕು."[೧೨]

ಕೃಷಿಗೆ ಸಂಬಂಧಿಸಿದಂತೆ ಸೂರ್ಯ, ಬಸವಣ್ಣ (ಎತ್ತುಗಳು), ತಮ್ಮ ಕುಲದೈವಗಳು ಕೃಷಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಎನ್ನುವ ನಂಬಿಕೆಯನ್ನು ಹೊಂದಿ ಅವುಗಳನ್ನೂ ಸಹ ಆರಾಧಿಸುತ್ತಾರೆ. ಕೃಷಿಗೆ ಸಂಬಂಧಿಸಿದಂತೆ ಸಿದ್ದಿಯರು ಹತ್ತು ಹಲವಾರು ಆಚರಣೆಗಳನ್ನು ಅನುಸರಿಸುತ್ತಿರುವುದು ತಿಳಿದುಬರುತ್ತದೆ.

ಉತ್ತರಕನ್ನಡ ಜಿಲ್ಲೆಯ ಸಿದ್ದಿಯರು ಹೊಂದಿರುವ ತಾಲೂಕವಾರು ಕೃಷಿ ಜಮೀನು

| ಕ್ರ.ಸಂ. | ತಾಲೂಕು | ಒಣ ಭೂಮಿ (ಎಕರೆಗಳಲ್ಲಿ) | ನೀರಾವರಿ (ಎಕರೆಗಳಲ್ಲಿ) | ಒಟ್ಟು ಕೃಷಿ ಭೂಮಿ (ಎಕರೆಗಳಲ್ಲಿ) |
|---|---|---|---|---|
| ೧ | ಅಂಕೋಲಾ | ೨೯೫.೨೯ | ೯೯.೪೮ | ೩೯೪.೭೭ |
| ೨ | ಹಳಿಯಾಳ | ೧೩೧೪ | ೨೦೫ | ೧೫೧೯ |
| ೩ | ಜೋಯಿಡಾ | ೪೧ | – | ೪೧ |
| ೪ | ಕಾರವಾರ | – | – | – |
| ೫ | ಮುಂಡಗೋಡ | ೨೬೧.೫ | ೬ | ೨೬೭.೫ |
| ೬ | ಶಿರಸಿ | ೧೨೩.೨ | ೨೫ | ೧೪೮.೨ |
| ೭ | ಯಲ್ಲಾಪುರ | ೯೯೨ | ೧೮೯.೬ | ೧೧೮೧.೬ |
|  | ಒಟ್ಟು | ೩೦೨೬.೯೯ | ೫೨೫.೦೮ | ೩೫೫೨.೦೭ |

**೪.೪.೪ ಕುಲದೈವ ಸಂಬಂಧಿ ಆಚರಣೆಗಳು**

ಸಿದ್ದಿಯರ ಮೂರೂ ಧರ್ಮದವರು ತಮ್ಮ ಕುಲಕ್ಕೆ ತಕ್ಕಂತೆ ಹಲವಾರು ದೈವದ ಆಚರಣೆಯನ್ನು ಮಾಡುತ್ತಿದ್ದಾರೆ. ಇವರು ಮೂರೂ ಧರ್ಮಗಳಲ್ಲಿ ಹಂಚಿಹೋಗಿದ್ದರೂ ಕುಲದೈವದ ಆಚರಣೆಯಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಗಳೇನೂ ಕಂಡುಬರುವುದಿಲ್ಲ. ಮೊದಲೇ ತಿಳಿಸಿದಂತೆ ಒಂದೇ ಕುಟುಂಬದಲ್ಲಿ ಮೂರೂ ಧರ್ಮಕ್ಕೆ ಸಂಬಂಧಿಸಿದವರು ವಾಸವಾಗಿರುವುದರಿಂದ ಎಲ್ಲಾ ಧರ್ಮದ ಆಚರಣೆಗಳನ್ನೂ ರೂಡಿಸಿಕೊಂಡು ಆಚರಣೆ ಮಾಡುತ್ತಿದ್ದಾರೆ.

**೪.೪.೪.೧ ಹಿರಿಯರ ಹಬ್ಬ**

ಹಿರಿಯ ಹಬ್ಬವನ್ನು ಮಹಾಲಯದಲ್ಲಿ ಆಚರಿಸಲಾಗುತ್ತದೆ. ಹಿಂದೂಗಳು ತೆಂಗಿನಕಾಯಿಯನ್ನು ಹೊಂದಿದ್ದರೆ, ಮುಸ್ಲಿಂ ಸಿದ್ದಿಯರು ಮತ್ತು ಕ್ರೈಸ್ತ ಸಿದ್ದಿಯರು ಗದ್ದುಗೆಯನ್ನು ನಿರ್ಮಾಣ ಮಾಡಿ ಆಚರಿಸುತ್ತಾರೆ. ಇವರು ತೆಂಗಿನಕಾಯಿಯ ಬದಲು ಕ್ರಮವಾಗಿ ಗದ್ದುಗೆಗೆ ಊದಿನಕಡ್ಡಿ ಮತ್ತು ಶಿಲುಬೆಗೆ ಮೇಣದಬತ್ತಿಯನ್ನು ಹಚ್ಚಿ ಆರಾಧಿಸುತ್ತಾರೆ. ಹಿರಿಯರ ಹಬ್ಬದ ದಿನದಂದು ಮನೆಯವರೆಲ್ಲಾ ಸಡಗರದಿಂದ ಇರುತ್ತಾರೆ.

ಕುಟುಂಬದವರು ಬೇರೆಡೆ ಹೋಗಿದ್ದರೂ, ಈ ಹಬ್ಬದಂದು ಮನೆಗೆ ಬರುತ್ತಾರೆ. ಕುಟುಂಬದವರೆಲ್ಲಾ ಸೇರಿಕೊಂಡು ಆಚರಿಸುತ್ತಾರೆ. ಇದು ಸಮುದಾಯದವರಿಗೆ ಮಹತ್ವದ ಮತ್ತು ಅತ್ಯಂತ ದೊಡ್ಡ ಹಬ್ಬವಾಗಿದೆ. ಅಂದು ಕೋಳಿ ಅಥವಾ ಕುರಿಗಳನ್ನು ಕೊಯ್ದು ಮಾಂಸದ ಊಟ ಮಾಡುತ್ತಾರೆ. ಸಂತೋಷಕ್ಕಾಗಿ ರಾತ್ರಿ ಸಮಯದಲ್ಲಿ ಹಾಡು ಮತ್ತು ಕುಣಿತವನ್ನು ಏರ್ಪಡಿಸುತ್ತಾರೆ.

ಹಿರಿಯರ ಹಬ್ಬದ ಬಗೆಗೆ ಇನ್ನಿತರ ವಿವರಣೆಯನ್ನು ಇದೇ ಅಧ್ಯಾಯದ ದೈವಾರಾಧನೆಯಲ್ಲಿ ವಿವರಿಸಲಾಗಿರುವುದರಿಂದ ಇಲ್ಲಿ ಹೆಚ್ಚಿನ ವಿವರಣೆ ನೀಡುವ ಅವಶ್ಯಕತೆ ಇಲ್ಲವೆಂದು ಭಾವಿಸಿದ್ದೇನೆ.

**೪.೪.೪.೨ ಸಿದ್ದಿ ನಾಸ**

'ಸಿದ್ದಿನಾಸ' ಸಿದ್ದಿಯರ ಪ್ರಮುಖ ದೈವಗಳಲ್ಲೊಂದಾಗಿದೆ. ಈ ಸಿದ್ದಿನಾಸನನ್ನು ಕುರಿತು ಒಂದು ಚಿಕ್ಕ ಕಥೆ ತಿಳಿದುಬರುತ್ತದೆ. "ಜೈನರು ಸಿದ್ದಿ ಬಾಲಕನೊಬ್ಬನನ್ನು ಆಪ್ತನನ್ನಾಗಿ ಮಾಡಿಕೊಂಡು ಬೆಳೆಸಿದರಂತೆ. ಆದರೆ ಅವನು ಕದ್ದು ಮಾಂಸ ತಿನ್ನಲು ಆರಂಭಿಸಿದನಂತೆ. ಇದನ್ನು ಸಹಿಸಲಾರದ ಜೈನರು ಅವನನ್ನು ಜೀವಂತವಾಗಿ ಸಮಾದಿ ಮಾಡಿದರಂತೆ (ಜೈನ ಸಂಪ್ರದಾಯದಂತೆ ಬಹುಶಃ ಸಲ್ಲೇಖನ ವೃತಕ್ಕೆ ಈಡು ಮಾಡಿ, ಅನ್ನ ನೀರು ಕೊಡದೆ ಮುಗಿಸಿರಬಹುದು) ಇದರಿಂದ ಪ್ರಭಾವಿತರಾದ ಸಿದ್ದಿಯರು ಆ ಸಮಾದಿ ಸ್ಥಳದಲ್ಲಿ ಕಲ್ಲು ನೆಟ್ಟು 'ಸಿದ್ದಿನಾಸ'ನೆಂದು ಪೂಜಿಸಿದರು."[೧೩] ಈ ಸಿದ್ದಿನಾಸನ ಜಾತ್ರೆಯನ್ನು ವರ್ಷಕ್ಕೊಮ್ಮೆ ಆಚರಿಸಲಾಗುತ್ತದೆ. ಸಿದ್ದಿನಾಸನ ಆರಾಧನೆಗಾಗಿ ಮನೆಯಲ್ಲಿ ಒಂದು ಸುಲಿದ ತೆಂಗಿನಕಾಯಿಯನ್ನು ಪೂಜಿಸುತ್ತಾರೆ. ಈ ಸಿದ್ದಿನಾಸನಲ್ಲಿ ಮರಣಹೊಂದಿದ ಮನೆಯ ಹಿರಿಯರು ಬಂದು ಅದರಲ್ಲಿ ನೆಲೆಸಿರುತ್ತಾರೆ ಎನ್ನುವ ನಂಬಿಕೆ ಇದೆ.

ಸಿದ್ದಿನಾಸನನ್ನು ಹಿಂದೂ ಸಿದ್ದಿಯರು ಪ್ರಮುಖವಾಗಿ ಆರಾಧಿಸುತ್ತಾರೆ. ಉಳಿದಂತೆ ಮುಸ್ಲಿಂ ಮತ್ತು ಕ್ರೈಸ್ತ ಸಮುದಾಯದವರು ಈ ದೇವತೆಯನ್ನು ಆರಾಧಿಸಿದರೂ ಅಷ್ಟೊಂದು ಮಹತ್ವವನ್ನು ಕೊಡುವುದಿಲ್ಲ. ಒಂದೇ ಮನೆಯಲ್ಲಿ ಮೂರೂ ಧರ್ಮಕ್ಕೆ ಸಂಬಂಧಿಸಿದವರು ಕಂಡುಬರುವುದರಿಂದ ಎಲ್ಲಾ ಹಬ್ಬಗಳನ್ನು ಒಟ್ಟಾಗಿ ಸೇರಿ ಆಚರಿಸುವುದು ವಿಶೇಷ. ಉಳಿದಂತೆ ಹಿಂದೂ ಧರ್ಮದವರು ಶಿವರಾತ್ರಿ, ನಾಗರ ಪಂಚಮಿ, ಗಣೇಶ ಚತುರ್ಥಿ, ಮಹಾನವಮಿ, ದೀಪಾವಳಿ, ಯುಗಾದಿ, ಸಂಕ್ರಾಂತಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಮುಸ್ಲಿಂ ಸಿದ್ದಿಯರು ಈದ್-ಮಿಲಾದ್, ರಂಜಾನ್, ಮೊಹರಂ ಹಬ್ಬಗಳನ್ನು ಮಾಡುತ್ತಾರೆ. ಕ್ರೈಸ್ತ ಸಿದ್ದಿಯರು ಗುಡ್‌ಫ್ರೈಡೆ, ಕ್ರಿಸ್‌ಮಸ್ ಹಬ್ಬಗಳನ್ನು ಆಚರಿಸುತ್ತಾರೆ.

**೪.೪.೫ ಇತರೆ ಆಚರಣೆಗಳು**

### ೪.೪.೫.೧ ಹುಲಿ ಪೂಜೆ

ಆದಿವಾಸಿಗಳಾದ ಸಿದ್ದಿಯರು ಹುಲಿಯನ್ನು ಆರಾಧಿಸುತ್ತಾರೆ. ಇದನ್ನು ಪೂಜ್ಯ ಭಾವನೆಯಿಂದ ಕಾಣುತ್ತಾರೆ. ಉತ್ತರಕನ್ನಡ ಜಿಲ್ಲೆಯ ಒಕ್ಕಲಿಗ ಸಮುದಾಯಗಳಲ್ಲಿ ಕಂಡುಬರುವ ಈ ಆಚರಣೆಯು ಸಿದ್ದಿಯರಲ್ಲಿಯೂ ಕಂಡುಬರುತ್ತದೆ. ಹುಲಿಯನ್ನು ಕೃಷಿ ರಕ್ಷಣೆಯ ದೇವತೆ ಎಂದು ಆರಾಧಿಸಲಾಗುತ್ತಿದೆ. ಸಮುದಾಯದವರ ದನಕರುಗಳನ್ನು ಹುಲಿಯು ತಿಂದರೂ ಸಹ ಅದನ್ನು ಪೂಜ್ಯ ಭಾವನೆಯಿಂದ ಕಾಣುತ್ತಾರೆ. ಅಲ್ಲದೆ ಇದು ಹಸುಗಳ ರಕ್ಷಕನೆಂದು ಭಾವಿಸುತ್ತಾರೆ. ದನಕರುಗಳಿಗೆ ರೋಗ ಬಂದರೆ ಹುಲಿ ದೇವರನ್ನು ಆರಾಧಿಸುತ್ತಾರೆ. ಆಗ ರೋಗ ನಿವಾರಣೆಯಾಗುತ್ತದೆ ಎನ್ನುವ ನಂಬಿಕೆಯಿದೆ. ಇದನ್ನು ಆರಾಧಿಸುವುದರಿಂದ ಕಾಡಿನಲ್ಲಿ ವಾಸಿಸುವ ತಮಗೆ ಯಾವ ತೊಂದರೆ ಕೊಡುವುದಿಲ್ಲ ಎಂಬ ಪರಿಕಲ್ಪನೆ ಇವರಲ್ಲಿದೆ.

### ೪.೪.೫.೨ ಬೇಟೆ ನಾಸ

ಅರಣ್ಯವೇ ಇವರ ಜಗತ್ತು. ಕಾಡುವಾಸಿಗಳಾದ ಸಿದ್ದಿಯರು ಬೇಟೆಯಾಡುವುದರಲ್ಲಿ ನಿಸ್ಸೀಮರು. ಬೇಟೆಗೆ ಹೊರಡುವಾಗ ಸಿದ್ದಿಯರೆಲ್ಲರೂ ಸೇರಿ ಹೆಚ್ಚಿನ ಬೇಟೆಗಳು ಸಿಗಲೆಂದು ಊರಿನ ಹೊರಗೆ ಒಂದು ಕಲ್ಲನ್ನು ಇಟ್ಟು ಬೇಡಿಕೊಳ್ಳುತ್ತಾರೆ. ಬೇಟೆಯ ಸಫಲತೆಗಾಗಿ ಪೂಜಿಸುವ ದೇವರೇ 'ಬೇಟೆ ನಾಸ'. ಬೇಟೆಯು ಮುಗಿದ ನಂತರ ದಕ್ಕಿದ ಪ್ರಾಣಿಗಳನ್ನು ತಂದು ಪೂಜಿಸುತ್ತಾರೆ. ನಂತರ ದಕ್ಕಿದ ಬೇಟೆಯನ್ನು ಹಂಚಿಕೊಳ್ಳುತ್ತಾರೆ. "ಇದು ಒಂದು ರೀತಿಯಲ್ಲಿ ಪ್ರಕೃತಿಯಲ್ಲಿನ ಚೇತನಗಳನ್ನು ಒಲಿಸಿಕೊಳ್ಳುವ ಪೂಜೆಯೂ ಹೌದು."[೧೪]

### ೪.೪.೫.೩ ಡಬ್ಬಿ ಬಾರಿಸುವುದು

ಸಿದ್ದಿಯರು ಬಡತನದ ಬೇಗೆಯಲ್ಲಿ ನರಳುತ್ತಿದ್ದಾರೆ. ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿಯಲ್ಲಿದ್ದಾರೆ. ಮನೆಯಲ್ಲಿ ತಿನ್ನಲು, ಉಣ್ಣಲು ಏನೂ ಇಲ್ಲದಿದ್ದಾಗ ಮನೆಗೆ ಯಾರಾದರು ನೆಂಟರು ಬರುವುದನ್ನು ದೂರದಿಂದಲೇ ನೋಡಿದರೆ ಒಂದು ಖಾಲಿ ಡಬ್ಬಿಯನ್ನು ಡಬಡಬನೆ ಬಡಿಯುತ್ತಾರೆ. ಅಂದರೆ ಇದರ ಅರ್ಥ ನಿಮ್ಮನ್ನು ಅತಿಥಿ ಸತ್ಕಾರ ಮಾಡಲು ಸಾಧ್ಯವಾಗುವುದಿಲ್ಲ. ಮನೆಯಲ್ಲಿ ಏನೂ ಇಲ್ಲ ಎಂದು ಬಾಯಿಬಿಟ್ಟು ಹೇಳುವುದರ ಬದಲು ಡಬ್ಬಿಯನ್ನು ಬಡಿಯುತ್ತಾರೆ. ಮನೆಯ ಕಡೆಗೆ ಬರುತ್ತಿರುವ ನೆಂಟರು ಇದನ್ನು ಅರ್ಥ ಮಾಡಿಕೊಂಡು ವಾಪಾಸಾಗುತ್ತಾರೆ. ಅವಶ್ಯವಾಗಿ ಭೇಟಿ ಮಾಡಲೇಬೇಕಾದ ಅನಿವಾರ್ಯತೆ ಇದ್ದರೆ ಹೋಗಿ ವಿಷಯದ ಬಗೆಗೆ ಮಾತನಾಡಿಕೊಂಡು ಬರಿಗೈಯಲ್ಲಿ ವಾಪಾಸಾಗಬೇಕಾಗುತ್ತದೆ. ಇಂತಹ ಪದ್ಧತಿ ಇತರ ಸಮುದಾಯಗಳಲ್ಲಿ ಕಂಡುಬರಲಿಕ್ಕಿಲ್ಲ. ಆದರೆ ಕೆಲವು ಕಡೆ ಸಿದ್ದಿಯರಲ್ಲಿ ಈ ರೀತಿಯಾದ ಆಚರಣೆಯಿದೆ. ಆದರೆ ಇಂದು ಈ ಪದ್ಧತಿ

ಮಾಯವಾಗಿದೆ. ಬದಲಾಗಿ ಮನೆಯಲ್ಲಿ ಏನಾದರು ಇದ್ದರೆ ಚಹಾ ಅಥವಾ ತಿಂಡಿಯನ್ನು ಕೊಡುತ್ತಾರೆ. ಇಲ್ಲಿದಿದ್ದರೆ ಹಾಗೆಯೇ ಕಳುಹಿಸಿಕೊಡುತ್ತಾರೆ. ಆದರೆ ಇತ್ತೀಚೆಗೆ ಡಪ್ಪಿ ಬಡಿಯುವುದು ಅಥವಾ ಬಾರಿಸುವುದು ಕಂಡುಬರುವುದಿಲ್ಲ.

**೪.೫ ಸಾಹಿತ್ಯ ಮತ್ತು ಕಲೆ**

ಪ್ರತಿಯೊಂದು ಬುಡಕಟ್ಟು ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಸಾಹಿತ್ಯ, ಕಲೆ ಮತ್ತು ಸಂಗೀತವನ್ನು ಹೊಂದಿರುತ್ತವೆ. ಸಿದ್ದಿಯರ ಸಾಹಿತ್ಯ ಮತ್ತು ಕಲೆಗಳು ಶ್ರೀಮಂತವಾಗಿವೆ. ಸಿದ್ದಿಯರಲ್ಲಿ ಮೂರು ಧರ್ಮಗಳಿರುವಂತೆ ಅವರಲ್ಲಿ ಮೂರು ಪ್ರಮುಖ ಭಾಷೆಗಳು ಕಂಡುಬರುತ್ತವೆ. ಅವುಗಳೆಂದರೆ ಕೊಂಕಣಿ, ಮರಾಠಿ ಮತ್ತು ಕನ್ನಡ. ಇವರನ್ನು ಗುಲಾಮರನ್ನಾಗಿ ಗೋವಾಕ್ಕೆ ತಂದಾಗ ಸ್ಥಳೀಯ ಭಾಷೆಯನ್ನು ಅಳವಡಿಸಿಕೊಳ್ಳುವುದು ಅನಿವಾರ್ಯವಾಯಿತು. ಪರಿಣಾಮವಾಗಿ ಕೊಂಕಣಿಯನ್ನು ತಮ್ಮ ಮುಖ್ಯ ಭಾಷೆಯನ್ನಾಗಿ ರೂಡಿಸಿಕೊಂಡರು. ತದನಂತರ ಪರಿಸ್ಥಿತಿಗಳಿಗನುಗುಣವಾಗಿ ಕೊಂಕಣಿ ಮರಾಠಿ ಕನ್ನಡ ಮಿಶ್ರಿತ ಭಾಷೆಯೊಂದನ್ನು ರೂಡಿಸಿಕೊಂಡರು. ಅದನ್ನು ಸಿದ್ದಿ ಭಾಷೆ ಎಂದು ಕರೆಯಲಾಗುತ್ತದೆ. ಆದರೆ ಈ ಭಾಷೆಗೆ ಲಿಪಿ ಇಲ್ಲ. ಲಿಪಿ ಇಲ್ಲದ ಈ ಉಪ ಭಾಷೆ ಹೊಸ ಭಾಷಾ ಸಂಸ್ಕೃತಿಯನ್ನು ಹುಟ್ಟುಹಾಕುವ ಶಕ್ತಿಯನ್ನು ಹೊಂದಿಲ್ಲ. "ಇದಕ್ಕೆ ಸಾಂಸ್ಕೃತಿಕವಾದ ಕಾರಣಗಳೂ ಇವೆ. ಲಿಪಿ ಇಲ್ಲದಿರುವುದು ಒಂದು ಕಾರಣವಾದರೆ, ವ್ಯವಹಾರ ಭಾಷೆಯಾಗಿ ಕನ್ನಡ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿರುವುದು ಇನ್ನೊಂದು ಕಾರಣ. ಇಂತಹ ಪರಿಸ್ಥಿತಿಯಲ್ಲಿ ಈ ಎಲ್ಲಾ ಭಾಷೆಗಳ ರಸಾಯನ ಸೃಷ್ಟಿಯಾಗಿ, ಕಾಣಿಸಿಕೊಂಡಿರುವ ಈ ಭಾಷೆಯ ಭವಿಷ್ಯದ ಬಗ್ಗೆ ಏನೂ ಹೇಳಲಿಕ್ಕಾಗದು."[೧೫]

ಸಿದ್ದಿ ಸಮುದಾಯದ ಹೆಚ್ಚಿನವರು ಅನಕ್ಷರಸ್ಥರಾಗಿದ್ದಾರೆ. ಆದರೂ ಇವರ ಸಾಹಿತ್ಯ ಉತ್ಕೃಷ್ಟವಾಗಿದೆ. ಇವರ ಜನಪದ ಸಾಹಿತ್ಯ ಸಾಮಾಜಿಕ ಜೀವನದ ಅನಾವರಣವನ್ನು ಮಾಡುತ್ತದೆ. ಭಾರತೀಯ ಸಮಾಜದ ಹಿಂದೂ ಸಾಂಸ್ಕೃತಿಕ ಸಾಹಿತ್ಯವು ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. ಹೀಗಿರುವಾಗ ತಮ್ಮ ಮೂಲ ಸಂಸ್ಕೃತಿ ಮತ್ತು ಭಾಷೆಯನ್ನು ಕಳೆದುಕೊಂಡಂತಹ ಸಿದ್ದಿಯರ ಸಾಹಿತ್ಯ ಇಂದು ಅಂಬೆಗಾಲಿಡುತ್ತಿರುವ ಚಿಕ್ಕ ಮಗುವಿನಂತಿದೆ. ಆದರೆ ಸ್ವತಂತ್ರವಾಗಿ ತಮ್ಮದೇ ಆದ ಸಾಹಿತ್ಯವನ್ನು ಹೊಂದುತ್ತಿದ್ದಾರೆ. ಅನೇಕ ಕಥೆಗಳು, ಹಾಡುಗಳು ಜೀವನ ಮೌಲ್ಯವನ್ನು ಎತ್ತಿ ತೋರಿಸುವ ಗಾದೆಗಳು ಮತ್ತು ಒಗಟುಗಳಿವೆ. ಇವರ ಸಾಹಿತ್ಯದಲ್ಲಿ ಅವರವರ ಧರ್ಮ ಪ್ರಮುಖವಾಗಿ ಪ್ರಭಾವ ಬೀರಿರುವುದು ತಿಳಿಯುತ್ತದೆ. ಇವರ ಮೌಖಿಕ ಸಾಹಿತ್ಯದಲ್ಲಿ ತಮ್ಮ ಸಮುದಾಯದ ವೇದನೆಗಳನ್ನು ವ್ಯಕ್ತಪಡಿಸುತ್ತಾರೆ. ಅಂದರೆ ಸಮುದಾಯದ ಗುಲಾಮಗಿರಿ ಅಥವಾ ದಾಸ್ಯ, ಅದರಿಂದ ಅನುಭವಿಸಿದ ಕಷ್ಟ, ದಾಸ್ಯದ

ಮುಕ್ತಿಯನ್ನು ಹೊಂದಿ ಸ್ವತಂತ್ರ್ಯವನ್ನು ಪಡೆಯುವ ಮತ್ತು ಸ್ವತಂತ್ರ್ಯ ಪಡೆದ ಅಭಿಲಾಷೆಯನ್ನು ಇವರ ಸಾಹಿತ್ಯ ಒಳಗೊಂಡಿದೆ.

ಭಾರತೀಯ ಸಿದ್ದಿಯರು ನಿಗ್ರೋ ಸಂತತಿಯವರು. ನಿಗ್ರೋ ಸಂತತಿಯವರು ಪ್ರಪಂಚದ ಹಲವಾರು ರಾಷ್ಟ್ರಗಳಲ್ಲಿ ದಾಸ್ಯಕ್ಕೆ ಸಿಲುಕಿರುವುದು ತಿಳಿದುಬರುತ್ತದೆ. ವಿಶ್ವದ ಹಿರಿಯಣ್ಣನೆಂದು ಕರೆಯಿಸಿಕೊಂಡಿರುವ ಅಮೇರಿಕಾ ದೇಶದಲ್ಲಿಯೂ ಸಹ ನಿಗ್ರೋಗಳು ಹಲವಾರು ಕಷ್ಟಗಳನ್ನು ಅನುಭವಿಸಿದ್ದಾರೆ. ಅಲ್ಲಿಯೂ ಸಹ ಇವರ ಸಾಹಿತ್ಯ ಇತ್ತೀಚೆಗೆ ಅಂದರೆ ಪ್ರಥಮ ಜಾಗತಿಕ ಮಹಾಯುದ್ಧದ ನಂತರ ಪ್ರಾರಂಭವಾಗಿರುವುದು ತಿಳಿದುಬರುತ್ತದೆ. "ನಿಗ್ರೋ ಸಾಹಿತ್ಯದ ಈ ಯುಗಗಳನ್ನು ರಿಚರ್ಡ್ .ಏ. ಲಾಂಗ್ ಮತ್ತು ಯುಜಿನಿಯಾ .ವಿ. ಕಾಲಿಯರ್ ಅವರು ಈ ರೀತಿ ವರ್ಗೀಕರಿಸುತ್ತಾರೆ.

೧. ಮೊದಲ ಕಾಲ : ಸಿವಿಲ್ ಯುದ್ಧದ ವರೆಗಿನ ಕಾಲ – ಅಂದರೆ ಗುಲಾಮ ಸಂಸ್ಕೃತಿಯ ಅಭಿವ್ಯಕ್ತಿಯ ಕಾಲ. ಯಾತನೆ, ವೇದನೆ ಹಾಗೂ ಸ್ವಾತಂತ್ರ್ಯದ ದಾರಿ ಹುಡುಕುವ ಕಾಲ.

೨. ಎರಡನೇಯ ಕಾಲ : ಸಿವಿಲ್ ಯುದ್ಧದಿಂದ ಪ್ರಥಮ ಜಾಗತಿಕ ಯುದ್ಧದ ಕಾಲ. ಯುದ್ಧದಲ್ಲಿ ಹೋರಾಡಿದ ವೀರರ ಪ್ರಥಮತ : ಸ್ವತಂತ್ರ ನಾಗರಿಕತೆಯನ್ನು ಅನುಭವಿಸಿದ ಕಾಲ.

೩. ಮೂರನೇಯ ಕಾಲ : ಪ್ರಥಮ ಜಾಗತಿಕ ಯುದ್ಧದಿಂದ ದ್ವಿತೀಯ ಮಹಾಯುದ್ಧದ ವರೆಗಿನ ಕಾಲ. ಆಫ್ರೋ ಅಮೇರಿಕನ್ ಸಾಹಿತ್ಯ ಕಲಾತ್ಮಕವಾಗಿ ಅರಳಿದ ಕಾಲ. ಹ್ಯಾರ್ಲೆಮ್ ಉತ್ಕ್ರಾಂತಿ. ಅದರ ಪ್ರಬಲ ಪರಿಣಾಮ.

೪. ನಾಲ್ಕನೇಯ ಕಾಲ : ನಲವತ್ತರ ದಶಕದಿಂದ ಮುಂದುವರೆದ ಪ್ರತಿಭಟನೆಯಿಂದ ಪ್ರಾರಂಭವಾಗಿ Black Arts ಚಳುವಳಿ. ಹೊಸ ಹೊಸ ರೂಪಗಳು, ಹೊಸ ಶೈಲಿ, ಆತ್ಮಾವಿಷ್ಕಾರಣ.

ಕೊನೆಯೆರಡು ಕಾಲಗಳ ಬಗ್ಗೆ ಅವರು ಹೀಗೆ ಬರೆಯುತ್ತಾರೆ.

Fiction also became increasingly imporatant as an art form, as the image of the blackman changed from Chersnutt's conniving absequious uncle Julius.... to the very strong, very black hero of the sixties. Peotry probed the innermost recess of blackness, flowering most profusely in the Harten Renaissance of the twenties and then again the black

Renainssance of the sixties. In all genres the thrust has been increasingly towards theoracular rather than the simplistic mode as writers have discovered the materials of art in the varied Afro-American Life."[೧೬]

ಭಾರತೀಯ ಸಿದ್ದಿಯರು ಇದಕ್ಕೆ ಹೊರತಾಗಿಲ್ಲ. ಗುಲಾಮಗಿರಿಯಿಂದ ತಪ್ಪಿಸಿಕೊಂಡು ಬಂದು ಅರಣ್ಯವನ್ನು ಪ್ರವೇಶಿಸುವವರೆಗೆ ಇವರಲ್ಲಿ ದಾಸ್ಯತನವೊಂದು ಬಿಟ್ಟು ಬೇರೇನನ್ನೂ ಊಹಿಸಿಕೊಳ್ಳಲು ಸಾಧ್ಯವಿಲ್ಲದಂತಹ ಪರಿಸ್ಥಿತಿಯಲ್ಲಿದ್ದರು. ಆದರೆ ಇತ್ತೀಚೆಗೆ ತಮ್ಮದೇ ಆದ ಸಾಹಿತ್ಯವನ್ನು ರೂಡಿಸಿಕೊಳ್ಳುತ್ತಿದ್ದಾರೆ.

ಸಿದ್ದಿಯರು ಅನಕ್ಷರಸ್ಥರಾಗಿರುವುದರಿಂದ ಇನ್ನೂ ಲಿಖಿತವಾದ ಸಾಹಿತ್ಯದ ಸೃಷ್ಠಿಯಾಗಿಲ್ಲ. ಸಮುದಾಯದ ಮಕ್ಕಳು ಇತ್ತೀಚೆಗೆ ಶಾಲೆಗೆ ಹೋಗುತ್ತಿರುವುದರಿಂದ ಇನ್ನು ಮುಂದೆ ಸಾಹಿತ್ಯದ ಲಿಖಿತತೆ ಸಾಧ್ಯವಾಗಬಹುದಾಗಿದೆ. ಇವರ ಸಾಹಿತ್ಯವು ಮುಖ್ಯವಾಗಿ ದೊಡ್ಡದು ಚಿಕ್ಕದನ್ನು ಆಳುವ ರೀತಿಯಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ ಮನುಷ್ಯನ ಸಿಟ್ಟು, ಗೌಡನ ಆಳ್ತನ, ನಿಸರ್ಗ, ಪ್ರಾಣಿ ಪಕ್ಷಿಗಳಿಗೆ ಸಂಬಂಧಿಸಿದಂತೆ ಹಲವಾರು ಸಾಹಿತ್ಯಗಳು ವ್ಯಕ್ತವಾಗುತ್ತವೆ. ಸಾಹಿತ್ಯದ ಜೊತೆಗೆ ಸಂಗೀತವೂ ಸಹ ಇವರಲ್ಲಿ ಮನೆ ಮಾಡಿದೆ.

ಸಿದ್ದಿಯರ ಸಾಹಿತ್ಯದಂತೆ ಕಲೆಯೂ ಸಹ ಉತ್ತಮವಾಗಿದೆ. ಸಮುದಾಯದವರು ಹಲವಾರು ಕಲೆಗಳನ್ನು ಮೈಗೂಡಿಸಿಕೊಂಡಿದ್ದಾರೆ. ಸಿದ್ದಿಯರ ಕಲೆಗೆ ಸಂಬಂಧಿಸಿದಂತೆ ನೋಡುವುದಾದರೆ ಆರಾಧನೆಯು ಕ್ರಿಯೆಗಳಾಗಿ ರೂಪಾಂತರಗೊಂಡಂತಹ ಧಾರ್ಮಿಕ ವ್ಯವಸ್ಥೆಯಾಗಿದೆ. ಸಮುದಾಯದ ಕಲೆಗಳ ಹಿಂದೆ ಅದರ ಹುಟ್ಟು, ರಚನೆ, ಸಾಮಾಜಿಕತೆ, ಧಾರ್ಮಿಕತೆಯ ಸಂಸ್ಕೃತಿ ಅಡಕವಾಗಿರುತ್ತದೆ. ಸಿದ್ದಿಯರ ಕಲೆಗಳನ್ನು ಈ ಕೆಳಗಿನಂತೆ ತಿಳಿಯಬಹುದು.

**೪.೫.೧ ಡಮಾಮಿ ಕುಣಿತ**

ಸಿದ್ದಿಯರ ಸ್ವಂತಿಕೆಯನ್ನು ಪ್ರದರ್ಶಿಸುವ ಕಲೆಯೆಂದರೆ ಡಮಾಮಿ ಕುಣಿತ. ಆಫ್ರಿಕಾ ಮೂಲದಿಂದ ಬಲವಂತವಾಗಿ ಬಂದು ಉತ್ತರಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಸಿದ್ದಿ ಸಮುದಾಯದವರಲ್ಲಿ ಮಾತ್ರ ಈ ಕುಣಿತ ಕಂಡುಬರುತ್ತದೆ. ಇದನ್ನು ಸಮುದಾಯದವರು 'ನವರಾತ್ರಿ ಕಲೆ'ಯೆಂದು ತಿಳಿಸುತ್ತಾರೆ. ಈ ಕುಣಿತವನ್ನು ಸಂತೋಷದ ಸಂದರ್ಭಗಳಲ್ಲಿ ಪ್ರದರ್ಶಿಸುತ್ತಾರೆ. ಅದರಲ್ಲಿಯೂ ಮುಖ್ಯವಾಗಿ ಹಿರಿಯರ ಹಬ್ಬಗಳಲ್ಲಿ ಪ್ರದರ್ಶಿಸುತ್ತಾರೆ. ಅಲ್ಲದೆ ವಿವಾಹ, ನಾಮಕರಣ, ಪ್ರಮುಖ ಹಬ್ಬಗಳಲ್ಲಿ ಕುಣಿಯುವ ಸಂಪ್ರದಾಯವಿದೆ. ಡಮಾಮಿ ಎನ್ನುವ ವಾದ್ಯವನ್ನು ಬಾರಿಸುತ್ತಾ ಅದರ ತಾಳಕ್ಕೆ ತಕ್ಕಂತೆ ಕುಣಿಯುವ ಕುಣಿತವನ್ನು 'ಡಮಾಮಿ ಕುಣಿತ' ಎಂದು ಕರೆಯಲಾಗುತ್ತದೆ. "ಈ ಡಮಾಮಿ ಎಂಬ ವಾದ್ಯವು ದೊಡ್ಡ

ಡೊಳ್ಳಿನ ಆಕಾರದಲ್ಲಿ ಇದ್ದು ಇದನ್ನು ಪೀಪಾಯಿಯ ಆಕಾರದಲ್ಲಿ ಮರದ 'ಕಲಶ'ದಿಂದ ಮಾಡಿರುತ್ತಾರೆ. ಡಮಾಮಿಯ ಎಡಭಾಗಕ್ಕೆ ಹದಮಾಡಿದ ಆಡಿನ ಚರ್ಮವನ್ನೂ, ಬಲಬಾಗಕ್ಕೆ ಕುರಿಯ ಚರ್ಮವನ್ನೂ ಬಿಗಿದು ಬಾರಿನಿಂದ ಎಳೆದು ಕಟ್ಟುತ್ತಾರೆ. ಡಮಾಮಿ ವಾದ್ಯಕ್ಕೆ ದೈವಶಕ್ತಿ ಇದೆ ಎಂದು ಸಿದ್ದಿಗಳಲ್ಲಿ ನಂಬಿಕೆ."[೧೭] ಈ ವಾದ್ಯವನ್ನು ಶಿವನೇ ತಮ್ಮ ಸಮುದಾಯಕ್ಕೆ ನೀಡಿದನೆಂಬ ನಂಬಿಕೆಯಿದೆ. ಮನುಕುಲದ ಉದ್ಧಾರ ಮಾಡಬೇಕಾದರೆ ಶಿವನು ಈ ವಾದ್ಯವನ್ನು ಸಿದ್ದಿ ಪುರುಷನಿಗೆ ನೀಡಿದ ಎನ್ನುವ ಪ್ರತೀತಿ ಇದೆ.

ಸಿದ್ದಿಯರು ಈ ಕುಣಿತವನ್ನು ಪ್ರಾರಂಭಿಸುವ ಮುನ್ನ ದೇವರಿಗೆ ಪೂಜೆ ಸಲ್ಲಿಸಿ, ಪ್ರಾರ್ಥನೆಯನ್ನು ಮಾಡಿ ಕುಣಿತವನ್ನು ಆರಂಭಿಸುತ್ತಾರೆ. ಈ ಕುಣಿತವನ್ನು ಪ್ರಾರಂಭಿಸುವಾಗ ವಿಶೇಷವಾದ ವೇಷಭೂಷಣಗಳಾಗಲಿ, ಅಲಂಕಾರಗಳಾಗಲಿ ಇರುವುದಿಲ್ಲ. ಸಿದ್ದಿಯರ ಒಬ್ಬ ಪುರುಷ ಡಮಾಮಿಯನ್ನು ಬಡಿಯುವಾಗ ಇಬ್ಬರು ಮಹಿಳೆಯರು ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ಕುಣಿಯುವವರು "ನವಿಲುಗರಿ ಮತ್ತು ತೆಂಗಿನಕಾಯಿ ಬುರುಡೆ ಹಿಡಿದು ಕುಣಿಯುತ್ತಾರೆ. ನವಿಲುಗರಿ ನಮ್ಮ ಕೊಡುಗೆಯಾದರೂ ತೆಂಗಿನಕಾಯಿ ಬುರುಡೆಯನ್ನು ಅಲ್ಲಾಡಿಸುತ್ತಾ ಕುಣಿಯುವುದು ಸಿದ್ದಿಯರ ಸ್ವಂತ ಕೊಡುಗೆ."[೧೮] ತೆಂಗಿನಕಾಯಿ ಬುರುಡೆಯನ್ನು 'ಮುಚಾಕೆ' ಎಂದು ಕರೆಯಲಾಗುತ್ತದೆ. ತಾಳಕ್ಕೆ ತಕ್ಕಂತೆ ಕುಣಿಯುವಾಗ ದೇವರ ಭಕ್ತಿಗೀತೆಗಳನ್ನು, ಪ್ರಾರ್ಥನೆ, ನಿಸರ್ಗ ಮತ್ತು ಸಮೃದ್ಧಿಯ ಗೀತೆಗಳನ್ನು ಹಾಡುತ್ತಾ ಕುಣಿಯುತ್ತಾರೆ.

"ಉದಾ:

ಬರಬರ ಗಾಳಿಯೇ..... ಹುಡು ಹುಡು ಮಳಿಯೇ,
ಭೂಮಿಮ್ಯಾಲೆ ಬೀಳ್ ಮಳಿಯೇ......... ಏ ಮಳಿಯೇ,
ಭೂಮಿಮ್ಯಾಲೆ ಬೀಳ್ ಮಳಿಯೇ ॥
ಸುರು ಸುರು ಮಳಿಯೇ..... ದಗ ದಗ ಮಳಿಯೇ,
ಬಡತನ ಬಂತು ಮಳಿಯೇ......... ಏ ಮಳಿಯೇ,
ಭೂಮಿಮ್ಯಾಲೆ ಬೀಳ್ ಮಳಿಯೇ ॥"[೧೯]

ಹೀಗೆ ಹಾಡು ಹೇಳುತ್ತಾ ಒಬ್ಬರು ಕುಣಿಯುವಾಗ ಮತ್ತೊಬ್ಬರು ವಿಶ್ರಾಂತಿಯನ್ನು ಪಡೆಯುತ್ತಾರೆ. ಈ ಕುಣಿತವನ್ನು ಮಾಡುವಾಗ ಕುಣಿಯುವ ಕಲಾವಿದರಿಗೆ ಮೈಮೇಲೆ ದೇವರು ಬರುವುದುಂಟು. ಆ ಸಮಯದಲ್ಲಿ ದೇವರ ಹೇಳಿಕೆಯನ್ನು ಪಡೆಯುತ್ತಾರೆ. ಸಮುದಾಯಕ್ಕೆ ಸಂಬಂಧಿಸಿದಂತೆ ಮತ್ತು ವೈಯಕ್ತಿಕ ಬದುಕಿಗೆ ಸಂಬಂಧಿಸಿದಂತೆ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕೇಳುತ್ತಾರೆ.

ಇತ್ತೀಚೆಗೆ ಈ ಕುಣಿತವನ್ನು ಹೆಂಗಸರು ಮತ್ತು ಗಂಡಸರು ಸೇರಿ ಕುಣಿಯುವುದುಂಟು. ಅಲ್ಲದೆ ಕೇವಲ ಗಂಡಸರು ಮಾತ್ರ ಕುಣಿಯುವುದೂ ಸಹ ಕಂಡುಬರುತ್ತಿದೆ. ಈ ಕುಣಿತವು ಸಮುದಾಯದ ಮನೋರಂಜನೆಯೂ ಆಗಿದೆ. ಆದರೆ ಇಂದು ಆಧುನಿಕ ಮನೋರಂಜನೆಯ ಸಾಧನಗಳಾದ ಟೆಲಿವಿಷನ್ ಮತ್ತು ಟೇಪ್‌ರೆಕಾರ್ಡರ್ ಬಂದ ಮೇಲೆ ಡಮಾಮಿ ಕುಣಿತ ಕಡಿಮೆಯಾಗಿದೆ ಎಂದು ಹಳಿಯಾಳ ತಾಲೂಕಿನ ಭಾಗವತಿ ಗ್ರಾಮದ ಉಮರ್‌ಸಾಬ್ ಸಿದ್ದಿಯವರು ಆತಂಕ ವ್ಯಕ್ತಪಡಿಸುತ್ತಾರೆ.

**೪.೫.೨ ಪುಗಡಿ ಕುಣಿತ**

ಉತ್ತರಕನ್ನಡ ಜಿಲ್ಲೆಯ ಮೀನುಗಾರ ಮತ್ತು ಗೌಳಿಗರಲ್ಲಿ ಕಂಡುಬರುವ ಕುಣಿತವನ್ನು ಸಿದ್ದಿಯರೂ ಸಹ ಕುಣಿಯುತ್ತಾರೆ. ಈ ಕುಣಿತ ಮೂಲತಃ ಸಿದ್ದಿಯರದ್ದಲ್ಲದಿದ್ದರೂ ಸಹ ಇದನ್ನು ಪ್ರಮುಖವಾಗಿ ಕರಗತಮಾಡಿಕೊಂಡಿದ್ದಾರೆ. ಈ ಕುಣಿತ "ಮರಾಠಿಯ ಫೂಂಕಣೇ (ಊದುವಿಕೆ)ಯಿಂದ 'ಪುಗಡಿ'ಪದ ರೂಪಗೊಂಡಿರಬೇಕು."[೨೦] ಇದು "ಪುಗು (ಪ್ರವೇಶಿಸು) ಪುಗಲಿ > ಪುಗಳಿ > ಪುಗಡಿ ಎಂದರೆ ಬರಿದಾದೆಡೆಯಲ್ಲಿ ಸಿರಿಸಂಪತ್ತು ಪ್ರವೇಶಿಸಲಿ ಎಂಬ ಧ್ವನ್ಯಾರ್ಥವನ್ನು ಈ ಕುಣಿತದ ಹೆಸರು ಸೂಚಿಸುವಂತಿದೆ."[೨೧] ಈ ಕುಣಿತವನ್ನು ಗಣೇಶನ ಚೌತಿಯ ಕಾಲಕ್ಕೆ ಕುಣಿಯುತ್ತಾರೆ. ಅಲ್ಲದೆ ಕೃಷ್ಣಾಷ್ಟಮಿ, ಗಂಗಾಷ್ಟಮಿ, ಮಗುವಿನ ನಾಮಕರಣದ ಸಂದರ್ಭದಲ್ಲಿಯೂ ಸಹ ಕುಣಿಯುತ್ತಾರೆ.

ಈ ಕುಣಿತಕ್ಕೆ ವಿಶೇಷವಾದ ಉಡುಪು ಮತ್ತು ವೇಷ ಭೂಷಣಗಳು ಇರುವುದಿಲ್ಲ. ದಿನನಿತ್ಯದ ಸಾಮಾನ್ಯ ಉಡುಪು ಮತ್ತು ವೇಷಭೂಷಣದಲ್ಲಿಯೇ ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಈ ಕುಣಿತದಲ್ಲಿ ಕೆಲವು ಮಹಿಳೆಯರು ಮಾತ್ರ ಪಾಲ್ಗೊಳ್ಳುತ್ತಾರೆ. ಕುಣಿತಕ್ಕೆ ಒಬ್ಬ ಗಂಡಸು ಗುಮಟೆಯನ್ನು ಬಾರಿಸುತ್ತಿರುತ್ತಾನೆ. ಗುಮಟೆಯು ಕೆಲವು ಕಡೆ ಮಣ್ಣಿನಿಂದ ಮಾಡಿರುವುದು ಮತ್ತು ಕೆಲವು ಕಡೆ ಮರದ ಕಾಂಡದಿಂದ ಮಾಡಿರುವುದು ಕಂಡುಬರುತ್ತದೆ. ಇದು ಉದ್ದವಾಗಿ ವರ್ತುಲ ಆಕಾರದಲ್ಲಿ ಇರುತ್ತದೆ. ಒಂದು ಕಡೆ ಅಗಲವಾದ ಬಾಯಿ ಮತ್ತು ಇನ್ನೊಂದು ಕಡೆ ಸ್ವಲ್ಪ ಕಿರಿದಾದ ಬಾಯಿಯನ್ನು ಹೊಂದಿರುತ್ತದೆ. ಇದಕ್ಕೆ ಚರ್ಮವನ್ನು ಬಿಗಿಯಾಗಿ ಲೇಪಿಸಿರುತ್ತಾರೆ. ಈ ಗುಮಟೆಯ ತಾಳಕ್ಕೆ ತಕ್ಕಂತೆ ಮಹಿಳೆಯರು ಕುಣಿಯುತ್ತಾರೆ. ಇಲ್ಲಿ ಎಷ್ಟು ಜನ ಮಹಿಳೆಯರು ಬೇಕಾದರೂ ಭಾಗವಹಿಸಬಹುದು. ಆದರೆ ಸಮಸಂಖ್ಯೆಯಲ್ಲಿರಬೇಕು. ಪ್ರದರ್ಶನದಲ್ಲಿ ತೊಡಗುವವರೆಲ್ಲರೂ ಒಂದೊಂದು ಖಾಲಿ ಕೊಡವನ್ನು ಹೊಂದಿರಬೇಕು. ಖಾಲಿ ಕೊಡವನ್ನು ಹಿಡಿದು ಸಮಸಂಖ್ಯೆ ಹೆಣ್ಣುಮಕ್ಕಳು ಎದುರು-ಬದುರಾಗಿ ನೃತ್ಯ ಪ್ರದರ್ಶಿಸುತ್ತಾರೆ. ಹಿಮ್ಮೇಳದ ಹಾಡು ಮತ್ತು ಗುಮಟೆಯ ಸಂಗೀತಕ್ಕೆ ಲಯಬದ್ಧವಾದ ಹೆಜ್ಜೆ ಹಾಕುತ್ತಾ ಖಾಲಿ ಕೊಡವನ್ನು ತಿರುಗಿಸುತ್ತಾ ಅದರಲ್ಲಿ

ಘೂವ್..... ಘೂವ್ ಎಂದು ಉಸಿರು ಬಿಡುತ್ತಾ ಕುಣಿಯುತ್ತಾರೆ. ಆ ಉಸಿರು ಕೊಡದಲ್ಲಿ ಪ್ರತಿಧ್ವನಿಸಿ ಉತ್ತಮವಾದ ಸಂಗೀತ ಹೊರಹೊಮ್ಮುತ್ತಿರುತ್ತದೆ. ಆಗ ಕತ್ತು, ಸೊಂಟ ಬಾಗಿಸಿ ಸಂಗೀತಕ್ಕೆ ಮೆರಗು ನೀಡುವ ರೀತಿಯಲ್ಲಿ ಹೆಜ್ಜೆ ಹಾಕುತ್ತಾರೆ. ಹೆಜ್ಜೆ ಹಾಕುವವರು ತಾಳಕ್ಕೆ ತಕ್ಕಂತೆ ಎದುರು-ಬದುರಾಗಿ, ವೃತ್ತಾಕಾರವಾಗಿ, ವರ್ತುಲಾಕಾರಾಗಿ ಹಾಡು ಹೇಳುತ್ತಾ ಕುಣಿಯುತ್ತಾರೆ. ಈ ಕುಣಿತವನ್ನು ನಡುರಾತ್ರಿಯವರೆಗೆ ಇಲ್ಲವೆ ಬೆಳಗಾಗುವವರೆಗೂ ಸಹ ಕುಣಿಯುವುದು ಕಂಡುಬರುತ್ತದೆ.

ಈ ಕುಣಿತವನ್ನು ಸಿದ್ದಿ ಸಮುದಾಯ ಇತರ ಸಮುದಾಯಗಳಿಂದ ಎರವಲು ಪಡೆದಿದೆ. ಬೇರೆ ಸಮುದಾಯದಿಂದ ಎರವಲು ಪಡೆದಿದ್ದರೂ ಇದು ಸಮುದಾಯದ ಮುಖ್ಯ ಕಲೆ ಎನ್ನುವ ರೀತಿಯಲ್ಲಿ ಕರಗತ ಮಾಡಿಕೊಂಡಿದ್ದಾರೆ. ಈ ಕುಣಿತವನ್ನು ಸಿದ್ದಿಯರು ವಿಶೇಷ ಸಂದರ್ಭದಲ್ಲಿ ಮಾತ್ರವಲ್ಲದೆ ಮನರಂಜನೆಗಾಗಿಯೂ ಸಹ ಪ್ರದರ್ಶಿಸುತ್ತಾರೆ. ಇದು ಇವರಿಗೆ ಒಂದು ಮನೋರಂಜನಾ ಕಲೆಯಾಗಿ ಕರಗತವಾಗಿದೆ.

**೪.೫.೩ ಸುಗ್ಗಿ ಕುಣಿತ**

ಸುಗ್ಗಿಯ ಕುಣಿತ ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳಲ್ಲಿ ಕಂಡುಬರುವ ಪ್ರಮುಖ ಕಲೆಯಾಗಿದೆ. ಅದರಲ್ಲಿಯೂ ಮುಖ್ಯವಾಗಿ ಇದು ಹಾಲಕ್ಕಿ ಒಕ್ಕಲಿಗರಲ್ಲಿ ಕಂಡುಬರುವ ವಿಶಿಷ್ಟ ಕುಣಿತವಾಗಿದೆ. ಹಾಲಕ್ಕಿ ಒಕ್ಕಲಿಗರ ಸುಗ್ಗಿ ಕುಣಿತವನ್ನು ಸಮುದಾಯದ ಕೆಲವರು ರೂಡಿಸಿಕೊಂಡು ಪ್ರದರ್ಶಿಸುತ್ತಿದ್ದಾರೆ. ಹೆಸರೇ ಸೂಚಿಸುವಂತೆ ಸುಗ್ಗಿಯ ಸಂದರ್ಭದಲ್ಲಿ ಆಚರಿಸುವಂತಹ ಕಲೆಯಾಗಿದೆ. ಸಿದ್ದಿಯರು ಅನುಸರಿಸುವ ಈ ಕುಣಿತ ಹಾಲಕ್ಕಿ ಒಕ್ಕಲಿಗರಲ್ಲಿ ಕಂಡುಬರುವಂತಹ ವೈಭವವನ್ನು ಹೊಂದಿಲ್ಲ. "ಹೋಳಿ ಹುಣ್ಣಿಮೆಗೆ ಅಯ್ದು ದಿನಗಳಿರುವಾಗ ಆರಂಭವಾದ ಸಿದ್ದಿಯರ ಸುಗ್ಗಿ ಕುಣಿತ ಹೋಳಿ ಹುಣ್ಣಿಮೆಯಂದು ಕೊನೆಗೊಳ್ಳುತ್ತದೆ. ಸಿದ್ದಿಯರು ಸುಗ್ಗಿ ಕುಣಿತದ ಕಾಲಕ್ಕೆ ಹಾಲಕ್ಕಿ ಒಕ್ಕಲಿಗರಂತೆ ತುರಾಯಿ ಕಟ್ಟದೆ, ತಲೆಗೆ ರುಮಾಲು ಸುತ್ತಿಕೊಂಡು ಹೂಗಳನ್ನು ಸಿಕ್ಕಿಸಿಕೊಂಡು ಕುಣಿಯುತ್ತಾರೆ. ಇವರ ಸುಗ್ಗಿ ಕುಣಿತ ಹಾಲಕ್ಕಿ ಒಕ್ಕಲಿಗರ ಬೋಳು ಸುಗ್ಗಿಯನ್ನು ಹೋಲುತ್ತದೆ."[೨೨] ಹಾಲಕ್ಕಿ ಒಕ್ಕಲಿಗರಿಗೆ ಹೋಲಿಕೆ ಮಾಡಿದರೆ ಸಿದ್ದಿಯರ ಕುಣಿತ ನೀರಸವಾಗಿದೆ ಎಂದು ಹೇಳಬೇಕಾಗುತ್ತದೆ. ಸಿದ್ದಿಯರು ಈ ಕುಣಿತವನ್ನು ಮಾಡುವಾಗ ಕೊಂಕಣಿ, ಮರಾಠಿ ಮತ್ತು ಕನ್ನಡದ ಚಿಕ್ಕ ಚಿಕ್ಕ ಪದಗಳನ್ನು ಹಾಡುತ್ತಾರೆ. ಮುಖ್ಯವಾಗಿ ಇವರ ಪ್ರಮುಖ ಭಾಷೆಯಾದ ಮರಾಠಿ ಮತ್ತು ಕೊಂಕಣಿಯನ್ನು ಹೆಚ್ಚಾಗಿ ಆಡುತ್ತಾರೆ. ಈ ಕುಣಿತಕ್ಕೆ ಸಮುದಾಯದಲ್ಲಿ ಲಭ್ಯವಿರುವ ಡಮಾಮಿ, ಗುಮಟೆ, ತಾಳ, ಜಾಗಟೆ, ಕೊಳಲು ಮುಂತಾದ ವಾದ್ಯಗಳನ್ನು ಬಳಸುತ್ತಾರೆ.

**೪.೫.೪ ಅಲಗುಂ ಕುಣಿತ**

ಅಲಗುಂ ಕುಣಿತವನ್ನು ಸಮುದಾಯದ ಮುಸ್ಲಿಂ ಸಿದ್ದಿಯರು ಕುಣಿಯುತ್ತಾರೆ. ಮುಸ್ಲಿಂ ಸಿದ್ದಿಯರ ಪ್ರತ್ಯೇಕತೆಯನ್ನು ಈ ಕಲೆಯು ಸಂಕೇತಿಸುತ್ತದೆ. ಮೊಹರಂ ಹಬ್ಬದಲ್ಲಿ ಈ ಕುಣಿತವನ್ನು ಪ್ರದರ್ಶಿಸುತ್ತಾರೆ. ಸೊಂಟದಿಂದ ಮೊಣಕಾಲಿನವರೆಗೆ ಬಟ್ಟೆಯನ್ನು ಧರಿಸಿರುತ್ತಾರೆ. ಉಳಿದಂತೆ ಮೈಮೇಲೆಲ್ಲಾ ಬಿಳಿಯ ಸೇಡಿ ಬಣ್ಣವನ್ನು ಬಳಿದುಕೊಂಡು ಹುಲಿಯ ಪಟ್ಟಿಯನ್ನು ಚಿತ್ರಿಸಿಕೊಂಡಿರುತ್ತಾರೆ. ಸೊಂಟಕ್ಕೆ ಗಂಟೆಯ ಸರವನ್ನು ಸುತ್ತಿಕೊಂಡಿರುತ್ತಾರೆ. ತಲೆಗೆ ಉದ್ದವಾದ ಟೊಪ್ಪಿಗೆಯನ್ನು ಧರಿಸಿರುತ್ತಾರೆ. ಪ್ರತಿ ಮನೆ ಮನೆಯ ಮುಂದೆ ಕುಣಿಯುತ್ತಾ ಆಗೊಮ್ಮೆ ಈಗೊಮ್ಮೆ ಚಾಟಿಯಿಂದ ಹೊಡೆದುಕೊಳ್ಳುತ್ತಿರುತ್ತಾರೆ. ಹೀಗೆ ಹೊಡೆದುಕೊಳ್ಳುತ್ತ ಕುಣಿಯುವ ಮುಸಲ್ಮಾನ ಸಿದ್ದಿಗಳ ಮೈಮೇಲೆ ಬಂದವರಂತೆ ಆವೇಶದಿಂದ ನರ್ತಿಸುತ್ತಿರುತ್ತಾರೆ. ಅಲಾಯ್ ಅಲಾಯ್ ಎಂದು ಉದ್ಘರಿಸುತ್ತಾ ಹೆಜ್ಜೆ ಹಾಕುವ ಈ ನೃತ್ಯ ಮನಸ್ಸಿಗೆ ಆಹ್ಲಾದವನ್ನು ನೀಡುತ್ತದೆ. ಈ ನೃತ್ಯವು ಮುಸಲ್ಮಾನ ಸಿದ್ದಿಯರಲ್ಲಿ ಮಾತ್ರ ಆಚರಣೆಯಲ್ಲಿರುವುದು ಧಾರ್ಮಿಕ ಪ್ರತ್ಯೇಕತೆಯ ಭಾಗವಾಗಿದೆ.

**೪.೫.೫ ಇತರ ಕಲೆಗಳು**

ಕ್ರಿಶ್ಚಿಯನ್ ಸಿದ್ದಿಯರು ಕ್ರಿಸ್‌ಮಸ್ ದಿನದಂದು ಹೊಸ ಬಟ್ಟೆಗಳನ್ನು ತೊಟ್ಟು ಚರ್ಚ್‌ಗೆ ಹೋಗಿ ಪ್ರಾರ್ಥಿಸಿ ಬಂದ ನಂತರ ವಿಶೇಷವಾದ ಕೆಲವು ವೇಷ ಭೂಷಣಗಳನ್ನು ತೊಟ್ಟು ನರ್ತಿಸುತ್ತಾರೆ.

ಸಿದ್ದಿ ಸಮುದಾಯದವರು ರಂಗ ಕಲೆಗಳಲ್ಲಿಯೂ ಸಹ ತಮ್ಮ ಪ್ರಾವಿಣ್ಯತೆಯನ್ನು ಹೊಂದಿರುವುದು ತಿಳಿದುಬರುತ್ತದೆ. ಉತ್ತರ ಕರ್ನಾಟಕದಲ್ಲಿ ಜನಪ್ರಿಯತೆ ಪಡೆದಿರುವ 'ಸಂಗ್ಯಾ-ಬಾಳ್ಯಾ' ನಾಟಕವನ್ನು ಸಹ ಪ್ರದರ್ಶಿಸುತ್ತಾರೆ. ಗಂಡಸರು ಮಾತ್ರವಲ್ಲದೇ ಹೆಂಗಸರೂ ಸಹ ಈ ನಾಟಕದ ಪಾತ್ರಗಳನ್ನು ಕಂಠಪಾಠಮಾಡಿ, ಅಭಿನಯಿಸಿ ಆನಂದ ಪಡೆಯುತ್ತಾರೆ. ಯಾವ ಸಮುದಾಯಕ್ಕೂ ಕಡಿಮೆಯಿಲ್ಲ ಎನ್ನುವ ರೀತಿಯಾಗಿ ಅಭಿನಯಿಸುತ್ತಾರೆ. "ಹೆಗ್ಗೋಡಿನ 'ನೀನಾಸಂ' ರಂಗ ಸಂಸ್ಥೆಯವರ ಆಸಕ್ತಿಯಿಂದಾಗಿ, ಮಂಚಿಕೇರಿಯ ರಾಜರಾಜೇಶ್ವರಿ ರಂಗ ವಿಭಾಗದವರ ಸಹಕಾರದೊಂದಿಗೆ ಸಿದ್ದಿಯರನ್ನೇ ಕಲೆಹಾಕಿ ಆಧುನಿಕ ನಾಟಕವೊಂದನ್ನು ಕೆಲವು ವರ್ಷಗಳ ಹಿಂದೆ ಪ್ರಯೋಗಿಸಲಾಯಿತು. ಪ್ರಸಿದ್ಧ ನೀಗ್ರೋ ಲೇಖಕ 'ಚಿನುವಾ ಅಚಿಬೇ' ಅವರ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯ ಆಧಾರದ ಮೇಲೆ ರಚಿಸಲಾದ 'ಕಪ್ಪು ಜನರ ಕೆಂಪು ನೆರಳು' ಎಂಬ ಈ ನಾಟಕ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲೂ ಪ್ರದರ್ಶಿತವಾಯಿತು. ಈ ನಾಟಕದ ಬಹುತೇಕ ಪಾತ್ರದಾರಿಗಳು ನಮ್ಮ ಸಿದ್ದಿಯರೇ."[೨೩]

ಆಧುನಿಕತೆಯ ಸಂಪರ್ಕದಿಂದಾಗಿ ವಿವಿಧ ರೀತಿಯ ಕಲೆಗಳನ್ನು ಕರಗತ ಮಾಡಿಕೊಳ್ಳುವುದರ ಮೂಲಕ ಕಲೆಯ ಶ್ರೀಮಂತಿಕೆಯನ್ನು ಸಿದ್ದಿ ಸಮುದಾಯ ಹೊಂದಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

## ಅಡಿಟಿಪ್ಪಣಿಗಳು

೧. ಪ್ರೊ. ಕೆ.ಭೈರಪ್ಪ, ಭಾರತೀಯ ಸಮಾಜ ಮತ್ತು ಸಾಮಾಜಿಕ ಚಿಂತನೆ, ಪುಟ ೪೮.

೨. ಹಿ.ಚಿ.ಬೋರಲಿಂಗಯ್ಯ, ನಮ್ಮೊಳಗೊಂದು ಪುಟ್ಟ ಆಫ್ರಿಕಾ, ಪುಟ ೨೩.

೩. ಹಿ.ಚಿ.ಬೋರಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೫೬.

೪. ಚ.ನ.ಶಂಕರರಾವ್, ಭಾರತೀಯ ಸಮಾಜ, ಪುಟ ೨೭೫.

೫. ಎನ್.ಆರ್.ನಾಯಕ್, ಉತ್ತರಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೩ ಮತ್ತು ೪.

೬. ಚ.ನ.ಶಂಕರರಾವ್, ಭಾರತೀಯ ಸಮಾಜ, ಪುಟ ೨೦.

೭. ಸಂ: ಡಾ॥ ಹಿ.ಚಿ.ಬೋರಲಿಂಗಯ್ಯ, ಎ.ಎಸ್.ಪ್ರಭಾಕರ, ಬುಡಕಟ್ಟು ಅಧ್ಯಯನ, ಪುಟ ೧೦೬.

೮. ಎನ್.ಆರ್.ನಾಯಕ್, ಉತ್ತರಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೨೪.

೯. ಹಿ.ಚಿ.ಬೋರಲಿಂಗಯ್ಯ, ನಮ್ಮೊಳಗೊಂದು ಪುಟ್ಟ ಆಫ್ರಿಕಾ, ಪುಟ ೨೯.

೧೦. ಎನ್.ಆರ್.ನಾಯಕ್, ಉತ್ತರಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೨೫ ಮತ್ತು ೨೬.

೧೧. ಸಂ: ಹಿ.ಚಿ.ಬೋರಲಿಂಗಯ್ಯ, ಎ.ಎಸ್.ಪ್ರಭಾಕರ, ಬುಡಕಟ್ಟು ಅಧ್ಯಯನ, ಪುಟ ೧೦೭.

೧೨. ಎನ್.ಆರ್.ನಾಯಕ್, ಉತ್ತರಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೨೫.

೧೩. ಹಿ.ಚಿ.ಬೋರಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೫೯.

೧೪. ಅದೇ, ಪುಟ ೬೨.

೧೫. ಅದೇ, ಪುಟ ೬೮ ಮತ್ತು ೬೯.

೧೬. ರಾ.ಯ.ಧಾರವಾಡಕರ್, ಅಮೇರಿಕನ್ ನೀಗ್ರೋ ಕಥೆಗಳು, ಪುಟ ೭ ಮತ್ತು ೮.

೧೭. ಪ್ರ.ಸಂ: ಪ್ರೊ. ಎಚ್.ಜೆ.ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂ.೧, ಪುಟ ೯೫ ಮತ್ತು ೯೬.

೧೮. ಸಂ: ಹಿ.ಚಿ.ಬೋರಲಿಂಗಯ್ಯ, ಕರ್ನಾಟಕ ಜನಪದ ಕಲೆಗಳ ಕೋಶ, ಪುಟ ೨೦೩.

೧೯. ಸಂ: ಗೊ.ರು.ಚನ್ನಬಸಪ್ಪ, ಕರ್ನಾಟಕ ಜನಪದ ಕಲೆಗಳು, ಪುಟ ೭೮.

೨೦. ಡಾ॥ ಎನ್.ಆರ್.ನಾಯಕ್, ಕಾರವಾರ ಜಿಲ್ಲೆಯ ಜನಪದ ಗೀತಗಳು, ಪುಟ ೨೩೦.

೨೧. ಅದೇ, ಪುಟ ೨೩೦.

೨೨. ಎನ್.ಆರ್.ನಾಯಕ್, ಉತ್ತರಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೩೪.

೨೩. ಹಿ.ಚಿ.ಬೋರಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೭೭.

ಅಧ್ಯಾಯ–೫

# ಸಮುದಾಯದ ಆರ್ಥಿಕತೆ

೫.೧ ಆರ್ಥಿಕ ಜೀವನ

**ಭೂ**ಮಿಯ ಮೇಲೆ ಮಾನವನ ವಿಕಾಸವಾದ ದಿನದಿಂದ ಇಂದಿನವರೆಗೂ ಅವನು ಸಾಗಿಬಂದ ದಾರಿಯನ್ನು ನೋಡಿದರೆ ಕಾಲಕಾಲಕ್ಕೆ ಬದಲಾವಣೆಯನ್ನು ಹೊಂದಿದ್ದಾನೆ. ಮೊದಲಿಗೆ ಮಾನವನು ಹೊಟ್ಟೆಪಾಡಿಗಾಗಿ ಬೇಟೆಯನ್ನು ಅವಲಂಬಿಸಿ ಜೀವನವನ್ನು ನಿರ್ವಹಿಸುತ್ತಿದ್ದ. ನಂತರದ ಹಂತದಲ್ಲಿ ಪಶುಪಾಲನೆಯನ್ನು ಕೈಗೊಂಡು ಹೊಟ್ಟೆ ಹೊರೆಯಲು ಪ್ರಾರಂಭಿಸಿದ. ನಂತರದ ದಿನಗಳಲ್ಲಿ ಕೃಷಿಯನ್ನು ಅವಲಂಬಿಸಿಕೊಂಡು ಬದುಕಿನ ರೂಪರೇಷೆಗಳನ್ನು ರೂಡಿಸಿಕೊಂಡು ಸಾಗಿ ಬಂದುದು ಇತಿಹಾಸದಿಂದ ತಿಳಿದುಬರುತ್ತದೆ. ಇಂದಿನ ದಿನದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳು ಶರವೇಗದಲ್ಲಿ ಮುನ್ನುಗ್ಗುತ್ತಿವೆ. ಅದರ ಫಲವಾಗಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕವಾಗಿ ಮಹತ್ತರವಾದ ಬದಲಾವಣೆಗಳು ಗೋಚರಿಸುತ್ತಿವೆ. ಬಡವರು ಮತ್ತು ಶ್ರೀಮಂತರು ಎನ್ನುವ ವರ್ಗ ವ್ಯವಸ್ಥೆ ಪ್ರಮುಖವಾಗಿ ಬೆಳೆದು ಬಂದಿದೆ.

ಪ್ರಾಚೀನ ಕಾಲದಲ್ಲಿ ರಚಿತವಾದ ವರ್ಣ ವ್ಯವಸ್ಥೆಯು ನಂತರದ ದಿನಗಳಲ್ಲಿ ವರ್ಗಗಳಾಗಿ ರೂಪುಗೊಂಡಿತು. ತದನಂತರ ಜಾತಿಗಳಾಗಿ ಮಾರ್ಪಾಟನ್ನು ಹೊಂದಿತು. ಪ್ರಾಚೀನ ಕಾಲದಿಂದ ಬ್ರಿಟೀಷರು ಭಾರತಕ್ಕೆ ಬರುವವರೆಗಿನ ಅವಧಿಯವರೆಗೆ ಪ್ರತಿಯೊಂದು ಸಮುದಾಯಗಳು ತನ್ನದೇ ಆದ ಕುಲಕಸುಬುಗಳನ್ನು ಹೊಂದಿದ್ದವು. ಬಹುತೇಕ ಇಂದಿಗೂ ಗ್ರಾಮೀಣ ಮತ್ತು ಆದಿವಾಸಿ ಸಮುದಾಯಗಳಲ್ಲಿ ಈ ವ್ಯವಸ್ಥೆ ಕಂಡುಬರುವುದಾದರೂ, ಮೊದಲಿನಷ್ಟು ಪ್ರಭಾವಿಯಾಗಿ ಗೋಚರಿಸುತ್ತಿಲ್ಲ. ಆಧುನಿಕರಣ, ನಗರೀಕರಣ, ಕೈಗಾರೀಕರಣ ಮುಂತಾದ ಪ್ರಭಾವಗಳಿಂದಾಗಿ ಸಮುದಾಯದ ಮೂಲ ವೃತ್ತಿಯಲ್ಲಿ ವ್ಯಾಪಕವಾದ ಬದಲಾವಣೆ ಗೋಚರವಾಗುತ್ತಿದೆ. ಒಂದು ಸಮುದಾಯವು ಅನುಸರಿಸುತ್ತಿರುವ ವೃತ್ತಿ,

ಸಂಪತ್ತಿನ ಸದುಪಯೋಗ, ಶಿಕ್ಷಣ. ಸಂಪನ್ಮೂಲದ ಪಾತ್ರ, ಕೌಟುಂಬಿಕ ಜೀವನದ ಆಧಾರದ ಮೇಲೆ ಆ ಸಮುದಾಯದ ಸ್ಥಾನ–ಮಾನಗಳನ್ನು ಅರಿಯಬಹುದಾಗಿದೆ. ಆರ್ಥಿಕ ಚಟುವಟಿಕೆಯ ಆಧಾರದ ಮೇಲೆ ಒಂದು ಸಮುದಾಯದ ರೀತಿ–ನೀತಿಗಳನ್ನು ಗುರುತಿಸಬಹುದಾಗಿದೆ. ಸಮುದಾಯದ ಜೀವನದಲ್ಲಿ ಆರ್ಥಿಕತೆಯು ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಸಮುದಾಯದ ಆರ್ಥಿಕ ಚಟುವಟಿಕೆಯು ಪ್ರಬಲವಾಗಿದ್ದರೆ ಅಥವಾ ಉತ್ತಮವಾಗಿದ್ದರೆ, ಆ ಸಮುದಾಯದ ಇತರ ಕ್ಷೇತ್ರಗಳು ಬಲಿಷ್ಠವಾಗಿರುವುದಕ್ಕೆ ಸಹಕಾರಿಯಾಗುತ್ತದೆ. ಸಮುದಾಯದ ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳ ಸ್ಥಾನಮಾನಗಳು ನಿರ್ಧರಿತವಾಗುತ್ತವೆ. ಸಮುದಾಯದ ಅಭಿವೃದ್ಧಿಯಲ್ಲಿ ಆರ್ಥಿಕ ವ್ಯವಸ್ಥೆಯು ಅಗ್ರಮಾನ್ಯವಾಗಿದೆ. ಒಂದು ಸಮುದಾಯವು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅರ್ಥವ್ಯವಸ್ಥೆಯು ಮಹತ್ವದ ಪಾತ್ರ ವಹಿಸುತ್ತದೆ.

ಸಮುದಾಯದ ಸಾಮಾಜಿಕ ಜೀವನವನ್ನು ನಿರ್ಧರಿಸುವಲ್ಲಿ ವೃತ್ತಿಗಳು ಪ್ರಮುಖ ಪಾತ್ರ ವಹಿಸುತ್ತವೆ. ಸಿದ್ದಿಯರ ವೃತ್ತಿ ಯಾವುದೆಂಬುದು ಎಷ್ಟೋ ಜನ ಸಿದ್ದಿಯರಿಗೇ ಗೊತ್ತಿಲ್ಲ. ಆಫ್ರಿಕಾದ ಕಾಡುಗಳಲ್ಲಿ ಸ್ವಚ್ಛಂದವಾಗಿ ಜೀವನ ನಡೆಸುತ್ತಿದ್ದ ಇವರನ್ನು ಪ್ರಾಣಿಗಳಂತೆ ಬೇಟೆಯಾಡಿ ತಂದು, ಹರಾಜು ಕೂಗಿ ಮಾರಾಟ ಮಾಡುತ್ತಿದ್ದರು. ನೂರಾರು ವರ್ಷಗಳ ಹಿಂದೆಯೇ ತಮ್ಮ ಮೂಲ ಸ್ಥಾನವನ್ನು ಕಳೆದುಕೊಂಡು ಗುಲಾಮರಾಗಿ ಬಂದ ಇವರಿಗೆ ಮುಖ್ಯ ವೃತ್ತಿ ಅಥವಾ ಸಮುದಾಯದ ವೃತ್ತಿ ಯಾವುದೆಂದು ಹೇಳುವುದು ಕಷ್ಟಸಾಧ್ಯ. ಹೀಗಿರುವಾಗ ಈ ಸಮುದಾಯದ ಮೂಲ ವೃತ್ತಿಯನ್ನು ಹುಡುಕುವುದು ತುಂಬಾ ತ್ರಾಸದಾಯಕವಾದುದು. ಆದರೆ ಈ ಸಮುದಾಯದವರು ಮಾಲಿಕರಿಂದ ತಪ್ಪಿಸಿಕೊಂಡು ಅರಣ್ಯವನ್ನು ಸೇರಿದ ಎಷ್ಟೋ ವರ್ಷಗಳ ನಂತರ ದಟ್ಟವಾದ ಅರಣ್ಯದಲ್ಲಿ ಒಂದೆಡೆ ನೆಲೆ ನಿಲ್ಲಲು ಪ್ರಾರಂಭಿಸಿದರು. ಕಾಡಿನ ಮಧ್ಯದಲ್ಲಿರುವ ತೋಟಗಳಿಗೆ ಕೃಷಿ ಕಾರ್ಮಿಕರಾಗಿ ದುಡಿಯುವುದು ಅನಿವಾರ್ಯವಾಯಿತು. ಅಲ್ಲದೆ ಅರಣ್ಯದಲ್ಲಿನ ಅಲ್ಪ ಸ್ವಲ್ಪ ಭೂಮಿಯನ್ನು ಒತ್ತುವರಿ ಮಾಡಿಕೊಂಡು, ಅಲ್ಲಿಯೇ ಕೃಷಿಯನ್ನು ಅವಲಂಬಿಸಿ ಜೀವನ ನಿರ್ವಹಿಸುತ್ತಿದ್ದಾರೆ. ಆದ್ದರಿಂದ ಕೃಷಿ ಈಗ ಈ ಸಮುದಾಯದ ಮೂಲ ಉದ್ಯೋಗವಾಗಿದೆ ಎಂದು ಹೇಳಬಹುದು. ಜೀತದಾಳುಗಳಾಗಿ ಮಾಲಿಕನ ಮನೆಯಲ್ಲಿ ಅವರು ಹೇಳಿದ ಕೆಲಸವನ್ನು ಗಾಣದ ಎತ್ತಿನ ರೀತಿ ದುಡಿದು ಬದುಕುತ್ತಿದ್ದರು ಮತ್ತು ಬದುಕುತ್ತಿದ್ದಾರೆ. ಅರಣ್ಯವನ್ನು ಪ್ರವೇಶಿಸಿದಾಗ ಏಕಾಏಕಿ ಕೃಷಿ ಕಾರ್ಮಿಕರಾಗಿ ಇಲ್ಲವೇ ಕೃಷಿಕರಾಗಿ ಗುರುತಿಸಿಕೊಳ್ಳಲಿಲ್ಲ. ಬದಲಾಗಿ ಆಹಾರದ ಕೊರತೆಯನ್ನು ನೀಗಿಸಿಕೊಳ್ಳುವುದರ ಸಲುವಾಗಿ ಬೇಟೆಯನ್ನಾಡಿ ಜೀವನ

ಸಾಗಿಸಿದರು. ನಂತರ ಅರಣ್ಯ ಕಾಯ್ದೆಗಳು ಬುಡಕಟ್ಟುಗಳ ಹಕ್ಕನ್ನು ಕಿತ್ತುಕೊಂಡವು. ಜೊತೆಗೆ ಬೇಟೆಯ ಜೀವನದಿಂದ ಸಂಪೂರ್ಣವಾಗಿ ಹೊಟ್ಟೆ ಹೊರೆಯಲು ಸಾಧ್ಯವಾಗದಿದ್ದಾಗ ಕೃಷಿಯನ್ನು ಅವಲಂಬಿಸುವುದು ಅನಿವಾರ್ಯವಾಯಿತು.

ಸಿದ್ದಿಯರು ಬಲಾಢ್ಯ ದೇಹವನ್ನು ಹೊಂದಿದ್ದಾರೆ ಎನ್ನುವ ಒಂದೇ ಕಾರಣಕ್ಕೆ ಗುಲಾಮಗಿರಿಯ ದೌರ್ಜನ್ಯಕ್ಕೆ ಒಳಗಾಗಬೇಕಾಯಿತು. ಮಾಲಿಕನ ದಬ್ಬಾಳಿಕೆಗೆ ಸಿದ್ದಿಯರು ನಲುಗಿ ಹೋಗಿದ್ದರು. ಈ ರೀತಿಯ ದಬ್ಬಾಳಿಕೆಯಿಂದಾಗಿ ನಾಗರಿಕ ಸಮಾಜದವರನ್ನು ಕಂಡರೆ ಹೆದರಿಕೊಳ್ಳುವ ಸ್ವಭಾವ ಸೃಷ್ಠಿಯಾಯಿತು. ದುಡಿದು ಸುಸ್ತಾದ ಸಿದ್ದಿಯರು ಮಾಲಿಕರ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ಬಂದು ಅರಣ್ಯ ಸೇರಿದ ಇವರಿಗೆ ನಾಳೆಯ ಬಗೆಗೆ ಚಿಂತೆ ಇರದೆ, ಸ್ವಚ್ಛಂದವಾಗಿ ತಿರುಗಾಡಲು ಪ್ರಾರಂಭಿಸಿದರು. ಸುಸ್ತಾದ ಇವರಿಗೆ ವಿಶ್ರಾಂತಿಯ ಅವಶ್ಯಕತೆಯಿತ್ತು. "ಮನೆಯಲ್ಲಿ ಒಂದು ದಿನದ ಊಟಕ್ಕಿದ್ದರೂ ಸಾಕು ದುಡಿಯಲು ಹೋಗುವುದೇ ಇಲ್ಲ. ಹಾಗಂತ ಇವರು ಸೋಮಾರಿಗಳೂ ಅಲ್ಲ. ಇವರು ಕ್ರಿಯಾಶೀಲರಾಗಬೇಕಾದರೆ ಇವರ ಹೊಟ್ಟೆ ಹಸಿಯಬೇಕು: ಆಗ ಕೆಲಸಕ್ಕೆ ಇವರು ಹುಲಿಗಳು. ಇವರ ಕಟ್ಟುಮಸ್ತಾದ ದೇಹವನ್ನು ನೋಡಿದಾಗ ಕ್ರೂರಿಗಳಂತೆ, ದರೋಡೆಖೋರರಂತೆ ಕಂಡರೂ ಇವರು ಕ್ರೂರಿಗಳಲ್ಲ, ದರೋಡೆಖೋರರಲ್ಲ ನಂಬಿಗಸ್ಥರು: ಸರಳ ಸ್ವಭಾವಿಗಳು. ಯಾವುದೋ ಬಗೆಯ ಕಟ್ಟು ಕಟ್ಟಳೆಗಳಿಗೆ ತಮ್ಮನ್ನು ಬದ್ಧವಾಗಿಸಿಕೊಂಡು ಒದ್ದಾಡುವ ಸ್ವಭಾವ ಇವರದಲ್ಲ. ಪರಿಸರಕ್ಕೆ ಹೊಂದಿಕೊಂಡು ಹೋಗುವ ಸರಳ ವ್ಯಕ್ತಿಗಳು."[೧] ಇವರು ಸರಳತೆಯ ಪ್ರತೀಕವಾಗಿದ್ದಾರೆ. ಮೊದಲಿಗೆ ನೆಲೆಯನ್ನು ಕಂಡುಕೊಳ್ಳುವ ಸಂದರ್ಭದಲ್ಲಿ ಸಣ್ಣಪುಟ್ಟ ಕಳ್ಳತನಗಳನ್ನು ಮಾಡುತ್ತಿದ್ದರು. ಆದರೆ ಇಂದು ಆ ಸ್ವಭಾವ ಗಣನೀಯವಾಗಿ ಕಣ್ಮರೆಯಾಗಿದೆ ಎನ್ನುವ ಅಭಿಪ್ರಾಯವನ್ನು ಸಮುದಾಯದ ಬಹುತೇಕರು ತಿಳಿಸುತ್ತಾರೆ.

ಸಿದ್ದಿಯರು ತಮ್ಮ ಉಪಜೀವನದ ನಿರ್ವಹಣೆಗಾಗಿ ಕೆಲವೊಂದು ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರಲ್ಲಿ ಕಂಡುಬರುವ ಪ್ರಮುಖ ವೃತ್ತಿ ಎಂದರೆ ಕೂಲಿ ಮತ್ತು ಕೃಷಿ. ಇನ್ನುಳಿದಂತೆ ಸಣ್ಣ ಪ್ರಮಾಣದ ಬೇಟೆ, ಅರಣ್ಯದ ಕಿರು ಉತ್ಪನ್ನಗಳ ಸಂಗ್ರಹ ಮತ್ತಿತರ ಸಣ್ಣಪುಟ್ಟ ಉದ್ಯೋಗದಲ್ಲಿ ತೊಡಗಿರುವುದು ತಿಳಿಯುತ್ತದೆ.

**೫.೧.೧ ಪಾರಂಪರಿಕ ವೃತ್ತಿ**

ಗುಲಾಮಗಿರಿಯಿಂದ ಮುಕ್ತಿ ಪಡೆಯಲು ಅರಣ್ಯ ಸೇರಿದ ಸಿದ್ದಿಯರು ಅರಣ್ಯದಲ್ಲಿ ದೊರೆಯುವ ಗೆಡ್ಡೆ-ಗೆಣಸು, ಹಣ್ಣು-ಹಂಪಲುಗಳು ಮತ್ತು ಕೈಗೆ ಸಿಗುವ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡಿ ತಿಂದು ಜೀವಿಸುತ್ತಿದ್ದರು. ಅರಣ್ಯ ಇಲಾಖೆಯ ಕಾಯ್ದೆಗಳು ಮತ್ತು ಸ್ಥಳೀಯ ವರ್ಗದವರ ಪ್ರಭಾವದಿಂದ ಕೂಲಿ ಕೆಲಸಕ್ಕೆ ಹೋಗಲು ಪ್ರಾರಂಭ ಮಾಡಿದರು. ಕೇವಲ

ಕೂಲಿಯಿಂದ ಜೀವನ ಮಾಡುವುದು ದುಸ್ತರವೆಂದು ಅರಿತುಕೊಂಡು, ಅರಣ್ಯದಲ್ಲಿನ ಬಯಲು ಪ್ರದೇಶ ಅಥವಾ ಅರಣ್ಯದಲ್ಲಿನ ಸ್ವಲ್ಪ ಭೂಮಿಯನ್ನು ಅತಿಕ್ರಮಣ ಮಾಡಿಕೊಂಡು ಕೃಷಿಯನ್ನು ಪ್ರಾರಂಭಿಸಿದರು. ಸಿದ್ದಿಯರು ಗುಲಾಮಗಿರಿಯಿಂದ ತಪ್ಪಿಸಿಕೊಂಡ ನಂತರ ಕೃಷಿ ಚಟುವಟಿಕೆಯಲ್ಲಿಯೇ ಹೆಚ್ಚಾಗಿ ತೊಡಗಿದರು. ಆದ್ದರಿಂದ ಕೃಷಿ ಮತ್ತು ಕೃಷಿ ಕೂಲಿ ಈ ಸಮುದಾಯದ ಮುಖ್ಯ ವೃತ್ತಿಗಳಾದವು ಎಂದು ಹೇಳಬಹುದು.

ಸ್ಥಳೀಯ ಸಮುದಾಯದವರ ಕೃಷಿ ಚಟುವಟಿಕೆಗೆ ಕೃಷಿ ಕೂಲಿಗಳಾಗಿ ಹೋಗುತ್ತಿದ್ದರು. ಹೀಗಿರುವಾಗ ಕೃಷಿಯ ಪದ್ಧತಿಗಳನ್ನು ಅಥವಾ ಬೆಳೆಯುವ ಬೆಳೆಗಳ ವಿಧಾನಗಳನ್ನು ಚೆನ್ನಾಗಿ ಮನನ ಮಾಡಿಕೊಂಡರು. ಅದರ ಫಲವಾಗಿ ಸಿದ್ದಿಯರು ಸ್ವತಂತ್ರ ಕೃಷಿಯಲ್ಲಿ ತೊಡಗುವುದಕ್ಕೆ ಅವಕಾಶವಾಯಿತು. ಸಮುದಾಯದ ಹಿಂದೂ, ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮದ ಸಿದ್ದಿಯರೆಲ್ಲರೂ ಕೃಷಿಯನ್ನೇ ಹೆಚ್ಚಾಗಿ ನಂಬಿಕೊಂಡು ಜೀವನ ನಿರ್ವಹಿಸುತ್ತಿದ್ದಾರೆ. ದೃಢಕಾಯ ದೇಹ ಹೊಂದಿರುವ ಸಿದ್ದಿಯರನ್ನು ಹೆಚ್ಚಾಗಿ ದುಡಿಸಿಕೊಂಡು ಕಡಿಮೆ ಕೂಲಿ ನೀಡಿ ಹಿಂಸಿಸುತ್ತಿರುವುದು ಕಂಡುಬರುತ್ತಿದೆ. ಉತ್ತರ ಕನ್ನಡ ಜಿಲ್ಲೆಯ ಹವ್ಯಕರ "ಅಡಿಕೆ ತೋಟದಲ್ಲಿ ದುಡಿಯುವವರಲ್ಲಿ ಹೆಚ್ಚಿನವರು ಘಟ್ಟದ ಕೆಳಗಿನ ಪ್ರದೇಶದಿಂದ ಬಂದ ಬುಡಕಟ್ಟಿನವರೆ ಮುಖ್ರಿಯರು, ಹಸಲರು, ಹಾಲಕ್ಕಿಯವರು, ಗೌಡರು ಹವ್ಯಕ ಬ್ರಾಹ್ಮಣರ ಕಾಯಂ ಆಳುಗಳು. ಇವರ ಕೊರತೆ ಇದ್ದಾಗ ಅಥವಾ ದೂರದಿಂದ ಓಡಿ ಬಂದು ನಿರಾಶ್ರಿತರಾದ 'ಸೋವಿ ಆಳು' ಸಿದ್ದಿಯರನ್ನು ತೋಟದ ಕೆಲಸಕ್ಕೆ ಬಳಸಿಕೊಂಡದ್ದು ಸ್ವಾಭಾವಿಕವೇ. ದುಡಿಯಲೆಂದು ಬಂದ ದಿನ ಕೆಲಸದಲ್ಲಿ ಇಂದಿಗೂ ಅತ್ಯಂತ ಪ್ರಾಮಾಣಿಕ ಹಾಗೂ ನಿಷ್ಠಾವಂತರೆಂಬ ಹೆಗ್ಗಳಿಕೆ ಪಡೆದ ಸಿದ್ದಿಯರಲ್ಲಿ ಬಹುತೇಕ ಜನರಿಗೆ ತೋಟದ ಮಾತು ದೂರ ಉಳಿಯಿತು ಸ್ವಂತ ಮನೆಯ ಹೊರತಾಗಿ ಯಾವ ಭೂಮಿಯೂ ಇಲ್ಲ. ಆದ್ದರಿಂದ ಇಂದಿಗೂ ಉತ್ತರ ಕನ್ನಡ ಜಿಲ್ಲೆಯ ಬಹುತೇಕ ಸಿದ್ದಿಗಳು ದಿನಗೂಲಿಗಾಗಿ ಅಥವಾ 'ಶೇರುಗಾರನ' ಗುತ್ತಿಗೆ ಕೆಲಸದ ಆಳುಗಳಾಗಿ ದುಡಿಯುವುದು ಅನಿವಾರ್ಯ ಸತ್ಯ."[೨] ಸಿದ್ದಿಯರು ಮುಖ್ಯವಾಗಿ ತಮ್ಮ ಅತಿಕ್ರಮಣದ ಸ್ವಂತ ಕೃಷಿಗಿಂತ ದಿನಗೂಲಿಯನ್ನು ನೆಚ್ಚಿಕೊಂಡು ಬದುಕುತ್ತಿರುವುದು ತಿಳಿದುಬರುತ್ತದೆ.

ಉತ್ತರ ಕನ್ನಡ ಜಿಲ್ಲೆಯ ಒಟ್ಟು ೨,೨೭೮ ಸಿದ್ದಿ ಕುಟುಂಬಗಳಿಂದ ಒಟ್ಟು ೩,೫೫೨.೦೭ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದಾರೆ. ಒಟ್ಟಾರೆಯಾಗಿ ಒಂದೊಂದು ಕುಟುಂಬಕ್ಕೆ ಶೇ. ೧.೫೫ ಎಕರೆ ಭೂಮಿಯು ಲಭಿಸುತ್ತದೆ. ಆದರೆ ಇದರಲ್ಲಿನ ಎಷ್ಟೋ ಕುಟುಂಬಗಳು ಕೃಷಿ ಭೂಮಿಯನ್ನೇ ಹೊಂದಿಲ್ಲ. ಇದರಲ್ಲಿ ಹೆಚ್ಚಾಗಿ ಒಣ ಭೂಮಿಯನ್ನು ಆಶ್ರಯಿಸಿ ಬದುಕುವವರು ಪ್ರಮುಖವಾಗಿ ಕಂಡುಬರುತ್ತಾರೆ. ಸುಮಾರು ೩,೦೨೬.೯೯ ಎಕರೆ ಕೃಷಿ ಭೂಮಿಯು

ಮಳೆಯಾಧಾರಿತ ಒಣ ಭೂಮಿಯಾದರೆ, ಉಳಿದ ೫೨೫.೦೮ ಎಕರೆ ಭೂಮಿಯು ನೀರಾವರಿ ಕೃಷಿಯನ್ನು ಹೊಂದಿದೆ. ಒಟ್ಟಾರೆಯಾಗಿ ಒಂದೊಂದು ಕುಟುಂಬಕ್ಕೆ ಭೂಮಿಯನ್ನು ಹಂಚಿದಾಗ ಅಲ್ಪ ಪ್ರಮಾಣದ ಹಿಡುವಳಿದಾರರಾಗಿ ಗುರುತಿಸಿಕೊಳ್ಳುತ್ತಾರೆ. ಒಂದು ಕುಟುಂಬಕ್ಕೆ ಇಷ್ಟು ಕಡಿಮೆ ಪ್ರಮಾಣದ ಭೂಮಿ ಯಾವುದಕ್ಕೂ ಸಾಕಾಗುವುದಿಲ್ಲ. ಆದ್ದರಿಂದ ಕೃಷಿಗಿಂತ ಕೃಷಿ ಕೂಲಿಯೇ ಇವರ ಪ್ರಮುಖ ವೃತ್ತಿಯಾಗಿದೆ.

ಸಿದ್ದಿಯರ ತಾಲೂಕುವಾರು ಗ್ರಾಮಗಳ ಒಟ್ಟಾರೆ ಕೃಷಿ ಭೂಮಿಯ ವಿವರವನ್ನು ಅಂಕಿ ಅಂಶಗಳ ಪಟ್ಟಿ – ೫ ರಲ್ಲಿ ಗಮನಿಸಿ.

ಸಿದ್ದಿಯರು ಇತ್ತೀಚೆಗೆ ತಮ್ಮ ಭೂಮಿಯಲ್ಲಿ ಹಲವಾರು ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಇವರು ಆಹಾರ ಮತ್ತು ವಾಣಿಜ್ಯ ಎರಡೂ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಆದರೆ ಅತ್ಯಲ್ಪ ಭೂಮಿ ಇರುವುದರಿಂದ ಲಾಭ ಮಾತ್ರ ಶೂನ್ಯ. ಇವರು ಬೆಳೆಯುವ ಪ್ರಮುಖ ಆಹಾರ ಬೆಳೆಗಳೆಂದರೆ ಭತ್ತ, ರಾಗಿ, ಜೋಳ, ಕುಂಬಳಕಾಯಿ, ದ್ವಿದಳ ಧಾನ್ಯ ಮುಂತಾದವು. ಅಲ್ಲದೆ ತೋಟದಲ್ಲಿ ಕೆಲವು ಕಡೆ ಸಣ್ಣ ಪ್ರಮಾಣದ ಹತ್ತಿ, ಅಡಿಕೆ, ತೆಂಗು, ಮಾವು, ಏಲಕ್ಕಿ, ಲವಂಗ, ಮೆಣಸು ಮುಂತಾದವುಗಳನ್ನು ಬೆಳೆಯಲಾಗುತ್ತದೆ. ಅಂದರೆ ಸಿದ್ದಿಯರು ಆಹಾರ ಬೆಳೆಗಳ ಜೊತೆಗೆ ವಾಣಿಜ್ಯ ಬೆಳೆಗಳನ್ನು ಸಹ ಬೆಳೆಯುತ್ತಿದ್ದಾರೆ.

ಮೊದಮೊದಲು ಸಿದ್ದಿ ಸಮುದಾಯದವರು ನಾಗರಿಕ ಸಮಾಜಕ್ಕೆ ಹೆದರಿಕೊಂಡು ಅರೆ ಅಲೆಮಾರಿಗಳಾಗಿದ್ದರು. ಆಗ ಕುಮರಿ ಬೇಸಾಯವನ್ನು ಅನುಸರಿಸುತ್ತಿದ್ದರು. ಆದರೆ ಒಂದೆಡೆ ಸ್ಥಿರವಾಗಿ ನೆಲೆನಿಂತ ಮೇಲೆ ಇತ್ತೀಚೆಗೆ ರೆಂಟೆ, ಕುಂಟೆ, ಕೂರಿಗೆ ಮುಂತಾದವುಗಳನ್ನು ಬಳಸಿ ಬೇಸಾಯ ಮಾಡುತ್ತಿದ್ದಾರೆ. ಆದರೂ ಇವರ ಕೃಷಿಯನ್ನು ಗಮನಿಸುವುದಾದರೆ ತೀರಾ ಹಿಂದುಳಿದ ಪದ್ಧತಿ ಅಂದರೆ ಪರಂಪರಾನುಗತವಾಗಿ ಅನುಸರಿಸಿಕೊಂಡು ಬಂದ ಪದ್ಧತಿಯನ್ನೇ ಅನುಸರಿಸುತ್ತಿದ್ದಾರೆ. ಆದ್ದರಿಂದ ಅಲ್ಪ ಪ್ರಮಾಣದ ಭೂಮಿಯಲ್ಲಿ ಕನಿಷ್ಠ ಪ್ರಮಾಣದ ಇಳುವರಿ ದೊರೆಯುತ್ತಿದೆ. ಪ್ರಾರಂಭದಿಂದ ಇಂದಿನವರೆಗೂ ಕೃಷಿ ಇವರಿಗೆ ಅಷ್ಟಕ್ಕಷ್ಟೆ ಎನ್ನುವಂತಾಗಿದೆ. ಮೊದಲಿಗೆ ನಾಗರಿಕ ಸಮಾಜದ ಸಂಪರ್ಕವನ್ನು ಹೊಂದಲು ಹಿಂಜರಿಯುತ್ತಿದ್ದುದರಿಂದ ಬೆಳೆಗಳಿಗೆ ರಸಗೊಬ್ಬರಗಳನ್ನಾಗಲಿ ಅಥವಾ ಕ್ರಿಮಿನಾಶಕಗಳನ್ನಾಗಲಿ ಬಳಸಲು ಸಾಧ್ಯವಾಗುತ್ತಿರಲಿಲ್ಲ. ಇಂದು ಪರಿಸ್ಥಿತಿ ಸುಧಾರಿಸಿದ್ದರೂ ಅಲ್ಪ ಪ್ರಮಾಣದ ಭೂಮಿ ಇರುವುದರಿಂದ ಮತ್ತು ಬಡವರಾಗಿರುವುದರಿಂದ ಕೃಷಿಯ ನಿರ್ವಹಣೆಗೆ ಇವರ ಆರ್ಥಿಕ ಪರಿಸ್ಥಿತಿ ಅವಕಾಶ ಒದಗಿಸಿಲ್ಲ. ಅಲ್ಪ ಪ್ರಮಾಣದ ಭೂಮಿಯಿಂದ ಕಡಿಮೆ ಇಳುವರಿ ದೊರೆಯುತ್ತಿರುವುದು ಕೃಷಿಯ ನಿರಾಸಕ್ತಿಗೆ ಪ್ರಮುಖ ಕಾರಣವಾಗಿದೆ.

ಸಿದ್ದಿಯರು ಅರಣ್ಯ ಪ್ರದೇಶವನ್ನು ಅತಿಕ್ರಮಣ ಮಾಡಿಕೊಂಡು ಕೃಷಿಯನ್ನು ಅನುಸರಿಸುತ್ತಿದ್ದಾರೆ. ಸುಮಾರು ೧,೧೮೩ ಕುಟುಂಬಗಳು ತಮ್ಮ ಭೂಮಿಯನ್ನು ಅಧಿಕೃತಗೊಳಿಸಿಕೊಂಡಿವೆ. "ಆದರೆ ತೀರಾ ಇತ್ತೀಚಿನ ದಿನಗಳಲ್ಲಿ ಅಲ್ಲಲ್ಲಿ ಸಿದ್ದಿಯರಿಗೆ ಒತ್ತುವರಿ ಜಮೀನು ನೀಡುವ ಪ್ರಯತ್ನ ನಡೆದಿದೆ. ಇಂತಹ ಪ್ರಯತ್ನಕ್ಕೆ ಸ್ವತಃ ಅಲ್ಲಿನ ಇತರೆ ಭೂ ಮಾಲಿಕರಿಂದ ಮತ್ತು ಅರಣ್ಯ ಇಲಾಖೆಯ ಸಂಕುಚಿತ ದೃಷ್ಟಿಯ ಕೆಲವು ಅಧಿಕಾರಶಾಹಿಯಿಂದ ಕಲ್ಲು ಬಿದ್ದಿರುವುದೂ ಉಂಟು. ಇದರಿಂದ ನಿರ್ವಾಹವಿಲ್ಲದೆ ಅರಣ್ಯ ಇಲಾಖೆಯ ಕೆಲಸಗಳಿಗೆ ಕೂಲಿಗೆ ಹೋಗುವುದು ಸಿದ್ದಿಯರಿಗೆ ಅನಿವಾರ್ಯವಾಗಿದೆ."[೩]

### ೫.೧.೨ ಬೇಟೆ

ಆದಿ ಮಾನವನು ತನ್ನ ಮೊದಲನೆಯ ಹಂತದಲ್ಲಿ ಬೇಟೆಯಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ "ತನ್ನ ಪರಿಸರದಲ್ಲಿ ಲಭ್ಯವಿರುವ ಹಾಗೂ ತನ್ನ ಬದುಕಿಗೆ ಹಿತವೆನಿಸುವುದೆಲ್ಲವನ್ನೂ ಬಳಸಿದ. ಪರಿಸರದಲ್ಲಿಯ ಕ್ರಿಮಿ, ಕೀಟ, ಸಸ್ಯ, ಪ್ರಾಣಿ ಪಕ್ಷಿ ಏನೆಲ್ಲಾ ತನ್ನ ಹಸಿವನ್ನು ಹಿಂಗಿಸುವವೋ ಮತ್ತು ಅರೋಗ್ಯವನ್ನು ನೀಡುವವೋ ಅವೆಲ್ಲವನ್ನೂ ತಿನ್ನುತ್ತ ಅವುಗಳ ಮಹತ್ವ ಅರಿತ. ಪರಿಸರದ ಯಾವ ವಸ್ತು, ಯಾವ ಆಹಾರ ತನ್ನ ಆರೋಗ್ಯಕ್ಕೆ ಮಾರಕವೆಂಬುದನ್ನೂ ಕೂಡಾ ಕಂಡುಕೊಂಡ."[೪] ಬೇಟೆಯಾಡುವುದಕ್ಕೆ ಹಾಗೂ ತನ್ನ ರಕ್ಷಣೆಗಾಗಿ ಹಲವಾರು ಆಯುಧಗಳನ್ನು ಕಂಡುಕೊಂಡ.

ಸಿದ್ದಿಯರಿಗೆ ಕಾಡೇ ಪ್ರಪಂಚ. ನಾಗರಿಕ ಸಮಾಜದಿಂದ ದೂರವಿರುವ ಇವರು ಕಾಡಿನ ಪ್ರತಿ ಇಂಚು ಇಂಚನ್ನೂ ಬಲ್ಲವರಾಗಿದ್ದಾರೆ. ಸಮುದಾಯದವರು ಅರಣ್ಯವನ್ನು ಪ್ರವೇಶಿಸಿದಾಗ ಕೈಗೆ ದೊರೆಯುವ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಅದರಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಇವರು ನೆಲ ಮತ್ತು ಜಲ ಬೇಟೆಗಳೆರಡನ್ನೂ ಆಡುತ್ತಿದ್ದರು. ನೆಲ ಬೇಟೆ ಮತ್ತು ಜಲ ಬೇಟೆಯಾಡಬೇಕಾದರೆ ಅದಕ್ಕೆ ತಕ್ಕಂತೆ ಆಯುಧಗಳು ಮತ್ತು ತಂತ್ರಗಾರಿಕೆಯನ್ನು ಬಳಸುತ್ತಾರೆ. ಇವರು ನೆಲಬೇಟೆಗೆ ಪಿಕಾಸಿ, ಗುದ್ಲಿ, ಪಾವಡ, ಭರ್ಚಿ ಮುಂತಾದ ಆಯುಧಗಳನ್ನು ಬಳಸುತ್ತಿದ್ದರು. ಜಿಂಕೆ, ಚಿಪ್ಪು ಹಂದಿ, ಮುಳ್ಳು ಹಂದಿ, ಕಾಡು ಹಂದಿ, ಮೊಲ, ಉಡ, ಕಾಡು ಕುರಿ, ಕಾಡು ಕೋಣ ಮುಂತಾದ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುತ್ತಿದ್ದರು. ಗುಹೆಯಲ್ಲಿರುವ ಪ್ರಾಣಿಯನ್ನು ಬೇಟೆಯಾಡಬೇಕಾದರೆ ಮೊದಲು ಗುಹೆಯಲ್ಲಿ ಪ್ರಾಣಿ ಇದೆಯೇ ಎನ್ನುವುದನ್ನು ಖಾತ್ರಿಪಡಿಸಿಕೊಳ್ಳುತ್ತಿದ್ದರು. ನಂತರ ಪ್ರಾಣಿಯನ್ನು ಗುಹೆಯಿಂದ ಹೊರಬರುಂತೆ ಮಾಡಿ ಇಲ್ಲವೇ ಭರ್ಚಿಯನ್ನು ನೇರವಾಗಿ ಗುಹೆಯ ಒಳಗೆ ಇರುವ ಪ್ರಾಣಿಗೆ ಇರಿದು ಕೊಲ್ಲಲಾಗುತ್ತಿತ್ತು. ಇಲ್ಲವೆ ಚಿಕ್ಕಪುಟ್ಟ ಪ್ರಾಣಿಗಳನ್ನು ಬೇಟೆಯಾಡುವಾಗ ಕೆಲವೊಮ್ಮೆ ತಾವೇ ರಚಿಸಿದ ಕೆಲವು ಬಲೆಗಳನ್ನು ಬಳಸಿ

ಬೇಟೆಯಾಡುತ್ತಿದ್ದರು. ಪ್ರಾಣಿಗಳು ತಪ್ಪಿಸಿಕೊಂಡು ಓಡಿ ಹೋಗುವ ಪ್ರಯತ್ನ ಮಾಡಿದಾಗ ಅವುಗಳನ್ನು ಹಿಂಬಾಲಿಸಿಕೊಂಡು ಹೋಗಿ ಬೇಟೆಯಾಡುತ್ತಿದ್ದರು. ಅಲ್ಲದೆ ಕೆಲವು ಸಣ್ಣ ಪ್ರಮಾಣದ ಪ್ರಾಣಿಗಳು ಓಡಾಡುವ ಸ್ಥಳಗಳನ್ನು ಗುರುತಿಸಿ ವಿಶಿಷ್ಟ ರೀತಿಯಲ್ಲಿಯೂ ಬೇಟೆಯಾಡುತ್ತಾರೆ. ಕಾಡಿನಲ್ಲಿ ದೊರೆಯುವ ಗಟ್ಟಿಯಾದ ಕಟ್ಟಿಗೆಗಳನ್ನು ಕಡಿದುಕೊಂಡು ಬಂದು ಚೂಪಾಗಿ ಕೆತ್ತಿಕೊಳ್ಳುತ್ತಿದ್ದರು. ಪ್ರಾಣಿಗಳು ಓಡಾಡುವ ಎರಡೂ ಬದಿಗಳಲ್ಲಿ ಚೂಪಾದ ಕಟ್ಟಿಗೆಗಳನ್ನು ನೆಲದೊಳಗೆ ಸೇರುವಂತೆ ಗಟ್ಟಿಯಾಗಿ ಹೊಡೆದು ಸಿಕ್ಕಿಸುತ್ತಿದ್ದರು. ಪ್ರಾಣಿ ಓಡಾಡುವ ಮಧ್ಯದಲ್ಲಿ ಗಟ್ಟಿಯಾಗಿರುವ ತೆಳುವಾದ ಬಲೆಯನ್ನು ಹಾಕುತ್ತಿದ್ದರು. ಆಗ ದಾರಿಯಲ್ಲಿ ಬಂದ ಪ್ರಾಣಿಯು ಬಲೆಯಲ್ಲಿ ಸಿಲುಕಿಕೊಳ್ಳುತ್ತಿತ್ತು. ಹೀಗೆ ಹಲವಾರು ರೀತಿಯಲ್ಲಿ ಬೇಟೆಯನ್ನಾಡುತ್ತಿದ್ದರು. ಆದರೆ ಇಂದು ಬೇಟೆಗೆ ಅವಕಾಶವಿಲ್ಲದಿರುವುದರಿಂದ ಈ ವ್ಯವಸ್ಥೆ ಕಂಡುಬರುತ್ತಿಲ್ಲ. ಮೀನು, ಏಡಿ, ಆಮೆ ಮುಂತಾದವುಗಳನ್ನು ಬೇಟೆಯಾಡುತ್ತಾರೆ. ಮೀನು ಹಿಡಿಯಲು ಬಲೆಯನ್ನು ಬಳಸಿ ಮೀನು ಹಿಡಿಯಲಾಗುತ್ತದೆ. ಅಲ್ಲದೆ ಬುಟ್ಟಿ ಮತ್ತು ಗುಡುವಾಗಳ ಸಹಾಯದಿಂದಲೂ ಸಹ ಜಲಬೇಟೆಯಾಡುತ್ತಾರೆ. ಜಲಬೇಟೆಯನ್ನು ಇಂದಿಗೂ ಅನುಸರಿಸುತ್ತಿದ್ದಾರೆ. ಆದರೆ ನೆಲಬೇಟೆಯನ್ನು ಸರ್ಕಾರ ಹಾಗೂ ಅರಣ್ಯ ಇಲಾಖೆಗಳು ನಿಷೇಧಿಸಿರುವುದರಿಂದ ನೆಲಬೇಟೆ ಪದ್ಧತಿ ಇತ್ತೀಚೆಗೆ ಕಂಡುಬರುತ್ತಿಲ್ಲ.

**೫.೧.೩ ಆಹಾರ ಸಂಗ್ರಹಣೆ**

ಭೂಮಿಯ ಮೇಲೆ ಮಾನವ ಜನ್ಮ ತಾಳಿದಾಗ ಸಂಪತ್ತಿನ ಉಳಿತಾಯ ಅಥವಾ ಗಳಿಕೆಗೆ ಆದ್ಯತೆಯನ್ನು ನೀಡುತ್ತಿದ್ದಿಲ್ಲ. ಅಂದಿನ ದಿನದ ಆಹಾರವನ್ನು ಅಂದೇ ಸಂಪಾದಿಸಿಕೊಂಡು ತಿನ್ನುತ್ತಿದ್ದ. ಮಾನವ ಯಾವಾಗ ಒಂದೆಡೆ ಸೇರಿ ಗುಂಪು ಜೀವನವನ್ನು ಆರಂಭಿಸಿದನೋ, ಅಂದಿನಿಂದ ಅವನ ಜೀವನದ ಚಿತ್ರಣವೇ ಬದಲಾಯಿತು. ಸಮುದಾಯದವರೆಲ್ಲರೂ ಒಟ್ಟಾಗಿ ದುಡಿಯಲು ಪ್ರಾರಂಭಿಸಿದರು. ಆಗ ಸಂಪತ್ತಿನ ಉಳಿತಾಯವಾಗುತ್ತಾ ಹೋಯಿತು. ಸಮುದಾಯ ಬಳಸಿ ಉಳಿದ ಸಂಪತ್ತನ್ನು 'ಮಿಗುತಾಯ' ಎಂದು ಕರೆಯಲಾಗುತ್ತದೆ. ಈ ಮಿಗುತಾಯ ವ್ಯವಸ್ಥೆ ಬಂದ ನಂತರ ಮಾನವನಿಗೆ ಉಳಿತಾಯ ಅಥವಾ ಸಂಗ್ರಹದ ಕಲ್ಪನೆ ಬಂದಿರಬೇಕು. ನಂತರದ ದಿನಗಳಲ್ಲಿ ಸಮುದಾಯಗಳು ಸಂಪತ್ತಿನ ಅಥವಾ ಆಹಾರ ಸಂಗ್ರಹಣೆಯ ಕಡೆಗೆ ಗಮನಹರಿಸಿದವು.

ಮೊದಲೇ ತಿಳಿಸಿದಂತೆ ಸಿದ್ದಿಯರಿಗೆ ಒಂದು ದಿನದ ಊಟಕ್ಕಿದ್ದರೂ ದುಡಿಯಲು ಹೋಗುವುದಿಲ್ಲ. ಅಂದರೆ ಇವರಿಗೆ ನಾಳೆಯ ಬಗೆಗೆ ಚಿಂತೆಯಿಲ್ಲ. ದುಡಿಯಬೇಕು, ಗಳಿಸಬೇಕು ಎನ್ನುವ ಮನೋಭಾವನೆ ಇರಲಿಲ್ಲ. ಅಂದಿನ ಆಹಾರ ಅಂದಿನ ದಿನವೇ ಸಂಪಾದಿಸಿಕೊಳ್ಳುವುದು ಹೆಚ್ಚಾಗಿ ಕಂಡುಬರುತ್ತಿತ್ತು. ಇಂದಿಗೂ ಈ ವ್ಯವಸ್ಥೆ ಇದೆ

ಎನ್ನುವುದಾದರೂ ಬದಲಾವಣೆ ಪ್ರಮುಖವಾಗಿ ಕಂಡುಬರುತ್ತಿದೆ. ನಾಳಿನ ಬಗೆಗೆ ಚಿಂತಿಸುವ ಮತ್ತು ಗಳಿಕೆಯ ಕಡೆ ತಮ್ಮ ಗಮನವನ್ನು ಕೇಂದ್ರೀಕರಿಸುತ್ತಿದ್ದಾರೆ. ಆಹಾರ ಸಂಗ್ರಹಣೆ ಮಾಡಿಕೊಳ್ಳುತ್ತಿರುವುದು ಪ್ರಮುಖವಾಗಿ ತಿಳಿದುಬರುತ್ತದೆ. ಅಕ್ಕಿ, ಜೋಳ, ರಾಗಿ, ಬೆಲ್ಲ, ಗಿಡಮೂಲಿಕೆಗಳು, ಜೇನು ಮುಂತಾದ ಆಹಾರ ಪದಾರ್ಥಗಳನ್ನು ತಮ್ಮ ಶಕ್ತಾನುಸಾರ ಸಂಗ್ರಹ ಮಾಡಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಮಳೆಗಾಲ ಸಮೀಪಿಸುವ ಮುನ್ನ ಸಂಡಿಗೆ, ಹಪ್ಪಳ, ಶ್ಯಾವಿಗೆ, ಉರುವಲುಗಳನ್ನು ಸಂಗ್ರಹಿಸಿಕೊಳ್ಳುವುದನ್ನು ಕಾಣುತ್ತೇವೆ. ಜೊತೆಗೆ ಕಾಡಿನಲ್ಲಿ ದೊರೆಯುವ ಜೇನು, ಹುಣಸೆಹಣ್ಣು, ಮಾವು, ಗಿಡಮೂಲಿಕೆಗಳನ್ನು ಸಂಗ್ರಹ ಮಾಡಿಕೊಳ್ಳುತ್ತಿರುವುದು ತಿಳಿದುಬರುತ್ತದೆ. ಅರಣ್ಯದಲ್ಲಿ ಹೇರಳವಾಗಿ ದೊರೆಯುವ ಪದಾರ್ಥಗಳನ್ನು ಅಷ್ಟೊಂದಾಗಿ ಸಂಗ್ರಹಿಸದಿರುವುದು ಸಹ ಕೆಲವು ಕಡೆ ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಆಹಾರ ಪದಾರ್ಥಗಳನ್ನು ಸಂಗ್ರಹಿಸಿಕೊಳ್ಳುತ್ತಿದ್ದಾರೆ ಜೊತೆಗೆ ಇತರೆ ಸಮುದಾಯದವರನ್ನು ಗಮನಿಸಿ ಅವರಂತೆ ತಾವೂ ಬದುಕಬೇಕು ಎನ್ನುವ ಮನೋಭಾವನೆಯನ್ನು ಹೊಂದುತ್ತಿದ್ದಾರೆ. ಅದರ ಫಲವಾಗಿ ಹೆಚ್ಚು ಹೆಚ್ಚು ದುಡಿಮೆ ಮಾಡಿ ಆಹಾರ ಮತ್ತು ಸಂಪತ್ತನ್ನು ಸಂಗ್ರಹಿಸುವುದರ ಕಡೆಗೆ ನಿಧಾನವಾದ ಹೆಜ್ಜೆಯನ್ನಿಡುತ್ತಿದ್ದಾರೆ.

**೫.೧.೪. ಅರಣ್ಯದ ಕಿರು ಉತ್ಪನ್ನಗಳ ಸಂಗ್ರಹ**

ಅರಣ್ಯವು ಹಲವಾರು ಸಂಪನ್ಮೂಲಗಳ ಆಗರ. ಈ ಸಂಪನ್ಮೂಲ ಮಾನವ ನಿರ್ಮಿತವಲ್ಲ. ಇದು ನಿಸರ್ಗದ ಕೊಡುಗೆಯಾಗಿದೆ. ಅರಣ್ಯವು ಬುಡಕಟ್ಟು ಸಮುದಾಯಗಲನ್ನಲ್ಲದೆ ಹಲವಾರು ಪ್ರಬೇಧದ ಪ್ರಾಣಿ–ಪಕ್ಷಿಗಳಿಗೆ ಆಶ್ರಯ ತಾಣ. ಬುಡಕಟ್ಟು ಸಮುದಾಯಗಳು ಅರಣ್ಯವನ್ನೇ ಅವಲಂಬಿಸಿ ಜೀವನ ನಿರ್ವಹಿಸುತ್ತಿದ್ದವು. ಆದರೆ ಇಂದು ಸಂಪೂರ್ಣವಾಗಿ ಅರಣ್ಯವನ್ನೇ ನೆಚ್ಚಿಕೊಂಡು ಜೀವನ ಮಾಡುವ ಪರಿಸ್ಥಿತಿಯಲ್ಲಿ ಬುಡಕಟ್ಟು ಸಮುದಾಯಗಳಿಲ್ಲ. ಅದಕ್ಕೆ ಹಲವಾರು ಕಾರಣಗಳಿವೆ. ಮೊದಲಿಗೆ ಬುಡಕಟ್ಟು ಸಮುದಾಯಗಳು ಇತರ ಸಮುದಾಯಗಳನ್ನು ಅವಲಂಬಿಸದೆ ಸ್ವಯಂ ಪರಿಪೂರ್ಣವಾದ ಜೀವನವನ್ನು ನಿರ್ವಹಿಸುತ್ತಿದ್ದವು. ಕಾಡಿನಲ್ಲಿ ದೊರೆಯುವ ಮೂಲಗಳನ್ನು ಬಳಸಿಕೊಂಡು ತಮ್ಮ ಅವಶ್ಯಕತೆಗಳನ್ನು ತಾವೇ ಪೂರೈಸಿಕೊಳ್ಳುತ್ತಿದ್ದವು. ಆದರೆ ಕಾನೂನು ವ್ಯವಸ್ಥೆ, ಅರಣ್ಯ ಕಾಯ್ದೆಗಳು, ಕೈಗಾರೀಕರಣ ಮತ್ತು ಇನ್ನಿತರ ಆಧುನಿಕತೆಯ ನೋಟಗಳು ಬುಡಕಟ್ಟು ಸಮುದಾಯಗಳನ್ನು ಪರಾವಲಂಬಿಯಾಗುವಂತೆ ಮಾಡಿವೆ.

ಸಿದ್ದಿಯರು ಅರಣ್ಯವಾಸಿಗಳಾಗಿರುವುದರಿಂದ ಕಾಡಿನಲ್ಲಿ ದೊರೆಯುವ ವಸ್ತುಗಳಿಂದ ತಮ್ಮ ಅವಶ್ಯಕತೆಯನ್ನು ಪೂರೈಸಿಕೊಳ್ಳುತ್ತಿದ್ದರು. ಇವರು ನಾಗರಿಕ ಸಮಾಜದೊಂದಿಗೆ ಸಂಪರ್ಕ ಬೆಸೆಯುವವರೆಗೆ ಅರಣ್ಯ ಉತ್ಪನ್ನದಿಂದಲೇ ಜೀವನ ನಡೆಸುತ್ತಿದ್ದರು. ಇವರು

ನಾಗರಿಕ ಸಮಾಜದಿಂದ ಹಿಂಸೆಗೆ ಒಳಗಾಗಿ ಅರಣ್ಯ ಪ್ರವೇಶಿಸಿರುವುದರಿಂದ ಮೊದಲಿಗ ಕಾಡಿನ ಕಿರು ಉತ್ಪನ್ನಗಳನ್ನು ಹೊರಗೆ ತಂದು ಮಾರಾಟ ಮಾಡುತ್ತಿರಲಿಲ್ಲ. ಇಂದಿಗೂ ಸಹ ಈ ವ್ಯವಸ್ಥೆಯನ್ನು ಅಷ್ಟೊಂದಾಗಿ ಅವಲಂಬಿಸಿಲ್ಲ. ಕಾರಣ ಮೊದಲಿನಿಂದಲೂ ನಾಗರಿಕ ಸಮಾಜದವರನ್ನು ಕಂಡರೆ ಹೆದರಿಕೆ ಮತ್ತು ಭೂ ಮಾಲಿಕರ ತೋಟಗಳಲ್ಲಿ ಕೂಲಿ ಕೆಲಸ ದೊರೆತಿರುವುದು ಇದಕ್ಕೆ ಮುಖ್ಯ ಕಾರಣವಾಗಿದೆ. ಕೆಲವು ಕಡೆ ಸಿದ್ದಿಯರು ಕಾಡಿನ ಕಿರು ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುತ್ತಿದ್ದಾರೆ. ಕಾಡಿನಲ್ಲಿ ದೊರೆಯಬಹುದಾದ ಮೆಣಸು, ಗಿಡಮೂಲಿಕೆಗಳು, ಹಣ್ಣುಗಳು, ಅಂಟುವಾಳ, ಸೀಗೆಕಾಯಿ, ಹುಣಸೆ, ಜೇನು ಮುಂತಾದವುಗಳನ್ನು ಮಾರಾಟ ಮಾಡಿ ಜೀವನ ನಿರ್ವಹಿಸುತ್ತಿರುವುದು ತಿಳಿಯುತ್ತದೆ. ಸಿದ್ದಿಯರು ಜೇನು ಕೀಳುವುದರಲ್ಲಿ ಸಿದ್ಧಹಸ್ತರು. ಜೇನು ಹುಳುಗಳನ್ನು ಸಾಯಿಸದೇ ಹಲವಾರು ತಂತ್ರಗಾರಿಕೆಯನ್ನು ಬಳಸಿ ಅದನ್ನು ಕೀಳುತ್ತಾರೆ. ಜೇನು ಹುಳುಗಳನ್ನು ಸಾಯಿಸಿದರೆ ಅವುಗಳು ಮತ್ತೆ ಗೂಡು ಕಟ್ಟುವುದಿಲ್ಲ, ಮತ್ತು ಮತ್ತೊಮ್ಮೆ ಜೇನು ದೊರೆಯುವುದಿಲ್ಲ ಎನ್ನುವುದು ಒಂದು ಕಾರಣವಾದರೆ, ಜೇನುಗಳು ಕೂಡಾ ಜೀವಿಗಳು, ಅವುಗಳು ಸಹ ಬದುಕಲಿ ಎನ್ನುವ ಉದ್ದೇಶ ಇದರಲ್ಲಿ ಅಡಕವಾಗಿರುವುದು ಮತ್ತೊಂದು ಕಾರಣ. ಎಷ್ಟೇ ದೊಡ್ಡದಾದ ಜೇನುಗೂಡು ಇದ್ದರೂ ಅದನ್ನು ಬಿಡಿಸುವುದರಲ್ಲಿ ನಿಸ್ಸೀಮರು. ಆದರೆ ಇದೆಲ್ಲದಕ್ಕಿಂತ ಕೂಲಿಯೊಂದೇ ಇವರಿಗೆ ಜೀವನಕ್ಕೆ ಮುಖ್ಯ ಆಧಾರವಾಗಿದೆ. ಮೊದಲಿಗೆ ಮನೆಯಲ್ಲಿ ಒಂದು ಇದ್ದರೆ ಇನ್ನೊಂದು ಇರುತ್ತಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕಾಡಿನ ಉತ್ಪನ್ನಗಳನ್ನು ಅಥವಾ ಕಾಡಿನಲ್ಲಿ ದೊರೆಯುವ ಆಹಾರ ಪದಾರ್ಥಗಳನ್ನು ಬಳಸಿಕೊಂಡೆ ಜೀವನ ನಿರ್ವಹಿಸುತ್ತಿದ್ದರು.

ಇತ್ತೀಚೆಗೆ ಲ್ಯಾಂಪ್ಸ್ ಸೊಸೈಟಿಗಳ ಪ್ರಾರಂಭದಿಂದಾಗಿ ಗಿರಿಜನರ ಆರ್ಥಿಕತೆಯಲ್ಲಿ ಸ್ವಲ್ಪ ಮಟ್ಟಿನ ಸುಧಾರಣೆ ಕಂಡುಬರುತ್ತಿದೆ. ಅರಣ್ಯದಲ್ಲಿ ದೊರೆಯುವ ಕಿರು ಉತ್ಪನ್ನಗಳನ್ನು ಸಂಗ್ರಹಿಸಿ ಒಟ್ಟಾಗಿ ಲ್ಯಾಂಪ್ಸ್ ಸೊಸೈಟಿಯ ಮುಖಾಂತರ ಮಾರಾಟ ಮಾಡಲಾಗುತ್ತಿದೆ. ಇದರಿಂದಾಗಿ ಮಧ್ಯವರ್ತಿಗಳ ಶೋಷಣೆ ತಪ್ಪಿದಂತಾಗಿದೆ. ಅಲ್ಲದೆ ಈ ಲ್ಯಾಂಪ್ಸ್ ಸೊಸೈಟಿಗಳಲ್ಲಿ ಸಮುದಾಯದವರೇ ಅಧ್ಯಕ್ಷರಾಗಿರುತ್ತಾರೆ. ಸಮುದಾಯದಿಂದ ಯಾರು ಎಷ್ಟು ಪ್ರಮಾಣದ ಮತ್ತು ಯಾವ ಬಗೆಯ ಉತ್ಪನ್ನವನ್ನು ಸಂಗ್ರಹಿಸಿಕೊಂಡು ತರುತ್ತಾರೆನ್ನುವುದನ್ನು ದಾಖಲು ಮಾಡಿಕೊಳ್ಳಲಾಗುತ್ತದೆ. ನಂತರ ಉತ್ತಮ ಬೆಲೆ ಬಂದಾಗ ಸೂಕ್ತ ಸಮಯವನ್ನು ನೋಡಿ ಮಾರಾಟ ಮಾಡಲಾಗುತ್ತದೆ. ಸಮುದಾಯದ ವ್ಯಕ್ತಿಗಳು ಒದಗಿಸಿರುವ ಪ್ರಮಾಣ ಮತ್ತು ದೊರೆತಿರುವ ಬೆಲೆಯ ಆಧಾರದ ಮೇಲೆ ಸಮಾನವಾಗಿ ಹಣವನ್ನು ಹಂಚಿಕೆ ಮಾಡಲಾಗುತ್ತದೆ. ಮೊದಲು ಮಧ್ಯವರ್ತಿಗಳು ಇವರಿಂದ ಕಿರು ಉತ್ಪನ್ನಗಳನ್ನು ಅಗ್ಗದ ಧರಕ್ಕೆ ಕೊಂಡುಕೊಂಡು ವಂಚಿಸುತ್ತಿದ್ದರು. ಇಂದು ಲ್ಯಾಂಪ್ಸ್ ಸೊಸೈಟಿಗಳ ಆಗಮನದಿಂದ ಈ

ವ್ಯವಸ್ಥೆ ಮಾಯವಾಗಿದೆ. ಜೊತೆಗೆ ಮಾರುಕಟ್ಟೆಯಲ್ಲಿನ ಬೆಲೆಯೂ ನೇರವಾಗಿ ಇವರಿಗೆ ದೊರೆಯುವಂತಾಗಿದೆ. ಇದರಿಂದಾಗಿ ಅಲ್ಪ ಪ್ರಮಾಣದ ಆರ್ಥಿಕ ಚೇತರಿಕೆಗೆ ಸಹಕಾರಿಯಾಗಿದೆ.

**೫.೪.೫ ಇತರೆ ಕಸುಬುಗಳು**

ಮಾನವನ ಜೀವನಕ್ಕೆ ವೃತ್ತಿಯೇ ಆಧಾರ. ಮಾನವ ಸೃಷ್ಟಿಯಾದಾಗಿನಿಂದ ಇಂದಿನವರೆಗೂ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುವುದರ ಸಲುವಾಗಿ ಒಂದಲ್ಲಾ ಒಂದು ಬಗೆಯ ಕಾಯಕದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾ ಬಂದಿದ್ದಾನೆ. ಈ ರೀತಿಯಾಗಿ ಹೊಟ್ಟೆ ತುಂಬಿಸಿಕೊಳ್ಳಲು ಅನುಸರಿಸಿದ ವೃತ್ತಿಗಳು ಮುಂದೆ ಕುಲಕಸುಬುಗಳಾಗಿ ವರ್ಗ ವ್ಯವಸ್ಥೆ ಸೃಷ್ಟಿಯಾಗುವುದಕ್ಕೂ ಕಾರಣವಾಗಿದೆ. ಆದರೆ ಸಿದ್ದಿಯರು ತಮ್ಮದೇ ಆದ ವಿಶಿಷ್ಟ ಕುಲಕಸುಬನ್ನು ಹೊಂದಿಲ್ಲ. ಸಿದ್ದಿಯರ ಹೆಚ್ಚಿನ ಸಂಖ್ಯೆಯ ಜನರು ಕೂಲಿಯನ್ನು ನೆಚ್ಚಿಕೊಂಡು ಜೀವನ ಮಾಡುತ್ತಿದ್ದಾರೆ. ಜೊತೆಗೆ ಕೆಲವರು ಕೂಲಿ ಜೊತೆಗೆ ಸಣ್ಣ ಪ್ರಮಾಣದ ಕೃಷಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಅಲ್ಲದೆ ಸಮುದಾಯದ ಕೆಲವರು ವಿವಿಧ ವೃತ್ತಿಯಲ್ಲಿ ತೊಡಗಿಕೊಳ್ಳುತ್ತಿದ್ದಾರೆ. ಕೂಲಿ ಮತ್ತು ಕೃಷಿಯನ್ನು ಬಿಟ್ಟು ಇತರೆ ವೃತ್ತಿಯಲ್ಲಿ ತೊಡಗುತ್ತಿರುವವರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ಮಾತ್ರ. ವಾಹನ ಚಾಲಕರಾಗಿ, ಬುಟ್ಟಿ ಹೆಣೆಯುವುದು ಮತ್ತು ಮಾರುವುದು, ಸಣ್ಣ ಪ್ರಮಾಣದ ಬೀಡಾ ಅಂಗಡಿಗಳ ಮುಖಾಂತರ ವ್ಯಾಪಾರ, ನಾಟಕದಲ್ಲಿ ಪಾತ್ರ ಮಾಡುವುದು, ಸೈನ್ಯ, ಪೊಲೀಸ್, ಸರ್ಕಾರೇತರ ಸ್ವಯಂ ಸೇವಾ ಸಂಘಗಳಲ್ಲಿ ಕಾರ್ಯಕರ್ತರಾಗಿ, ಕಾವಲುಗಾರರಾಗಿ ಹೀಗೆ ವಿವಿಧ ವೃತ್ತಿಗಳನ್ನು ಅನುಸರಿಸುವವರು ಕಂಡುಬರುತ್ತಿದ್ದಾರೆ.

ಪ್ರೊ. ಲಕ್ಷ್ಮಣ್ ತೆಲಗಾವಿಯವರ ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು ಎನ್ನುವ ಕೃತಿಯು ಸಿದ್ದಿಯರ ಬಗೆಗೆ ಒಂದು ಮಾಹಿತಿಯನ್ನು ಒದಗಿಸುತ್ತದೆ. ೧೯೮೮ ರಲ್ಲಿ ಸರ್ಕಾರಿ ಸೇವೆಯಲ್ಲಿದ್ದ ೧, ೨ ಮತ್ತು ೩ ನೇ ದರ್ಜೆಯ ನೌಕರರ ಜಾತಿವಾರು ಪ್ರಾತಿನಿಧ್ಯವನ್ನು ತಿಳಿಸುತ್ತದೆ. ಈ ಕೃತಿಯ ೬೮ ನೇಯ ಪುಟದಲ್ಲಿ ಸಿದ್ದಿಯ ಒಬ್ಬ ವ್ಯಕ್ತಿ ಮಾತ್ರ ಮೂರನೇ ದರ್ಜೆಯ ನೌಕರನಾಗಿ ಕಾರ್ಯನಿರ್ವಹಿಸುತ್ತಿರುವುದರ ಬಗೆಗೆ ಮಾಹಿತಿಯನ್ನು ಒದಗಿಸುತ್ತದೆ. ಇಂದಿಗೂ ಸಮುದಾಯದಲ್ಲಿ ಇದೇ ಪರಿಸ್ಥಿತಿ ಮುಂದುವರೆದಿರುವುದು ವಿಪರ್ಯಾಸವೇ ಸರಿ.

ಕೂಲಿ ಮತ್ತು ಕೃಷಿಯ ನಂತರ ವಾಹನ ಚಾಲಕರಾಗಿ ಕಾರ್ಯನಿರ್ಹಿಸುತ್ತಿರುವವರು ಹೆಚ್ಚಾಗಿ ಕಂಡುಬರುತ್ತಾರೆ. ಇವರಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುವುದರಿಂದ ಸರ್ಕಾರಿ ಉದ್ಯೋಗದಲ್ಲಿ ಬೆರಳೆಣಿಕೆಯಷ್ಟು ಜನ ಮಾತ್ರ ಕಂಡುಬರುತ್ತಾರೆ ಅದೂ ಸರ್ಕಾರದ 'ಡಿ'

ದರ್ಜೆಯ ನೌಕರರಾಗಿ. ಎಂಟು ಜನರು ಸರ್ಕಾರಿ ಹುದ್ದೆಯ ಜವಾನರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ನಾಲ್ಕು ಜನ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದರೆ. ಒಬ್ಬರು ಮಾತ್ರ ಪೋಲೀಸರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಮೂರು ಜನ ಕ್ರಿಶ್ಚಿಯನ್ ಸಿದ್ದಿಯರು ಚರ್ಚ್‌ನ ಪಾದ್ರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅರಣ್ಯದಲ್ಲಿ ದೊರೆಯುವ ಬಿದಿರು ಮತ್ತು ಬೆತ್ತಗಳಿಂದ ಬುಟ್ಟಿ ಮತ್ತಿತರ ವಸ್ತುಗಳನ್ನು ತಯಾರಿಸಿ ಕಾರ್ಯನಿರ್ವಹಿಸುವವರು ಏಳು ಜನ ಮಾತ್ರ ಕಂಡುಬರುತ್ತಾರೆ. ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಕಾರ್ಯಕರ್ತರಾಗಿ ಇಪ್ಪತ್ತೈದು ಜನ ಕಾರ್ಯನಿರ್ವಹಿಸುತ್ತಿದ್ದಾರೆ. ಸುಮಾರು ಹನ್ನೆರಡು ಜನ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಅಂದರೆ ಇವರಲ್ಲಿ ಜೀತ ಪದ್ಧತಿ ಇನ್ನೂ ಜೀವಂತವಾಗಿರುವುದು ತಿಳಿದು ಬರುತ್ತದೆ.

ಒಟ್ಟಾರೆಯಾಗಿ ಸಮುದಾಯದವರು ಅನುಸರಿಸುವ ವೃತ್ತಿಗಳು ಮತ್ತು ಅದರಲ್ಲಿ ತೊಡಗಿಕೊಂಡಿರುವವರ ವಿವರವನ್ನು ಈ ಕೆಳಗಿನಂತೆ ತಿಳಿಯಬಹುದು.

| **ಕ್ರ.ಸಂ.** | **ಉದ್ಯೋಗ** | **ಅನುಸರಿಸುವವರು (ಸಂಖ್ಯೆಗಳಲ್ಲಿ)** |
|---|---|---|
| ೧ | ಕೂಲಿ | ೪,೩೩೦ |
| ೨ | ಕೃಷಿ | ೬೬೧ |
| ೩ | ಡ್ರೈವರ್ | ೨೭ |
| ೪ | ಸರ್ಕಾರಿ ಜವಾನ | ೮ |
| ೫ | ಸೈನಿಕ | ೪ |
| ೬ | ಪೋಲೀಸ್ | ೧ |
| ೭ | ಬುಟ್ಟಿ ಹೆಣೆಯುವುದು | ೭ |
| ೮ | ಎನ್.ಜಿ.ಓ. ಕಾರ್ಯಕರ್ತ | ೨೫ |
| ೯ | ಸಣ್ಣ ಪ್ರಮಾಣದ ವ್ಯಾಪಾರ (ಪಾನ್‌ಬೀಡಾ) | ೫ |
| ೧೦ | ಸಮಾಜ ಸೇವೆ | ೧೦ |
| ೧೧ | ಪಾದ್ರಿ | ೩ |
| ೧೨ | ಗುಂಡಿ ತೆಗೆಯುವ ಕೆಲಸ | ೩ |
| ೧೩ | ಜೀತದಾಳು | ೧೨ |
| ೧೪ | ಮೆಕ್ಯಾನಿಕ್ | ೨ |
| ೧೫ | ಮೇಸ್ತ್ರಿ | ೧ |
| ೧೬ | ಟೈಲರ್ | ೨ |

### ೫.೨ ಪಾರಂಪರಿಕ ಕಸುಬುದಾರರ ಸ್ಥಿತಿ-ಗತಿಗಳು

"ಭಾರತದ ಸಮಾಜದಲ್ಲಿ ಅತ್ಯಂತ ಪ್ರಾಚೀನ ಒಳಪಂಗಡ ಎಂದರೆ ಆದಿವಾಸಿ ಸಮೂಹ. ಮಾನವಶಾಸ್ತ್ರಜ್ಞರು ಭಾರತದ ಆದಿವಾಸಿಗಳ ಸಮೂಹವನ್ನು ಮೂರು ಕವಲುಗಳಲ್ಲಿ ಗುರುತಿಸುತ್ತಾರೆ. ಮೊದಲನೆಯದು ನೀಗ್ರೋ, ಎರಡನೆಯದು ಪ್ರೋಟೋ ಆಸ್ಟ್ರಲಾಯ್ಡ್ ಮತ್ತು ಮೂರನೆಯದು ಮಂಗೋಲಾಯ್ಡ್. ನೀಗ್ರೋ ಜನಾಂಗಕ್ಕೆ ಸೇರಿದ ಬುಡಕಟ್ಟುಗಳು ಲಕ್ಷದ್ವೀಪ, ಅಂಡಮಾನ್, ಭಾರತದ ಪಶ್ಚಿಮ ತೀರ, ಕರಾವಳಿ ಪ್ರಾಂತ್ಯಗಳಲ್ಲಿವೆ."[3] ಪ್ರಾಚೀನ ಆದಿವಾಸಿ ಸಮುದಾಯವಾದ ನೀಗ್ರೋಗಳು ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡುಬರುತ್ತಿದ್ದಾರೆ. ಇವರು ಬಡತನದ ಬೇಗೆಯಲ್ಲಿ ಬೇಯುತ್ತಿದ್ದಾರೆ. ಅವರ ಬದುಕಿನ ಹಿನ್ನೆಲೆಯನ್ನು ಈಗಾಗಲೇ ತಿಳಿದಂತೆ ಸಮುದಾಯದ ಬಹುತೇಕರು ಬಡತನ ರೇಖೆಗಿಂತಲೂ ಕೆಳಗಿನ ಜೀವನವನ್ನು ಅನುಸರಿಸುತ್ತಿರುವುದು ತಿಳಿಯುತ್ತದೆ. ದಾಸ್ಯದಿಂದ ಮುಕ್ತರಾದರೂ ಸಹ ಇಂದಿಗೂ ಸ್ವತಂತ್ರ ನೆಲೆಯನ್ನು ಕಂಡುಕೊಳ್ಳುವುದಕ್ಕೆ ಸಾಧ್ಯವಾಗುತ್ತಿಲ್ಲ.

ಅಂದು ಅನ್ಯ ಸಮುದಾಯಗಳು ಇವರನ್ನು ಬಲವಂತವಾಗಿ ಗುಲಾಮರನ್ನಾಗಿ ಮಾಡಿದರು. ಆದರೆ ಇಂದು ಆಧುನಿಕತೆಯು ಸ್ವತಃ ಇವರೇ ಗುಲಾಮರಾಗಿ ಅಥವಾ ಜೀತದಾಳುಗಳಾಗಿ ದುಡಿಯುವಂತೆ ಮಾಡುತ್ತಿದೆ. ಸಮುದಾಯದವರಲ್ಲಿ ಕೂಲಿಯ ಜೊತೆಗೆ ಜೀತ ಪದ್ಧತಿಯೂ ಪ್ರಮುಖವಾಗಿ ಕಂಡುಬರುತ್ತಿದೆ. ಒಂದು ಸಮುದಾಯವು ಜೀತ ಪದ್ಧತಿಯನ್ನು ಅನುಸರಿಸುತ್ತಿದೆ ಎಂದರೆ ಅವರ ಆರ್ಥಿಕ ಸ್ಥಿತಿಗತಿ ಯಾವ ರೀತಿಯದೆಂದು ಅರ್ಥೈಸಬಹುದು.

#### ೫.೨.೧ ಕೃಷಿ

ಮಾನವನು ತನ್ನ ಉಪಜೀವನಕ್ಕಾಗಿ ಮೊದಲಿಗೆ ಬೇಟೆಯನ್ನವಲಂಬಿಸಿದ್ದು. ನಂತರ ಸಾದು ಪ್ರಾಣಿಗಳನ್ನು ಸಾಕಿಕೊಳ್ಳುತ್ತಾ, ಪಶುಪಾಲನೆಯ ಹಂತವನ್ನು ರೂಡಿಸಿಕೊಂಡನು. ಪಶುಪಾಲನೆಯ ನಂತರ ನಿಧಾನವಾಗಿ ಕೃಷಿಯನ್ನು ಅವಲಂಬಿಸಿದನು. ಮೊದಲಿಗೆ ಮಾನವನು ಏಕಾಏಕಿ ಉತ್ತಮವಾದ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳಲಿಲ್ಲ. ಬದಲಿಗೆ ತಾನು ವಾಸಿಸುವ ಕಾಡಿನ ಸುತ್ತಮುತ್ತಲಿನ ಬಯಲು ಪ್ರದೇಶದಲ್ಲಿ ಕುಮರಿ ಬೇಸಾಯವನ್ನು ಅನುಸರಿಸುತ್ತಿದ್ದ. ಈ ಕುಮರಿ ಬೇಸಾಯದಲ್ಲಿ ಯಾವುದೇ ಯಂತ್ರ ಮತ್ತು ಪ್ರಾಣಿಗಳ ಸಹಾಯವಿಲ್ಲದೆ ಭೂಮಿಯನ್ನು ಹದಗೊಳಿಸಿ ಬಿತ್ತನೆ ಮಾಡುತ್ತಿದ್ದ. ಮೊದಲಿಗೆ ಮಾನವನು ಅಲೆಮಾರಿಯಾಗಿದ್ದರಿಂದ ಬೆಳೆಯನ್ನು ತೆಗೆದ ನಂತರ ತನಗೆ ಹಿತವೆನಿಸುವ ಪ್ರದೇಶಕ್ಕೆ ಹೋಗಿ ವಾಸವಾಗುತ್ತಿದ್ದ. ಹೀಗೆ ಒಂದು ಕಡೆಯಿಂದ ಮತ್ತೊಂದು ಕಡೆ ಅಲೆಮಾರಿಯಾಗಿ ತಿರುಗುವ ಸ್ವಭಾವವನ್ನು ಹೊಂದಿದ್ದರಿಂದ ಸಣ್ಣ ಪ್ರಮಾಣದ ಕೃಷಿಯನ್ನವಲಂಬಿಸಿದ್ದ. ಆದರೆ ಯಾವಾಗ

ಸ್ಥಿರವಾಗಿ ಒಂದೆಡೆ ನೆಲೆಸುವುದನ್ನು ರೂಢಿಸಿಕೊಂಡರೋ, ಆಗ ಕೃಷಿ ಪದ್ಧತಿ ಬೆಳೆದುಕೊಂಡು ಬಂದಿತು. ನಿಧಾನವಾಗಿ ಸುಧಾರಿತ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳುತ್ತಾ ಬಂದಂತೆಲ್ಲಾ ಸಮುದಾಯಗಳ ಆರ್ಥಿಕ ವ್ಯವಸ್ಥೆ ಸುಧಾರಣೆಯನ್ನು ಹೊಂದಿದವು.

ಸಿದ್ದಿಯರ ಸಾಮಾಜಿಕ ಮತ್ತು ಆರ್ಥಿಕ ಜೀವನ ತುಂಬಾ ಶೋಚನೀಯವಾಗಿದೆ. ಅನ್ಯ ಸಮುದಾಯಗಳು ಇವರನ್ನು ಕೀಳಾಗಿ ನೋಡುತ್ತಾರೆ. ಸಿದ್ದಿಯರನ್ನು ಕೀಳಾಗಿ ಕಾಣಲು ಇವರು ಗುಲಾಮರು ಅಥವಾ ದಾಸ್ಯದಿಂದ ತಪ್ಪಿಸಿಕೊಂಡು ಬಂದವರು ಎನ್ನುವುದೇ ಮೂಲ ಕಾರಣವಾಗಿರಬಹುದು. ಕಾಡಿನಲ್ಲಿ ಇತ್ತೀಚೆಗೆ ಒಂದೆಡೆ ನೆಲೆಯನ್ನು ಕಂಡುಕೊಂಡಿದ್ದಾರೆ. ಆದರೆ ಯಾವುದೇ ರೀತಿಯ ಆಸ್ತಿ ಅಂತಸ್ತುಗಳಿಲ್ಲದೆ ಕೂಲಿಯನ್ನು ಮಾಡಿಕೊಂಡು ಜೀವನವನ್ನು ಸಾಗಿಸಬೇಕಾಗಿದೆ. ಅಲ್ಲಲ್ಲಿ ಅಲ್ಪ ಸ್ವಲ್ಪ ಅತಿಕ್ರಮಣ ಭೂಮಿಯನ್ನು ಹೊಂದಿದ್ದಾರೆ. ಇದನ್ನು ತುಂಡು ಭೂಮಿ ಎಂದು ಕರೆಯಬಹುದು. ಇವರು ಕೂಲಿಯನ್ನೇ ಹೆಚ್ಚಾಗಿ ಅವಲಂಬಿಸಿರುವುದರಿಂದ ಕೃಷಿಯ ಆದಾಯದ ಕಡೆ ಗಮನ ಹರಿಸುತ್ತಿಲ್ಲ. ಕಾರಣ ಅಲ್ಪ ಭೂಮಿಯಲ್ಲಿ ಎಷ್ಟೇ ಕಷ್ಟ ಪಟ್ಟರೂ ಬೊಗಸೆ ಕಾಳು ಸಿಗುವುದಿಲ್ಲ ಎನ್ನುವುದು ಗೊತ್ತಾಗಿದೆ. ಮೇಲಾಗಿ ಇವರು ಅನುಸರಿಸುವ ಕೃಷಿ ಪ್ರಾಚೀನವಾದ ಪಾರಂಪರಿಕ ಪದ್ಧತಿಯದ್ದಾಗಿದೆ. ಯಂತ್ರೋಪಕರಣಗಳ ಸಹಾಯವಿಲ್ಲದೆ ವ್ಯಕ್ತಿ ಮತ್ತು ಎತ್ತುಗಳನ್ನು ಅವಲಂಬಿಸಿದೆ. ಎತ್ತುಗಳು ಇಲ್ಲದಿದ್ದರೂ ನಡೆದುಹೋಗುತ್ತದೆ. ಆದರೆ ವ್ಯಕ್ತಿಯ ಶ್ರಮ ಮಾತ್ರ ಅವಶ್ಯವಾಗಿದೆ. ಸಮುದಾಯದಲ್ಲಿ ಬಡತನ ಸರ್ವೇ ಸಾಮಾನ್ಯವಾಗಿರುವುದರಿಂದ ಉತ್ತಮ ತಳಿಯ ಬೀಜ, ಅಗತ್ಯಕ್ಕೆ ತಕ್ಕಷ್ಟು ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ತರಲು ಹೆಚ್ಚಿನ ಹಣವಿಲ್ಲದಿರುವುದರಿಂದ ಕೃಷಿಯು ಇವರಿಗೆ ಯಾವುದೇ ರೀತಿಯ ಲಾಭ ತರುತ್ತಿಲ್ಲ. ಅವರಿಗೆ ಗೊತ್ತಿರುವುದು ಕೃಷಿ ಕೂಲಿಯೊಂದೇ. ಆದ್ದರಿಂದ ಅನಿವಾರ್ಯವಾಗಿ ಕೃಷಿಯನ್ನವಲಂಬಿಸಿದ್ದಾರೆ.

ಇಂದಿನ ಆಧುನಿಕ ಯುಗದಲ್ಲಿ ಆಹಾರ ಪದಾರ್ಥಗಳ ಬೆಲೆ ದಿನದಿಂದ ದಿನಕ್ಕೆ ಗಗನಕ್ಕೇರುತ್ತಿವೆ. ಲಾಭಕರವಲ್ಲದ ಕೃಷಿ ಮತ್ತು ಹೆಚ್ಚು ಸಂಪಾದನೆ ನೀಡದ ಕೂಲಿಯಿಂದಾಗಿ ಅವರ ಜೀವನ ದುಸ್ತರವಾಗಿದೆ. ಎರಡು ಹೊತ್ತಿನ ಊಟಕ್ಕೂ ಗತಿ ಇಲ್ಲದಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳು ಇಂದು ಮಾನವನ ಕೈಗೆ ನಿಲುಕಲಾರದಷ್ಟು ದೊಡ್ಡ ಪ್ರಮಾಣದಲ್ಲಿ ಬೆಳೆದಿವೆ. ಇದರ ಬಳಕೆ ಸಿದ್ದಿಯರಿಗೆ ಗೊತ್ತಿಲ್ಲದಿರುವುದರಿಂದ, ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಬಹುದೂರದಲ್ಲಿದ್ದಾರೆಂದು ಹೇಳಬೇಕಾಗುತ್ತದೆ. ಇಂದಿನ ದಿನಗಳು ಸ್ಪರ್ಧಾತ್ಮಕವಾಗುತ್ತಿವೆ. ಇಂದಿನ ಪರಿಸ್ಥಿತಿ 'ಮುಟ್ಟು

ಮತ್ತು ಮುಂದೆ ನಡೆ' ಎನ್ನುವಂತಿದೆ. ಆದರೆ ಸಿದ್ದಿಯರಿಗೆ ಮಾತ್ರ ಇದಾವುದರ ಪರಿವೆಯೇ ಇಲ್ಲದಂತಾಗಿದೆ. ಕೃಷಿ ಕೂಲಿಯನ್ನೇ ನಂಬಿಕೊಂಡು ಜೀವನ ದೂಡುತ್ತಿದ್ದಾರೆ.

ಸಿದ್ದಿಯರ ಕುಟುಂಬಗಳಲ್ಲಿ ಅನಕ್ಷರತೆ ಸರ್ವೇ ಸಾಮಾನ್ಯವಾಗಿದೆ. ಮಕ್ಕಳನ್ನು ಸ್ವಲ್ಪ ದೊಡ್ಡವರಾಗುವವರೆಗೆ ಶಾಲೆಗೆ ಕಳುಹಿಸುತ್ತಾರೆ. ಸ್ವಲ್ಪ ದೊಡ್ಡವರಾದ ಕೂಡಲೇ ಶಾಲೆಯನ್ನು ಬಿಡಿಸಿ ತೋಟಗಳಲ್ಲಿ ಕೂಲಿಗೆ ಕಳುಹಿಸುತ್ತಾರೆ ಅಥವಾ ಮಾಲಿಕರ ಹತ್ತಿರ ಜೀತದಾಳುಗಳನ್ನಾಗಿ ನೇಮಿಸುತ್ತಾರೆ. ಅಂಡಾಗ ಸಮುದಾಯದಲ್ಲಿ ಜ್ಞಾನ ಯಾವ ರೀತಿಯಾಗಿ ಲಭ್ಯವಾಗುವುದಕ್ಕೆ ಸಾಧ್ಯ? ಈ ರೀತಿಯ ಪರಿಸ್ಥಿತಿಯು ಮಾಯವಾದಾಗ ಮಾತ್ರ ಸಮುದಾಯದ ಮುಂದುವರಿಕೆಯನ್ನು ಆಶಿಸಬಹುದು. ಒಟ್ಟಾರೆಯಾಗಿ ಸಿದ್ದಿಯರು ಕೃಷಿ ಮತ್ತು ಕೃಷಿ ಕೂಲಿಯಿಂದ ಪೂರ್ಣ ಮಟ್ಟದ ಜೀವನ ನಡೆಸುವುದಕ್ಕೆ ಸಾಧ್ಯವಿಲ್ಲದಿರುವುದು ಗೊತ್ತಿರುವ ಅಂಶವಾಗಿದೆ.

### ೫.೨.೨. ಬೇಟೆ ಮತ್ತು ಪಶುಪಾಲನೆ

ಸಿದ್ದಿಯರು ದಟ್ಟವಾದ ಅರಣ್ಯದಲ್ಲಿ ವಾಸವಾಗಿದ್ದಾರೆ. ಇವರು ಬೇಟೆಯಾಡುವುದರಲ್ಲಿ ನಿಸ್ಸೀಮರು. ಪ್ರತಿಯೊಂದು ಪ್ರಾಣಿಗಳ ಚಲನವಲನಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ಕಾಡಿನಲ್ಲಿ ದೊರೆಯುವ ಪ್ರಾಣಿ ಪಕ್ಷಿಗಳಿಂದಲೇ ತಮ್ಮ ಹಸಿವನ್ನು ಹಿಂಗಿಸಿಕೊಳ್ಳುತ್ತಿದ್ದರು. ಸರ್ಕಾರವು ಬೇಟೆಯಾಡುವುದನ್ನು ನಿಷೇಧಿಸಿರುವುದರಿಂದ ಇಂದು ಈ ಪದ್ದತಿ ಕಂಡುಬರುವುದಿಲ್ಲ. ಆದರೂ ಚಿಕ್ಕ-ಪುಟ್ಟ ಪ್ರಾಣಿ ಪಕ್ಷಿಗಳನ್ನು ತಿನ್ನುತ್ತಾರೆ. ಕಾಡು ಕೋಳಿ, ಮೊಲ, ಉಡ, ಏಡಿ, ಮೀನು, ಆಮೆ ಮುಂತಾದವುಗಳನ್ನು ಬೇಟೆಯಾಡುತ್ತಾರೆ. ಸಿದ್ದಿಯರ ಕೆಲವು ಕುಟುಂಬಗಳು ಸಮುದ್ರದಲ್ಲಿ ಮತ್ತು ಸೂಪಾ ಆಣೆಕಟ್ಟಿನ ಹಿನ್ನೀರಿನ ಪ್ರದೇಶಗಳಲ್ಲಿ ಮೀನು ಹಿಡಿಯಲು ಹೋಗುತ್ತಾರೆ. ಆದರೆ ಇದು ಅವರಿಗೆ ಲಾಭದಾಯಕವಾದ ವೃತ್ತಿಯಾಗಿಲ್ಲ. ಬದಲಿಗೆ ತಮ್ಮ ಆಹಾರಕ್ಕಾಗಿ ಮೀನು ಹಿಡಿಯಲು ಹೋಗುತ್ತಿರುವುದು ತಿಳಿದುಬರುತ್ತದೆ. "ಇಂದಿನ ಪರಿಸರದಲ್ಲಿ ಮೊದಲಿನಂತೆ ಬೇಟೆಯಾಡುವುದಕ್ಕೆ ನಿರ್ಬಂಧವಿರುವುದರಿಂದ, ಇತರ ಕಸುಬುಗಳಾದ ಬೇಸಾಯ, ಕೂಲಿ ಇತ್ಯಾದಿಗಳು ಲಭ್ಯವಿರುವ ಕಾರಣ ಬುಡಕಟ್ಟು ಜನಾಂಗಗಳಿಗೆ ಸರ್ಕಾರದ ಸಹಾಯದಿಂದ ಅವಲಂಬಿಸಲು ಸಾಧ್ಯವಾಗಿದೆ."[೬] ಸಿದ್ದಿಯರು ಮೂಲತಃ ಪಶುಪಾಲಕರಲ್ಲ. ಇವರು ಮೊದಲಿಗೆ ಅರಣ್ಯವನ್ನು ಪ್ರವೇಶಿಸಿದಾಗ ಬೇಟೆಯನ್ನು ಪ್ರಮುಖವಾಗಿ ನೆಚ್ಚಿಕೊಂಡಿದ್ದರು. ಒಂದೆಡೆ ಸ್ಥಿರವಾಗಿ ನೆಲೆಯೂರಿ ಅರಣ್ಯದ ಅಲ್ಪ-ಸ್ವಲ್ಪ ಭೂಮಿಯನ್ನು ಅತಿಕ್ರಮಣ ಮಾಡಿಕೊಂಡು ಕೃಷಿಯನ್ನು ಅನುಸರಿಸಲು ಪ್ರಾರಂಭಿಸಿದಾಗ, ಪಶುಗಳನ್ನು ಸಾಕುವುದನ್ನು ರೂಡಿಸಿಕೊಂಡರು. ಅಂದರೆ ಸಿದ್ದಿಯರು ಪ್ರಮುಖವಾಗಿ ಪಶುಗಳನ್ನು ಹೊಂದಿದ್ದಾರೆಂದು ತಿಳಿಯುವಂತಿಲ್ಲ. ಅಂದರೆ

ಇತ್ತೀಚೆಗೆ ಪಶುಪಾಲನೆಯನ್ನು ರೂಢಿಸಿಕೊಂಡಿರುವುದು ಸಮುದಾಯದಲ್ಲಿ ಕಂಡುಬರುತ್ತದೆ. ಇತ್ತೀಚೆಗೆ ಕುರಿ, ಮೇಕೆ, ಕೋಳಿಗಳನ್ನು ಸಾಕುತ್ತಿದ್ದಾರೆ.

ಅರಣ್ಯ ಕಾಯ್ದೆಗಳು ಮತ್ತು ನ್ಯಾಯಾಲಯದ ತೀರ್ಪುಗಳು ಬುಡಕಟ್ಟು ಸಮುದಾಯಗಳು ಕಂಗೆಡುವಂತೆ ಮಾಡಿವೆ. "ಸರ್ವೋಚ್ಛ ನ್ಯಾಯಾಲಯದ ಆಜ್ಞೆಯೊಂದರ ತೋರಿಕೆಯನ್ನಾಧರಿಸಿ ಅರಣ್ಯ ಪ್ರದೇಶಗಳಿಂದ ಎಲ್ಲಾ ಅತಿಕ್ರಮಣಕಾರರನ್ನು ೨೦೦೨ ರ ಸೆಪ್ಟೆಂಬರ್ ೩೦ ರ ಒಳಗಾಗಿ ಉಚ್ಚಾಟನೆ ಮಾಡಬೇಕೆಂದು ಪರಿಸರ ಮತ್ತು ಅರಣ್ಯ ಸಚಿವಾಲಯ ಅದೇ ವರ್ಷದ ಮೇ. ೩ ರಂದು ಹೊರಡಿಸಿದ ದಬ್ಬಾಳಿಕೆ ಆಜ್ಞೆ ಇದಕ್ಕೆ ನಿರ್ಧಿಷ್ಟ ಕಾರಣವಾಯಿತು. ವಾಸ್ತವವಾಗಿ ಸರ್ವೋನ್ನತ ನ್ಯಾಯಾಲಯ ಉಚ್ಚಾಟನೆಯ ಆಜ್ಞೆಯನ್ನೇ ಮಾಡಿರಲಿಲ್ಲ. ಕೇವಲ ಅರಣ್ಯ ಅತಿಕ್ರಮಣ ಸಕ್ರಮ ಮಾಡುವುದನ್ನು ನಿಷೇಧಿಸಿತ್ತು."[೭] ಅರಣ್ಯದ ಅತಿಕ್ರಮಣ ಭೂಮಿಯನ್ನು ಸರ್ಕಾರ ಯಾವಾಗ ಕಿತ್ತುಕೊಳ್ಳುತ್ತದೊ ಗೊತ್ತಿಲ್ಲ ಮತ್ತು ಬೇಟೆಯಾಡಿ ಹೊಟ್ಟೆಯನ್ನು ತುಂಬಿಕೊಳ್ಳುತ್ತಿದ್ದೆವು. ಸರ್ಕಾರ ಅದನ್ನು ನಿಷೇದಿಸಿತು. ಮುಂದೆ ನಮ್ಮ ಸ್ಥಿತಿ ಏನಾಗುತ್ತೋ ದೇವರೇ ಬಲ್ಲ ಎನ್ನುವ ಆತಂಕವನ್ನು ಯಲ್ಲಾಪುರ ತಾಲೂಕಿನ ಮಾಗೋಡು ಗ್ರಾಮದ ನಿವಾಸಿಯಾಗಿರುವ ಚಂದ್ರೇಶ ಸಿದ್ದಿಯವರು ತಿಳಿಸುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಸಮುದಾಯದವರು ಕೃಷಿಗಾಗಿ ಮತ್ತು ತಮ್ಮ ಉಪಜೀವನಕ್ಕಾಗಿ ಪಶುಪಾಲನೆಯನ್ನು ಅನುಸರಿಸಬೇಕಾಯಿತು. ಪಶುಪಾಲನೆಯಿಂದ ಕುಟುಂಬದ ಆಹಾರಕ್ಕೆ ಅಲ್ಪ ಸ್ವಲ್ಪ ಹೈನುಗಾರಿಕೆಯು ಪ್ರಮುಖವಾಗಿರುವುದರಿಂದ ಇದನ್ನು ಅನುಸರಿಸುತ್ತಿದ್ದಾರೆ.

ಸಿದ್ದಿಯರು ಬದುಕು ಸಾಧಿಸುವುದಕ್ಕಾಗಿ ಹಲವಾರು ಅಡ್ಡಿ ಆತಂಕಗಳನ್ನು ಎದುರಿಸುತ್ತಿದ್ದಾರೆ. ಮೊದಲಿಗೆ ಇವರು ಯಾವುದೇ ಪ್ರಾಣಿ ಪಕ್ಷಿಗಳನ್ನು ಸಾಕುತ್ತಿದ್ದಿಲ್ಲ. ಆದರೆ ಇಂದು ಪ್ರಾಣಿ ಪಕ್ಷಿಗಳನ್ನು ಸಾಕುತ್ತಿದ್ದಾರೆ. ಅದರಲ್ಲಿಯೂ ಮುಖ್ಯವಾಗಿ ಹೈನುಗಾರಿಕೆಯ ಉತ್ಪನ್ನಗಳನ್ನು ನೀಡುವ ಪ್ರಾಣಿಗಳನ್ನು ಮತ್ತು ಕೃಷಿಗೆ ಪೂರಕವಾದ ಎತ್ತುಗಳನ್ನು ಹಾಗೂ ತಮ್ಮ ಮಾಂಸಹಾರಕ್ಕಾಗಿ ಕೋಳಿ, ಕುರಿಗಳನ್ನು ಸಾಕುತ್ತಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಸಿದ್ದಿಯರು ಹೊಂದಿರುವ ಪ್ರಾಣಿ-ಪಕ್ಷಿಗಳ ವಿವರವನ್ನು ಈ ಕೆಳಗಿನಂತೆ ತಿಳಿಯಬಹುದು.

| ಕ್ರ.ಸಂ. | ಸಾಕು ಪ್ರಾಣಿ/ಪಕ್ಷಿಗಳು | ಸಂಖ್ಯೆಗಳಲ್ಲಿ |
|---|---|---|
| ೧ | ಎತ್ತು, ಹೋರಿ | ೧೩೪೯ |
| ೨ | ಆಕಳು, ಕರು | ೮೬೧ |
| ೩ | ಎಮ್ಮೆ, ಕೋಣ | ೩೮೫ |
| ೪ | ಕುರಿ | ೪೯ |
| ೫ | ಮೇಕೆ | ೧೦ |
| ೬ | ಕೋಳಿ | ೫೪೬೫ |

೫.೨.೩. ಧಾರ್ಮಿಕ ವೃತ್ತಿಗಳು

ಪ್ರತಿಯೊಂದು ಧರ್ಮವೂ ತನ್ನದೇ ಆದ ಪಂಗಡಗಳನ್ನು ಒಳಗೊಂಡಿರುತ್ತದೆ. ಆ ಪಂಗಡಗಳು ಅನುಸರಿಸುವ ವೃತ್ತಿಯ ಆಧಾರದ ಮೇಲೆ ಅವುಗಳ ಸ್ಥಾನ–ಮಾನ ನಿರ್ಧರಿತವಾಗುತ್ತವೆ. ಪ್ರತಿಯೊಂದು ಪಂಗಡಗಳು ಪ್ರತ್ಯೇಕ ವೃತ್ತಿಯನ್ನು ಹೊಂದಿರುತ್ತವೆ. ಧರ್ಮದ ಆಧಾರದ ಮೇಲೆ ವೃತ್ತಿಗಳು ವಿಂಗಡಿಸಲ್ಪಟ್ಟಿರುತ್ತವೆ. ಈ ಬಗೆಯ ವ್ಯವಸ್ಥೆಯನ್ನು ವಿಶ್ವದ ಹೆಚ್ಚಿನ ಧರ್ಮಗಳಲ್ಲಿ ಗುರುತಿಸಬಹುದಾಗಿದೆ. ಅದರಲ್ಲಿಯೂ ಮುಖ್ಯವಾಗಿ ಹಿಂದೂ ಧರ್ಮವನ್ನು ಗಮನಿಸುವುದಾದರೆ ಪ್ರತಿಯೊಂದು ಜಾತಿಗಳು ತಮ್ಮದೇ ಆದ ಕುಲಕಸುಬುಗಳನ್ನು ಹೊಂದಿವೆ. ಕುಲಕಸುಬಿನ ಆಧಾರದಿಂದಲೇ ವರ್ಗ ವ್ಯವಸ್ಥೆ ಅಥವಾ ಜಾತಿ ವ್ಯವಸ್ಥೆ ಬೆಳೆದುಕೊಂಡು ಬಂದಿರುವುದನ್ನು ಗಮನಿಸಬಹುದಾಗಿದೆ.

ಸಿದ್ದಿಯರಲ್ಲಿ ಧರ್ಮಗಳು ಬೇರೆ ಬೇರೆಯಾದರೂ ಒಟ್ಟಾಗಿ ಜೀವನವನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಇವರಲ್ಲಿ ಯಾವುದೇ ರೀತಿಯ ಭಿನ್ನತೆಗಳು ಕಾಣುವುದಿಲ್ಲ. ಇವರೆಲ್ಲರೂ ಬಡವರಾಗಿದ್ದು, ಕೂಲಿ ಮತ್ತು ಚಿಕ್ಕ ಹಿಡುವಳಿಯನ್ನು ಮಾಡಿಕೊಂಡಿದ್ದಾರೆ. ಹಿಂದೂ ಮತ್ತು ಮುಸ್ಲಿಂ ಸಿದ್ದಿಯರನ್ನು ಹೊರತುಪಡಿಸಿದರೆ ಕ್ರಿಶ್ಚಿಯನ್ ಧರ್ಮದ ಸಿದ್ದಿಯರು ಸ್ವಲ್ಪ ಮಟ್ಟಿಗೆ ಭಿನ್ನವಾಗಿ ಕಾಣುತ್ತಾರೆನ್ನಬಹುದು. ಯಲ್ಲಾಪುರ ತಾಲೂಕಿನ ಕ್ರಿಶ್ಚಿಯನ್ ಸಮುದಾಯದ ಕೆಲವು ಸಿದ್ದಿಯರು ಚರ್ಚ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಂದರೆ ಧಾರ್ಮಿಕವಾದ ವೃತ್ತಿಯಲ್ಲಿ ತೊಡಗಿರುವುದು ಅಪರೂಪಕ್ಕೆನ್ನುವಂತೆ ಕಂಡುಬರುತ್ತದೆ. ಕ್ರಿಶ್ಚಿಯನ್ ಸಿದ್ದಿ ಸಮುದಾಯದಿಂದ ಮೂರು ಜನ ಪಾದ್ರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಲ್ಲದೆ ಕೆಲವು ಜನ ಸಮಾಜ ಸೇವಕರಾಗಿ ಗುರುತಿಸಿಕೊಂಡಿದ್ದಾರೆ. ಅಂದರೆ ಕೆಲವು ಕ್ರಿಶ್ಚಿಯನ್ ಸಿದ್ದಿ ಮಹಿಳೆಯರು ಸಿಸ್ಟರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇನ್ನುಳಿದಂತೆ ಹಿಂದೂ ಸಿದ್ದಿಯರು ಪುರೋಹಿತರಾಗಿಯಾಗಲಿ ಮತ್ತು ಮುಸ್ಲಿಂ ಸಿದ್ದಿಯರು ಖಾಜಿ ಅಥವಾ ಮುಲ್ಲಾಗಳಾಗಿಯಾಗಲಿ ಗುರುತಿಸಿಕೊಂಡಿಲ್ಲ. ಕ್ರಿಶ್ಚಿಯನ್ ಸಿದ್ದಿ ಸಮುದಾಯದ ಬೆರಳೆಣಿಕೆಯಷ್ಟು ಜನರನ್ನು ಹೊರತುಪಡಿಸಿದರೆ ಇನ್ನುಳಿದಂತೆ ಎಲ್ಲಾ ಸಿದ್ದಿಯರೂ ಕೂಲಿ ಮತ್ತು ಕೃಷಿಯನ್ನು ಅನುಸರಿಸುತ್ತಿದ್ದಾರೆ. ಆದ್ದರಿಂದ ಇವರಲ್ಲಿ ಧರ್ಮಕ್ಕೆ ಅನುಗುಣವಾದ ಯಾವುದೇ ವೃತ್ತಿಗಳಿಲ್ಲವೆಂದು ಹೇಳಬೇಕಾಗುತ್ತದೆ. ವಿಶ್ವದ ಪ್ರಮುಖ ಧರ್ಮಗಳಲ್ಲಿ ಹಂಚಿಹೋಗಿದ್ದರೂ ಧರ್ಮಕ್ಕನುಗುಣವಾದ ಕಸುಬುಗಳು ಇವರಲ್ಲಿ ಕಂಡುಬರುವುದಿಲ್ಲ. ಆಚರಣೆ ಮತ್ತು ಹೇಳಿಕೊಳ್ಳುವುದಕ್ಕೆ ಮಾತ್ರ ಧರ್ಮಗಳು ಎನ್ನುವಂತಾಗಿದೆ.

೫.೩ ಹೆಣ್ಣುಮಕ್ಕಳ ವೃತ್ತಿಗಳು

ಪ್ರತಿಯೊಂದು ಸಮುದಾಯವೂ ತನ್ನದೇ ಆದ ಜೀವನ ವಿಧಾನವನ್ನು ಹೊಂದಿರುತ್ತದೆ. ಅವರ ಜೀವನ ವಿಧಾನಕ್ಕನುಗುಣವಾಗಿ ಸಂಸ್ಕೃತಿ ಬೆಳೆದುಕೊಂಡು ಬಂದಿರುತ್ತದೆ. ಸಿದ್ದಿಯರನ್ನು ಮೂಲತಃ ಆಫ್ರಿಕಾದಿಂದ ಯಾವ ರೀತಿಯಾಗಿ ತರಲಾಯಿತು ಎನ್ನುವುದನ್ನು ಗಮನಿಸಿದಾಗ ಅವರ ಮೂಲ ಅಥವಾ ಹಿನ್ನೆಲೆ ತಿಳಿಯುತ್ತದೆ. ಸಿದ್ದಿ ಪುರುಷರಂತೆ ಸಿದ್ದಿ ಮಹಿಳೆಯರನ್ನೂ ಸಹ ಮಾರುಕಟ್ಟೆಯಲ್ಲಿ ಬೆತ್ತಲೆ ಮಾಡಿ ಬಹಿರಂಗವಾಗಿ ಹರಾಜು ಕೂಗಿ ಮಾಲಿಕರು ಕೊಂಡುಕೊಳ್ಳುತ್ತಿದ್ದರು. ಇವಳನ್ನು ಕೊಂಡುಕೊಂಡ ಮಾಲಿಕ ಯಾವ ಕೆಲಸವನ್ನು ಆಜ್ಞೆ ಮಾಡುತ್ತಿದ್ದನೋ ಅದನ್ನು ನಿರ್ವಹಿಸಬೇಕಾಗಿತ್ತು. ಮನೆ, ತೋಟ, ಗದ್ದೆ ಯಾವ ಕೆಲಸ ಹೇಳಿದರೂ ಮಾಡಬೇಕಾದ ಪರಿಸ್ಥಿತಿ ಇತ್ತು. ಅಲ್ಲದೆ ಸಿದ್ದಿ ಮಹಿಳೆಯನ್ನು ಖರೀದಿಸಿದ ಮಾಲಿಕ ಅವಳನ್ನು ಬಲವಂತವಾಗಿ ದೈಹಿಕ ಸಂಭೋಗಕ್ಕೂ ತೊಡಗಿಸಿಕೊಳ್ಳುತ್ತಿದ್ದರು ಎನ್ನುವುದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. "ಒಂದು ದಿವಸ ನಾನು ಅಂಗಡಿಯ ಗಾಜುಗಳನ್ನು ಒರೆಸುತ್ತಿದ್ದಾಗ, ಮಾಲಿಕ ಮತ್ತು ಅವನ ಮಗ ಕಾರಿನಲ್ಲಿ ಬಂದರು ಅವರಿಬ್ಬರ ನಡುವೆ ಹೆದರಿದ ಮುಖದ ಒಬ್ಬ ಬಡಪಾಯಿ ನೀಗ್ರೋ ಹೆಣ್ಣುಮಗಳು ಕುಳಿತಿದ್ದಳು. ಕಾರು ಅಂಗಡಿಯ ಮುಂದೆ ನಿಲ್ಲುತ್ತಲೇ ಅವರಿಬ್ಬರು ಆ ಹೆಣ್ಣುಮಗಳನ್ನು ಹೊಡೆಯುತ್ತಾ ಅಂಗಡಿಯಲ್ಲಿ ನೂಕಿದರು. ಅಲ್ಲಿಯೇ ಆಯ್ದು ಹೋಗುತ್ತಿದ್ದ ಬಿಳಿಯರು ನೊಡಿಯೂ ನೋಡದಂತೆ ಮುಂದೆ ಸಾಗಿದರು. ದೂರದಲ್ಲಿ ನಿಂತು ನೋಡುತ್ತಿದ್ದ ಪೋಲೀಸ್ 'ಕ್ಯಾರೆ' ಎಂದು ಸಹ ವಿಚಾರಿಸಲಿಲ್ಲ. ನಾನು ಕಣ್ಣು ಹೊರಳಿಸಿ ಇದನ್ನೆಲ್ಲಾ ನೋಡಿದರೂ ನನ್ನ ಕೆಲಸದಲ್ಲಿಯೇ ಮಗ್ನನಾದವನಂತೆ ನಟಿಸುತ್ತಿದ್ದೆ. ಒಂದೆರಡು ಕ್ಷಣಗಳಲ್ಲಿಯೇ ಅಂಗಡಿಯ ಹಿಂದಿನ ಕೋಣೆಯಿಂದ ವಿಕಾರವಾದ ಚೀತ್ಕಾರ ಕೇಳಿಬಂತು. ಕೆಲ ಕಾಲದ ನಂತರ ದೇಹದ ತುಂಬೆಲ್ಲಾ ರಕ್ತ ಸೋರುತ್ತಿದ್ದ, ಅಳುತ್ತಿದ್ದ ಆ ಕರಿಯಳು ತನ್ನ ಹೊಟ್ಟೆಯನ್ನು ಹಿಡಿದುಕೊಂಡು ತೆವಳುತ್ತಾ ಹೊರಬಂದಳು. ಅವಳ ಬಟ್ಟೆಯೆಲ್ಲಾ ಹರಿದು ಚಿಂದಿಯಾಗಿದ್ದವು. ಅವಳು ಹಾಗೆಯೇ ರೋಧಿಸುತ್ತಾ ರಸ್ತೆಯ ಭಾಗಕ್ಕೆ ಬರುತ್ತಲೇ ಅಲ್ಲಿಯೇ ನಿಂತಿದ್ದ ಪೋಲೀಸ್ ಅವಳನ್ನು ತಡೆದು 'ನೀನು ಕುಡಿದು ದಾಂದಲೆ ಮಾಡುತ್ತಿದ್ದೀಯಾ?' ಎಂದು ಗದರಿಸಿ, ಪೋಲೀಸ್ ವ್ಯಾನ್‌ನಲ್ಲಿ ಅವಳನ್ನು ಹಾಕಿಕೊಂಡು ಹೋದ."[೮] ಈ ರೀತಿಯಾಗಿ ಸಿದ್ದಿ ಮಹಿಳೆಯೂ ಸಹ ಗುಲಾಮಳಾಗಿ ಮಾಲಿಕನ ಚಿತ್ರಹಿಂಸೆಗೆ ಒಳಗಾಗಿರುವುದು ತಿಳಿದುಬರುತ್ತದೆ. ಸಿದ್ದಿ ಪುರುಷರಂತೆ ಸಿದ್ದಿ ಮಹಿಳೆಯರೂ ಸಹ ಮಾಲಿಕನ ಕಪಿಮುಷ್ಟಿಯಿಂದ ತಪ್ಪಿಸಿಕೊಂಡು ತನ್ನ ಸಮುದಾಯದ ಗಂಡಸರೊಂದಿಗೆ ಸೇರಿದಳು.

ಪುರುಷರಂತೆ ಸಿದ್ದಿ ಮಹಿಳೆಯೂ ಸಹ ದೌರ್ಜನ್ಯಕ್ಕೆ ಒಳಗಾಗಿ ಹಲವಾರು ಹಿಂಸೆಗಳನ್ನು ಅನುಭವಿಸಿದ್ದಾಳೆ.

ಸಿದ್ದಿ ಪುರುಷರಂತೆ ಮಹಿಳೆಯರೂ ಸಹ ಕೃಷಿ ಮತ್ತು ಕೂಲಿಯ ಕೆಲಸಗಳಲ್ಲಿ ತೊಡಗುತ್ತಾರೆ. ಸಮುದಾಯದ ಮಹಿಳೆಯರಲ್ಲಿ ವಿಶೇಷವಾದ ವೃತ್ತಿಗಳೇನೂ ಪ್ರಮುಖವಾಗಿ ಗೋಚರಿಸುವುದಿಲ್ಲ. ಸಮುದಾಯದ ಸ್ತ್ರೀ-ಪುರುಷರ ಮಧ್ಯೆ ಸಹಬಾಳ್ವೆ ಮತ್ತು ಸಮಾನತೆ ಕಂಡುಬರುತ್ತದೆ. ಸಮುದಾಯದಲ್ಲಿ ಬಡತನ ಸರ್ವೇ ಸಾಮಾನ್ಯವಾಗಿರುವುದರಿಂದ ಪುರುಷನಂತೆ ಮಹಿಳೆಯೂ ಸಹ ಕೂಲಿಗೆ ಹೋಗುತ್ತಾಳೆ ಮತ್ತು ಕೃಷಿಯಲ್ಲಿ ತೊಡಗುತ್ತಿದ್ದಾಳೆ. ಕುಟುಂಬದ ಜವಾಬ್ದಾರಿಯನ್ನು ತಾನೂ ಸಹ ಹೆಗಲ ಮೇಲೆ ಹೊತ್ತುಕೊಂಡು ನಡೆಯುತ್ತಿದ್ದಾಳೆ. ಕುಟುಂಬದ ಬೇಕು-ಬೇಡಗಳನ್ನು ಪುರುಷರಂತೆ ಮಹಿಳೆಯರೂ ಸಹ ಪೂರೈಸಬೇಕಾದ ಅನಿವಾರ್ಯತೆ ಇದೆ. ಆದ್ದರಿಂದ ಸಿದ್ದಿಯರ ಮಹಿಳೆಯರಲ್ಲಿ ವಿಶೇಷವಾದ ವೃತ್ತಿಗಳು ಕಂಡುಬರುವುದಿಲ್ಲ. ಮೊದಲಿಗೆ ಡಮಾಮಿ ಕುಣಿತವನ್ನು ಮಹಿಳೆಯರು ಮಾತ್ರ ಮಾಡುತ್ತಿದ್ದರು. ಆದರೆ ಇಂದು ಇದನ್ನು ಪುರುಷರು ಸಹ ಮಾಡುತ್ತಿದ್ದಾರೆ. ಇನ್ನುಳಿದಂತೆ ಪುಗಡಿ ನೃತ್ಯದ ಕಲೆಯನ್ನು ಮಾತ್ರ ಮಹಿಳೆಯರು ಅನುಸರಿಸುವುದನ್ನು ಬಿಟ್ಟರೆ ಸಮುದಾಯದ ಮಹಿಳೆಯರಲ್ಲಿ ಇತರ ಪ್ರಮುಖ ವೃತ್ತಿಗಳು ಗೋಚರಿಸುವುದಿಲ್ಲ. ಇನ್ನುಳಿದಂತೆ ಗೃಹೋಪಯೋಗಿ ಕಾರ್ಯಗಳನ್ನು ನಿರ್ವಹಿಸುವುದರ ಜೊತೆಗೆ ಕೃಷಿ ಮತ್ತು ಕೃಷಿ ಕೂಲಿ ಮಹಿಳೆಯರಲ್ಲಿಯೂ ಪ್ರಮುಖವಾಗಿದೆ. ತೋಟ ಮತ್ತು ಗದ್ದೆಯ ಕೆಲಸವನ್ನು ನಿರ್ವಹಿಸುತ್ತಾಳೆ. ಪಶುಪಾಲನೆಯ ಜವಾಬ್ದಾರಿಯನ್ನು ಹೊರುತ್ತಿದ್ದಾಳೆ. ದನಕರುಗಳಿಗೆ ಹುಲ್ಲನ್ನು ಒದಗಿಸುವುದು, ಹಾಲನ್ನು ಕರೆಯುವ ಕೆಲಸವನ್ನು ನಿರ್ವಹಿಸುತ್ತಿದ್ದಾಳೆ. ಕೆಲವು ಕಡೆ ಮಹಿಳೆಯರು ಬ್ಯಾಂಕ್‌ಗಳಿಂದ ಸಾಲ ಪಡೆದು ಪಾನ್-ಬೀಡಾ ಅಂಗಡಿಗಳನ್ನು ನಡೆಸುತ್ತಿದ್ದಾರೆ. ಕೆಲವು ಸಿದ್ದಿ ಮಹಿಳೆಯರು ಬುಟ್ಟಿ ಹೆಣೆಯುವುದನ್ನು ರೂಢಿಸಿಕೊಂಡಿದ್ದಾರೆ. ಆದರೆ ಈ ಬಗೆಯ ವಿವಿಧ ವೃತ್ತಿಗಳಿಗಿಂತ ಕೃಷಿ ಕೂಲಿಯೇ ಪ್ರಮುಖ ಉದ್ಯೋಗವಾಗಿದೆ. ಆದ್ದರಿಂದ ಸಮುದಾಯದ ಮಹಿಳೆಯರು ವಿಶೇಷವಾದ ವೃತ್ತಿಯನ್ನು ಹೊಂದಿಲ್ಲವೆಂದು ಹೇಳಬೇಕಾಗುತ್ತದೆ.

## ಅಡಿಟಿಪ್ಪಣಿಗಳು

೧. ಎನ್.ಆರ್.ನಾಯಕ, ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗ, ಪುಟ ೬ ಮತ್ತು ೭.

೨. ಪ್ರ.ಸಂ: ಪ್ರೊ. ಎಚ್.ಜೆ.ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂ.೧, ಪುಟ ೮೦ ಮತ್ತು ೮೧.

೩. ಹಿ.ಚಿ. ಬೋರಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೪೯.

೪. ಡಾ॥ ಕೆ.ಎಂ. ಮೈತ್ರಿ, ಬುಡಕಟ್ಟು ಕುಲಕಸುಬುಗಲು, ಪುಟ ೧೪.

೫. ಯೋಜನಾ (ಮಾಸ ಪತ್ರಿಕೆ), ಸೆಪ್ಟೆಂಬರ್ ೨೦೦೮, ಪುಟ ೨೪.

೬. ಡಾ॥ ಸುಧಾ ಗುಂಡ್ಲುಪೇಟೆ, ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ, ಪುಟ.೩.

೭. ಯೋಜನಾ (ಮಾಸ ಪತ್ರಿಕೆ), ಸೆಪ್ಟೆಂಬರ್ ೨೦೦೮, ಪುಟ ೧೯.

೮. ಬಿ.ಜಿ. ಹೊರಬಲಿಂಗಯ್ಯ, ಸಿದ್ದಿಯರ ಸಂಸ್ಕೃತಿ, ಪುಟ ೧೫.

ಅಧ್ಯಾಯ–೬

# ಸಿದ್ದಿಯರ ಶೈಕ್ಷಣಿಕ ಸ್ಥಾನಮಾನ

ನಮ್ಮ ಭಾರತೀಯ ಸಮಾಜದಲ್ಲಿ ಪ್ರಾಚೀನ ಕಾಲದಿಂದ ಬ್ರಿಟೀಷರ ಆಗಮನವಾಗುವವರೆಗೆ ಶೂದ್ರರು ಮತ್ತು ಮಹಿಳೆಯರಿಗೆ ಶಿಕ್ಷಣವನ್ನು ನಿರಾಕರಿಸಲಾಗಿತ್ತು. ನಾಗರಿಕ ಸಮಾಜದಲ್ಲಿ ಕೆಲವು ಸಮುದಾಯಗಳನ್ನು ಶಿಕ್ಷಣದಿಂದ ದೂರವಿಡಲಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಆದಿವಾಸಿಗಳಿಗೆ ಶಿಕ್ಷಣ ಕನಸಿನ ಮಾತಾಗಿತ್ತು. ಅಲ್ಲದೆ ಅವರು ನಾಗರಿಕ ಸಮಾಜದೊಂದಿಗೆ ಸಂಪರ್ಕವನ್ನು ಹೊಂದಿಲ್ಲದಿದ್ದುದರಿಂದ, ಶಿಕ್ಷಣದ ಬಗೆಗೆ ಅರಿವು ಇಲ್ಲವೆಂದೇ ಹೇಳಬೇಕಾಗುತ್ತದೆ. ಆದರೆ ಇಂದು ಆಧುನಿಕ ಸಮಾಜದಲ್ಲಿ ಶಿಕ್ಷಣವು ಮೂಲಭೂತ ಚಟುವಟಿಕೆಗಳಲ್ಲಿ ಒಂದೆನಿಸಿದೆ. ಮಾನವ ಏಕಾಂಗಿ ಜೀವನವನ್ನು ನಡೆಸದೆ ಸಮೂಹ ಜೀವನದಲ್ಲಿ ತೊಡಗಿದ್ದಾನೆ. ಸಮೂಹ ಜೀವನಕ್ಕೆ ಶಿಕ್ಷಣ ಅತ್ಯವಶ್ಯಕವಾಗಿದೆ. ಸಮುದಾಯದಲ್ಲಿ ಶಿಕ್ಷಣ ಲಭ್ಯವಾದಂತೆಲ್ಲ ಸಾಂಘಿಕ ಮತ್ತು ಐಕ್ಯತೆಯ ಜೀವನ ನಡೆಸಲು ಕಾರಣವಾಗಿದೆ.[1] ನಾಗರಿಕ ಸಮಾಜದಲ್ಲಿ ಶಿಕ್ಷಣ ಎನ್ನುವುದು ಮಾನವ ಜೀವನದ ಪ್ರಮುಖ ಅಂಗವಾಗಿದೆ. ಹೆಚ್ಚು ಹೆಚ್ಚು ಶಿಕ್ಷಣವನ್ನು ಪಡೆದ ವ್ಯಕ್ತಿಯು ಸಮಾಜದಲ್ಲಿ ಉತ್ತಮವಾದ ಜೀವನವನ್ನು ಮತ್ತು ಭವಿಷ್ಯವನ್ನು ರೂಪಿಸಿಕೊಳ್ಳುತ್ತಿದ್ದಾನೆ. ಅಂದರೆ ಶಿಕ್ಷಣವು ವ್ಯಕ್ತಿಯ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ಇಂದು ಬಹುಮುಖ್ಯ ಪಾತ್ರವನ್ನು ವಹಿಸುತ್ತಿದೆ. ಶಿಕ್ಷಣವು ವ್ಯಕ್ತಿಯ ಬೆಳವಣಿಗೆಗೆ ಎಷ್ಟು ಅವಶ್ಯವೋ, ಸಮಾಜದ ಪ್ರಗತಿಗೂ ಸಹ ಅಷ್ಟೇ ಅತ್ಯವಶ್ಯಕವಾಗಿದೆ. ವ್ಯಕ್ತಿಯು ಶಿಕ್ಷಣವನ್ನು ಪಡೆದಂತೆಲ್ಲಾ ಜ್ಞಾನದ ವೃದ್ಧಿಯಾಗಿ ಅಂಧ ಆಚರಣೆಗಳು ನಶಿಸುತ್ತವೆ. ಉತ್ತಮವಾದ ಸಂಸ್ಕೃತಿ ಬೆಳೆದುಕೊಂಡು ಬರುವುದಕ್ಕೆ ಸಹಕಾರಿಯಾಗುತ್ತದೆ.

ಆದಿವಾಸಿ ಸಮುದಾಯಗಳು ಇಂದು ಆಧುನಿಕತೆಗೆ ಮುಖಾಮುಖಿಯಾಗುತ್ತಿವೆ. ಈ ಸಂದರ್ಭದಲ್ಲಿ ಸಮುದಾಯಗಳಿಗೆ ಶಿಕ್ಷಣದ ಅವಶ್ಯಕತೆ ಇದೆ. ಕಾಡಿನಲ್ಲಿಯೂ ನೆಲೆಸಲು ಸಾಧ್ಯವಾಗದೆ ಈ ಕಡೆ ನಾಗರಿಕ ಸಮಾಜದಲ್ಲಿಯೂ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಾಗದೆ ಪರದಾಡುತ್ತಿವೆ. ಆದ್ದರಿಂದ ಆದಿವಾಸಿಗಳಿಗೆ ಶಿಕ್ಷಣದ ಅಗತ್ಯವಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಆದಿವಾಸಿಗಳು ಮತ್ತು ಇತರ ಹಿಂದುಳಿದ ವರ್ಗಗಳ ಶೈಕ್ಷಣಿಕ ಏಳಿಗೆಗಾಗಿ ಹಲವಾರು ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಹಾಗೂ ಯೋಜನೆಗಳನ್ನು ಜಾರಿಗೆ ತರಲಾಗಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದು ಆರು ದಶಕಗಳು ಗತಿಸಿದರೂ ಸಹ ಬುಡಕಟ್ಟು ಸಮುದಾಯಗಳ ಶೈಕ್ಷಣಿಕ ಪ್ರಗತಿ ನಿರೀಕ್ಷಿತ ಪ್ರಮಾಣವನ್ನು ತಲುಪಿಲ್ಲವೆಂದೇ ಹೇಳಬೇಕಾಗುತ್ತದೆ. ಬುಡಕಟ್ಟುಗಳ ಶೈಕ್ಷಣಿಕ ಪ್ರಗತಿಗಾಗಿ ಸರ್ಕಾರ, ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಕೆಲವು ಪ್ರಮುಖ ವ್ಯಕ್ತಿಗಳ ಅವಿರತ ಪ್ರಯತ್ನ ಪ್ರಮುಖವಾಗಿ ಸಾಗಿದೆ. ಫಲವಾಗಿ ಆದಿವಾಸಿಗಳು ನಿಧಾನವಾಗಿ ಶಿಕ್ಷಣದ ಕಡೆ ಮುಖಮಾಡುತ್ತಿರುವುದು ಕಂಡುಬರುತ್ತದೆ.

**೬.೧ ಶಿಕ್ಷಣದ ಸ್ವರೂಪ**

ಆಧುನಿಕ ಯುಗದಲ್ಲಿ ಶಿಕ್ಷಣವು ಪ್ರಮುಖ ಪಾತ್ರವನ್ನು ವಹಿಸುತ್ತಿದೆ. ಅದಕ್ಕಾಗಿಯೇ 'ಶಿಕ್ಷಣವೇ ಶಕ್ತಿ' ಎಂದು ಕರೆಯಲಾಗುತ್ತಿದೆ. ಶಿಕ್ಷಣ ಸಮಾಜದಲ್ಲಿ ಅಭಿವೃದ್ಧಿಯನ್ನು ತರುತ್ತದೆ. ಸಮಾಜದ ಪರಿವರ್ತನೆಗೆ ಶಿಕ್ಷಣವೇ ಮೂಲ ಮಂತ್ರ. ಶಿಕ್ಷಣದಿಂದಲೇ ವ್ಯಕ್ತಿ ಮತ್ತು ರಾಷ್ಟ್ರದ ಅಭಿವೃದ್ಧಿ ಸಾಧ್ಯವಾಗುತ್ತದೆ. ಶಿಕ್ಷಣವನ್ನು ಅಲಕ್ಷಿಸಿದ ಯಾವೊಂದು ರಾಷ್ಟ್ರವೂ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಿಲ್ಲ. ಶಿಕ್ಷಣವು ವ್ಯಕ್ತಿಯ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. "ಕುಟುಂಬವನ್ನು ಬಿಟ್ಟರೆ ಮಗುವಿನ ಸಾಮಾಜೀಕರಣದಲ್ಲಿ ಪ್ರಭಾವ ಬೀರುವುದರಲ್ಲಿ ಶಾಲೆಯು ಪ್ರಮುಖ ಪಾತ್ರ ವಹಿಸುತ್ತದೆ. ಎಳೆಯ ವಯಸ್ಸಿನ ಬಾಲಕ ಬಾಲಕಿಯರು ಶಾಲೆಯಲ್ಲಿ ಶಿಕ್ಷಣದ ಪರಿಣಾಮದ ಜೊತೆಗೆ ತಮ್ಮ ಗುರುಗಳ ಮತ್ತು ಸ್ನೇಹಿತರ ವ್ಯಕ್ತಿತ್ವಗಳ ಪ್ರಭಾವಕ್ಕೊಳಪಡುತ್ತಾರೆ. ಉತ್ತಮ ಶಾಲೆಯಲ್ಲಿ ಮಗುವಿಗೆ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣಗಳೆರಡೂ ದೊರೆಯುತ್ತವೆ. ಶಾಲೆಯು ಮಗುವನ್ನು ವಿಸ್ತೃತ ಸಮಾಜಕ್ಕೆ ಪರಿಚಯಿಸುವ ಒಂದು ಪ್ರಮುಖ ಕೊಂಡಿಯಾಗಿ ಕೆಲಸ ಮಾಡುತ್ತದೆ. ಶಿಕ್ಷಣವು ಒಂದು ಬಗೆಯ ಪ್ರಕ್ರಿಯೆ. ಈ ಪ್ರಕ್ರಿಯೆಯಿಂದ ಮಗುವಿನ ಜ್ಞಾನ, ಶೀಲ, ವರ್ತನೆ ಮತ್ತು ಮನೋಭಾವಗಳು ಸಾಕಾರಗೊಳ್ಳುತ್ತವೆ. ಮಗುವಿನ ಸುಪ್ತ ಶಕ್ತಿಗಳು ಪ್ರಕಾಶಗೊಳ್ಳುತ್ತವೆ. ಸಾಮರ್ಥ್ಯಗಳು ಪ್ರಕಟಗೊಳ್ಳುತ್ತವೆ. ಸಾಮಾಜೀಕರಣದಲ್ಲಿ ಶಿಕ್ಷಣಕ್ಕೆ ಮಹತ್ತರವಾದ ಸ್ಥಾನವಿದೆ."[೧] ವ್ಯಕ್ತಿಯಲ್ಲಿ ಉತ್ತಮವಾದ ಅಂಶಗಳನ್ನು ಬೆಳೆಸಿ ನಿಜಮಾನವನಾಗಿ ಬಾಳಲು ಪ್ರೇರೇಪಿಸುತ್ತದೆ.

ಮಾನವೀಯ ಮೌಲ್ಯಗಳಾದ ಪ್ರೀತಿ, ವಿಶ್ವಾಸ, ಅನುಕಂಪ, ದಯೆ, ಕರುಣೆ ಮುಂತಾದವುಗಳನ್ನು ಸಿದ್ದಿಸುವಂತೆ ಮಾಡುತ್ತದೆ. ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸಿದ ರಾಷ್ಟ್ರ ಮುಂದುವರೆಯುತ್ತದೆ. ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸದೇ ಇರುವ ರಾಷ್ಟ್ರ ಹಿಂದುಳಿದ ದೇಶವಾಗುತ್ತದೆ.

ಆಧುನಿಕ ಸಮಾಜದಲ್ಲಿ ಶಿಕ್ಷಣ ಅತ್ಯವಶ್ಯಕ. ದೇಶಕ್ಕೆ ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಜವಹರಲಾಲ್ ನೆಹರೂರವರು ಶಿಕ್ಷಣದ ಆವಶ್ಯಕತೆಯನ್ನು ಕುರಿತು ಈ ರೀತಿಯಾಗಿ ಅಭಿಪ್ರಾಯಪಟ್ಟಿದ್ದಾರೆ. "ಕೆಲವು ಸಲ ನಾನು ನಿಜಕ್ಕೂ ಗಲಿಬಿಲಿಗೊಳ್ಳುತ್ತೇನೆ. ನಾನು ಗಮನಿಸಿದ್ದೇನೆ. ಈ ದೇಶದಲ್ಲೊಂದೇ ಅಲ್ಲ, ನಾವು ಗುರುತಿಸುವ ಬಹುದೊಡ್ಡ ರಾಷ್ಟ್ರಗಳಲ್ಲೂ ಹಲವು ಜನ ತಮ್ಮ ಇಷ್ಟ ಮತ್ತು ಯೋಚನೆಗಳಿಗೆ ಅನುಗುಣವಾಗಿಯೇ ಇನ್ನೊಬ್ಬರು ನಡೆದುಕೊಳ್ಳಬೇಕು ಎಂದು ಯೋಚಿಸುತ್ತಿರುತ್ತಾರೆ. ಇಲ್ಲವೇ ತಮ್ಮ ಚಿಂತನೆಗಳನ್ನು ಇನ್ನೊಬ್ಬರ ಮೇಲೆ ಹೇರಲು ಕಾತರಿಸುತ್ತಿರುತ್ತಾರೆ. ನಮ್ಮ ರಾಷ್ಟ್ರಪತಿ ಯಾರು? ಅವರು ರಾಜರೂ ಅಲ್ಲ, ಸಾಮ್ರಾಟರೂ ಅಲ್ಲ. ಅವರೂ ನಮ್ಮಂತೆಯೇ ಮನುಷ್ಯರು. ಅವರು ಬಿಹಾರದ ರೈತ ಕುಟುಂಬದಿಂದ ಬಂದವರು. ರಾಜ ಮಹಾರಾಜರ ಕಾಲ ಎಂದೋ ಮುಗಿದು ಹೋಗಿದೆ. ಈಗ ನಮ್ಮ ದೇಶದ ಜನ ಶಿಕ್ಷಣವನ್ನು ಪಡೆದು, ಅಭಿವೃದ್ಧಿ ಸಾಧಿಸಿ ಸಮಾನತೆಯಿಂದ ಬದುಕುವ ಕಾಲ ಬಂದಿದೆ."[೨]

ಶಿಕ್ಷಣ ಎನ್ನುವುದು ಜ್ಞಾನ ಸಂಗ್ರಹಣೆಯ ವಿಧಾನವಾಗಿದೆ. ಜ್ಞಾನಕ್ಕೆ ಅಂತ್ಯವಿಲ್ಲ. ಅಂದರೆ ಶಿಕ್ಷಣಕ್ಕೆ ಕೊನೆಯೆಂಬುದೇ ಇಲ್ಲ. ವ್ಯಕ್ತಿಯು ಜೀವಿತಾವಧಿಯುದ್ದಕ್ಕೂ ಕಲಿತರೂ ಮುಗಿಯುವುದಿಲ್ಲ. ಶಿಕ್ಷಣ ಎನ್ನುವುದು ಸಾಗರವಿದ್ದಂತೆ. ವ್ಯಕ್ತಿಯ ತಪ್ಪುಗಳನ್ನು ಕಡಿಮೆ ಮಾಡುವುದೇ ಶಿಕ್ಷಣ. ಅಂತಹ ಶಿಕ್ಷಣದಿಂದ ಸಮಾಜದಲ್ಲಿ ಅದೆಷ್ಟೋ ಸಮುದಾಯಗಳು ವಂಚಿತವಾಗಿವೆ. ತೀರಾ ಇತ್ತೀಚಿನವರೆಗೂ ಬುಡಕಟ್ಟು ಸಮುದಾಯಗಳಿಗೆ ಶಿಕ್ಷಣದ ಗಂಧವೇ ತಿಳಿದಿರಲಿಲ್ಲ. ಅಂತಹ ಸಮುದಾಯಗಳಲ್ಲಿ ಸಿದ್ದಿಯರು ಸಹ ಒಂದು.

ಸಿದ್ದಿಯರು ನಾಗರಿಕ ಸಮಾಜದಿಂದ ದೂರದಲ್ಲಿ ವಾಸವಾಗಿರುವ ಸಮುದಾಯವಾಗಿದೆ. ದಟ್ಟವಾದ ಅರಣ್ಯದಲ್ಲಿ, ದುರ್ಗಮ ಪ್ರದೇಶಗಳಲ್ಲಿ, ಗಿರಿ-ಕಂದರಗಳಲ್ಲಿ ವಾಸವಾಗಿದ್ದಾರೆ. ಇಂದಿಗೂ ಸಹ ಬಹುತೇಕ ಸಿದ್ದಿಯರು ದಟ್ಟವಾದ ಅರಣ್ಯದ ಮಧ್ಯದಲ್ಲಿಯೇ ವಾಸವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ವಾಸವಾಗಿರುವ ಇವರು ಕನಿಷ್ಟ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲಾಗದ ಸ್ಥಿತಿಯಲ್ಲಿದ್ದಾರೆ. ಇವರು ವಾಸವಾಗಿರುವ ಪ್ರದೇಶಗಳಿಗೆ ಸರ್ಕಾರದ ಸೌಲಭ್ಯಗಳು ತಲುಪುವುದು ದುಸ್ತರವೇ ಸರಿ. ದಟ್ಟವಾದ ಅರಣ್ಯದ ಮಧ್ಯವಲ್ಲಿ ಅಲ್ಲೊಂದಿಷ್ಟು

ಇಲ್ಲೊಂದಿಷ್ಟು ಜನ ಸಿದ್ದಿಯರು ವಾಸವಾಗಿದ್ದಾರೆ. ಈ ರೀತಿ ವಿರಳ ಸಂಖ್ಯೆಯಲ್ಲಿ ವಾಸವಾಗಿದ್ದಾಗ ಸರ್ಕಾರ ಶಾಲೆಗಳನ್ನು ಪ್ರಾರಂಭಿಸಲು ಹೇಗೆ ಸಾಧ್ಯವಾಗುತ್ತದೆ. ಆದರೂ ಕೆಲವು ಕಡೆ ಸಿದ್ದಿಯರು ವಾಸಿಸುವ ಪ್ರದೇಶಗಳಲ್ಲಿ ಶಾಲೆಗಳನ್ನು ಪ್ರಾರಂಭಿಸುವ ಪ್ರಯತ್ನ ಮಾಡಲಾಗಿದೆ. ಆದರೆ ಆ ಶಾಲೆಗಳು ನಿರೀಕ್ಷಿತ ಮಟ್ಟದಲ್ಲಿ ಪೂರ್ಣ ಪ್ರಮಾಣದ ಸೌಲಭ್ಯಗಳನ್ನು ಒಳಗೊಂಡಿಲ್ಲ. ಪೂರ್ಣ ಪ್ರಮಾಣದ ಸೌಲಭ್ಯಗಳಿದ್ದರೂ ನಿರೀಕ್ಷಿತ ಮಟ್ಟದ ಯಶಸ್ಸನ್ನು ಸಾಧಿಸಿಲ್ಲವೆಂದೇ ಹೇಳಬೇಕಾಗುತ್ತದೆ.[1] ದಟ್ಟವಾದ ಅರಣ್ಯದ ಮಧ್ಯದಲ್ಲಿ ಪ್ರಾರಂಭವಾಗಿರುವ ಶಾಲೆಗೆ ಕರ್ತವ್ಯದ ಮೇಲೆ ನಿಯುಕ್ತಿಗೊಳ್ಳಲು ಶಿಕ್ಷಕರು ಪ್ರಮುಖವಾಗಿ ಹಿಂಜರಿಯುತ್ತಾರೆ. ಅಲ್ಲಿ ಯಾವುದೇ ರೀತಿಯಾದ ಸೌಲಭ್ಯಗಳು ದೊರೆಯುವುದಿಲ್ಲವೆನ್ನುವುದು ಇದಕ್ಕೆ ಪ್ರಮುಖ ಕಾರಣ. ಹಾಗೊಂದು ವೇಳೆ ಮೇಲಾಧಿಕಾರಿಗಳು ಬಲವಂತವಾಗಿ ಶಿಕ್ಷಕರನ್ನು ನಿಯೋಜನೆಗೊಳಿಸಿದರೆ, ಅವರು ಕಾಟಾಚಾರಕ್ಕೆನ್ನುವಂತೆ ಕರ್ತವ್ಯ ನಿರ್ವಹಿಸಬಹುದಾಗಿದೆ. ಆಗ ಮಕ್ಕಳಿಗೆ ಸರಿಯಾದ ಶಿಕ್ಷಣ ದೊರೆಯದೇ ಹೋಗಬಹುದು. "ಶಿಕ್ಷಣವೆಂದರೆ ಕೇವಲ ಜ್ಞಾನ ಸಂಪತ್ತಿನ ವರ್ಗಾವಣೆ ಮಾತ್ರವಾಗಿರದೆ ಭವಿಷ್ಯವನ್ನು ಎದುರಿಸಲು ಅಗತ್ಯವಾದ ಕಲೆ–ಕುಶಲತೆಗಳನ್ನು ಮತ್ತು ಮನೋಭಾವವನ್ನು ಮಗುವಿನಲ್ಲಿ ಬೆಳೆಸುವುದೇ ಆಗಿದೆ. ಪ್ರಾಚೀನ ಗ್ರೀಕ್ ದಾರ್ಶನಿಕ ಪ್ಲೇಟೋನ ಅಭಿಪ್ರಾಯದಲ್ಲಿ ಶಿಕ್ಷಣದ ಮೂಲ ಉದ್ದೇಶವು 'ವಿದ್ಯಾರ್ಥಿಯ ದೇಹ ಮತ್ತು ಆತ್ಮದಲ್ಲಿ ಆತನ ಅರ್ಹತೆಗೆ ತಕ್ಕಂತೆ ಎಲ್ಲ ಸೌಂದರ್ಯ ಮತ್ತು ಪರಿಪಕ್ವತೆಯನ್ನು ಬೆಳೆಸುವುದೇ ಆಗಿದೆ.' ಪ್ಲೇಟೋನ ಅಭಿಪ್ರಾಯವನ್ನು ಸಂಕ್ಷಿಪ್ತದಲ್ಲಿ ಹೇಳುವುದಾದರೆ ಶಿಕ್ಷಣದ ಉದ್ದೇಶವು 'ಸದೃಢವಾದ ದೇಹದಲ್ಲಿ ಸ್ವಸ್ಥ ಮನಸ್ಸನ್ನು ಬೆಳೆಸುವುದೇ ಆಗಿದೆ' ಎಂದೆನ್ನಬಹುದು."[2] ಅಂತಹ ಶಿಕ್ಷಣ ದೊರೆಯದೇ ಹೋದಾಗ ನಿರರ್ಥಕವಾಗಬಹುದಾಗಿದೆ.

ಅರಣ್ಯದಲ್ಲಿನ ಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುವ ಶಿಕ್ಷಕರು ಬಂದರೆ ಶಾಲೆಯಲ್ಲಿಯೇ ಇರುತ್ತಾರೆ. ಇಲ್ಲವೇ ಊರಿಗೆ ಎಂದು ಹೋದರೆ ಮತ್ತೆ ಯಾವಾಗ ಬರುತ್ತಾರೋ ದೇವರೇ ಬಲ್ಲ. "ಶಿಕ್ಷಕರು ಯಾವ ರೀತಿ ಬೋಧನೆ ಮಾಡುತ್ತಾರೆ, ಮಕ್ಕಳ ಕಲಿಕಾ ಮಟ್ಟ ಹೇಗಿದೆ? ಕಲಿಕೆಯಲ್ಲಿ ಏನಾದರು ಲೋಪಗಳು ಇವೆಯೇ ಎಂಬುದನ್ನು ತಿಳಿಯುವುದಕ್ಕಿಂತ ಅಧಿಕಾರಿಗಳು ದೈನಂದಿನ ಆಡಳಿತಕ್ಕೆ ಹೆಚ್ಚಿನ ಒತ್ತು ನೀಡುತ್ತಿದ್ದಾರೆ. ಕ್ಷೇತ್ರ ಶಿಕ್ಷಣಾಧಿಕಾರಿಗಳ ವ್ಯಾಪ್ತಿಯಲ್ಲಿ ನೂರಾರು ಶಾಲೆಗಳು ಬರುತ್ತವೆ. ಆ ಶಾಲೆಗಳ ಶಿಕ್ಷಕರ ವರ್ಗಾವಣೆ, ಬಡ್ತಿ, ಸಂಬಳ ಇತ್ಯಾದಿ ವಿಷಯಗಳಿಗೆ ಒತ್ತು ನೀಡುವ ಶಿಕ್ಷಣಾಧಿಕಾರಿಗಳಿಗೆ ಶಾಲೆಯಲ್ಲಿನ ಮಕ್ಕಳ ಕಲಿಕಾ ಮಟ್ಟದತ್ತ ಗಮನಹರಿಸಲು ಆಗುತ್ತಿಲ್ಲ. ಅಷ್ಟೇ ಅಲ್ಲದೆ ಬಿಆರ್‌ಸಿ, ಸಿಆರ್‌ಸಿಗಳನ್ನಾಗಿ ಸೇವಾ ಹಿರಿತನವನ್ನು ಆಧರಿಸಿ ನಿವೃತ್ತಿಯ ಅಂಚಿನಲ್ಲಿರುವ ಶಿಕ್ಷಕರನ್ನು ಆಯ್ಕೆ ಮಾಡಲಾಗುತ್ತಿದೆ. ಅವರಲ್ಲಿ ನಾಯಕತ್ವದ ಸಾಮರ್ಥ್ಯ, ಉತ್ಸಾಹ ಇಲ್ಲದಿದ್ದರೂ ಹಿರಿತನವನ್ನೇ

ಮಾನದಂಡವನ್ನಾಗಿ ಇಟ್ಟುಕೊಂಡು ಆಯ್ಕೆ ಮಾಡುತ್ತಿರುವುದರಿಂದ ಅವರಲ್ಲಿ ಕ್ರಿಯಾಶೀಲತೆ ಇಲ್ಲದಂತಾಗಿದೆ. ಇದಕ್ಕೆ ಬದಲು ಉತ್ಸಾಹಿ ಯುವ ಶಿಕ್ಷಕರನ್ನು ಆಯ್ಕೆ ಮಾಡಿ ಅವರಿಗೆ ಜವಾಬ್ದಾರಿ ನೀಡುವುದರಿಂದ ಹೊಸ ಆಲೋಚನೆಗಳು, ಬದಲಾವಣೆಗಳನ್ನು ಕಾಣಲು ಸಾಧ್ಯವಾಗುತ್ತದೆ."[೪] ಅಲ್ಲದೆ ಅರಣ್ಯದಲ್ಲಿರುವ ಶಾಲೆಗಳಿಗೆ ಸರಿಯಾದ ಮಾರ್ಗಗಳು ಮತ್ತು ರಸ್ತೆಗಳು ಇಲ್ಲದೆಯೂ ಇರಬಹುದಾಗಿದೆ. ಅಂತಹ ಸಂದರ್ಭದಲ್ಲಿ ಶಾಲೆಗಳು ಸರಿಯಾದ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಅಲ್ಲದೆ ಭಾಷೆಯೂ ಸಹ ತೊಡಕನ್ನುಂಟುಮಾಡುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಪ್ರತಿಯೊಂದು ಆದಿವಾಸಿ ಸಮುದಾಯಗಳೂ ತಮ್ಮದೇ ಆದ ಭಾಷೆಯನ್ನು ಹೊಂದಿರುತ್ತವೆ. ಶಿಕ್ಷಕನಿಗೆ ಅಲ್ಲಿಯ ಆದಿವಾಸಿ ಭಾಷೆ ಗೊತ್ತಿರುವುದಿಲ್ಲ. ವಿದ್ಯಾರ್ಥಿಗಳಿಗೆ ಶಿಕ್ಷಕನ ಭಾಷೆ ಅರ್ಥವಾಗುವುದಿಲ್ಲ. ಆಗ ಶಿಕ್ಷಕ ಮತ್ತು ಮಕ್ಕಳಿಗೆ ಸರಿಯಾದ ಸಂಪರ್ಕವೇರ್ಪಡಲು ಸಾಧ್ಯವಾಗುವುದಿಲ್ಲ. ವಿದ್ಯಾರ್ಥಿ ಮತ್ತು ಶಿಕ್ಷಕರಿಗೆ ಶಿಕ್ಷಣದಲ್ಲಿ ಆಸಕ್ತಿ ಕಳೆಯುವ ಸಾಧ್ಯತೆ ಇರುತ್ತದೆ.

ಕಾಡಿನಲ್ಲಿನ ಮಕ್ಕಳು ಅರಣ್ಯದ ತುಂಬೆಲ್ಲ ಸ್ವಚ್ಛಂದವಾಗಿ ಓಡಾಡಿಕೊಂಡಿರುತ್ತವೆ. ಅಂತಹ ಮಕ್ಕಳನ್ನು ನಾಲ್ಕು ಗೋಡೆಯ ಮಧ್ಯೆ ಕೂಡಿಸಿ ಪಾಠ ಹೇಳಲು ಪ್ರಾರಂಭಿಸಿದರೆ ಮಕ್ಕಳ ಮನಸ್ಸು ಅದಕ್ಕೆ ಸ್ಪಂಧಿಸುವುದಿಲ್ಲ. ಕಾಡಿನಲ್ಲಿಯೇ ಸ್ವಚ್ಛಂದವಾಗಿ ವರ್ತಿಸುತ್ತಾ ಅದರಲ್ಲೇ ಸ್ವರ್ಗವನ್ನು ಕಾಣುವ ಅವರಿಗೆ ಶಿಕ್ಷಣ ಅಷ್ಟು ಬೇಗ ಒಗ್ಗಿಕೊಳ್ಳುವುದಿಲ್ಲ. ಆದಿವಾಸಿ ಮಕ್ಕಳಿಗೆ ಶಾಲೆಯು ಜೈಲಿನ ರೀತಿಯಾಗಬಹುದು. ಮಕ್ಕಳು ಶಾಲೆಗೆ ಬರಬೇಕಾದರೆ ಹಿಂಜರಿಯುತ್ತವೆ ಅದಕ್ಕೆ ಹಲವಾರು ಕಾರಣಗಳಿವೆ. ಅಂತಹವುಗಳಲ್ಲಿ ಮುಖ್ಯವಾದವುಗಳೆಂದರೆ, "* ಮಕ್ಕಳನ್ನು ಆಕರ್ಷಿಸುವ ಮನೋಭಾವದ ಕೊರತೆ. * ತನಗೆ ಕಲಿಸುವ ಶಿಕ್ಷಕರು 'ತನ್ನವರು' ಎಂಬ ಭಾವನೆ ಶಾಲಾ ಆವರಣದಲ್ಲಿ ಶಿಕ್ಷಕರಿಂದ ಸಿಗದೇ ಇರುವುದು. * ಮಕ್ಕಳ ಆಸಕ್ತಿ ಕೆರಳಿಸುವ ಹಾಗೆ ಪಾಠ ಮಾಡದೇ ಇರುವುದು. ಮಕ್ಕಳಿಗೆ ಪಾಠದ ಹೊರೆ ಹೆಚ್ಚಾಗಿರುವುದು, ಪಾಠಗಳನ್ನು ಕಂಠಪಾಠ ಮಾಡಿಸುವುದು. * ಶಿಕ್ಷಕ–ವಿದ್ಯಾರ್ಥಿ–ಪಾಲಕರ ಸಂಬಂಧದಲ್ಲಿ ಕೊರತೆ. * ಮಗುವಿನ ಕಲಿಕಾ ಮಟ್ಟವನ್ನು ಗುರುತಿಸದೇ ಎಲ್ಲರಿಗೂ ಒಂದೇ ರೀತಿಯ ಬೊಧನಾ ತಂತ್ರಗಳಲ್ಲಿ ಬೋಧಿಸುವುದು, ಮಕ್ಕಳಿಗೆ ಒಂದೇ ಕೋಣೆಯಲ್ಲಿ ಕೂಡಿ ಹಾಕಿ ಪಾಠ ಪ್ರವಚನ ಮಾಡಿ 'ಕೈದಿ'ಗಳ ರೀತಿ ಕೂಡಿಹಾಕುವುದು"[೫] ಅಂತಹ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನು ಶಾಲೆಯ ಕಡೆ ಆಕರ್ಷಿತರಾಗುವಂತೆ ಮಾಡಬೇಕಾಗುತ್ತದೆ. ಅಂದಾಗ ಮಾತ್ರ ಆದಿವಾಸಿಗಳಲ್ಲಿ ಶಿಕ್ಷಣದ ಪ್ರಗತಿಯನ್ನು ಕಾಣಲು ಸಾಧ್ಯವಾಗುತ್ತದೆ.

ಸಿದ್ದಿಯರು ಆರ್ಥಿಕವಾಗಿ ಸ್ಥಿತಿವಂತರಿಲ್ಲ. ಹೆಚ್ಚಾನು ಹೆಚ್ಚು ಅಂದಿನ ದಿನದ ಕೂಲಿಯನ್ನು ನೆಚ್ಚಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಗಂಡು-ಹೆಣ್ಣು ಎನ್ನದೆ ಕುಟುಂಬದವರೆಲ್ಲರೂ ದುಡಿಯುವುದಕ್ಕೆ ಹೋಗುವ ಸಾಧ್ಯತೆ ಇದೆ. ಆಗ ಚಿಕ್ಕ ಚಿಕ್ಕ ಮಕ್ಕಳನ್ನು ಕಂಕುಳಲ್ಲಿಟ್ಟುಕೊಂಡು ದುಡಿಮೆಗೆ ಹೋಗುವುದು, ಇಲ್ಲವೇ ಹತ್ತಿರದಲ್ಲಿರುವ ಶಾಲೆಯಲ್ಲಿ ಮಕ್ಕಳನ್ನು ಬಿಟ್ಟು ಕೆಲಸಕ್ಕೆ ಹೋಗುತ್ತಾರೆ. ಮಕ್ಕಳು ಆಟವಾಡಿಕೊಳ್ಳುತ್ತ ನಿಧಾನವಾಗಿ ಶಾಲೆ ಕಲಿಯುವುದನ್ನು ರೂಡಿಸಿಕೊಳ್ಳುತ್ತಾರೆ. ಅಂದರೆ ಮಗು ಸ್ವಲ್ಪ ತಿಳುವಳಿಕೆ ಬಂದು ದೊಡ್ಡದಾಗುತ್ತಿದೆ ಎನ್ನುವ ಸಂದರ್ಭದಲ್ಲಿ ಪೋಷಕರು ಶಾಲೆಯನ್ನು ಬಿಡಿಸಿ ತಮ್ಮ ಜೊತೆಯಲ್ಲಿ ಕೆಲಸಕ್ಕೆ ಕರೆದುಕೊಂಡು ಹೋಗುತ್ತಾರೆ. ಬಡತನವಿರುವುದರಿಂದ ಮಗು ಕೂಡಾ ದುಡಿದು ನಾಲ್ಕು ಕಾಸು ಸಂಪಾದಿಸಲಿ ಎನ್ನುವ ಮನೋಭಾವನೆಯನ್ನು ಹೊಂದಿದ್ದಾರೆ. ಮಗು ಶಾಲೆ ಕಲಿಯುವ ಹಂತದಲ್ಲಿ ಕೂಲಿಗೆ ಕಳುಹಿಸುವುದು ಅಥವಾ ತೋಟದ ಮಾಲಿಕರ ಹತ್ತಿರ ಜೀತಕ್ಕೆ ಬಿಡುವುದು ಸಮುದಾಯದಲ್ಲಿ ಸರ್ವೇ ಸಾಮಾನ್ಯವಾಗಿದೆ. ಸಮುದಾಯದವರಲ್ಲಿ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸುವುದು ಬಹುತೇಕ ಕಂಡುಬರುತ್ತದೆ.

ಸಿದ್ದಿಯರು ಕನ್ನಡ, ಉರ್ದು, ಮರಾಠಿ, ಕೊಂಕಣಿ ಮಿಶ್ರಿತ ಭಾಷೆಯನ್ನು ಹೊಂದಿದ್ದಾರೆ. ಆದರೆ ನಮ್ಮ ಶಿಕ್ಷಣ ವ್ಯವಸ್ಥೆಯ ಭಾಷೆಯು ಅವರಿಗೆ ಪೂರಕವಾಗಿಲ್ಲ. ಮೊದಲಿಗೆ ಸಿದ್ದಿಯರಿಗೆ ಸರಿಯಾಗಿ ಕನ್ನಡ ಮಾತನಾಡಲು ಬರುತ್ತಿದ್ದಿಲ್ಲ. ಆದರೆ ಇತ್ತೀಚೆಗೆ ಸಮುದಾಯದವರು ಕನ್ನಡವನ್ನು ಮಾತನಾಡುತ್ತಿರುವುದರಿಂದ ಭಾಷೆಯ ತೊಡಕು ಅಷ್ಟಾಗಿ ಗೋಚರಿಸುವುದಿಲ್ಲ. ಭಾಷೆಯ ಬಗೆಗಿನ ಸಮಸ್ಯೆ ತಕ್ಕಮಟ್ಟಿಗೆ ನಿವಾರಣೆಯಾಗಿದೆ. ಆದರೆ ಅವರ ಬಡತನ ಅವರಿಗೆ ಶಿಕ್ಷಣವನ್ನು ಒದಗಿಸುತ್ತಿಲ್ಲ. ಅಲ್ಲದೆ ಇಂದಿನ ಶಿಕ್ಷಣದ ಗುಣಮಟ್ಟವನ್ನು ಗಮನಿಸಿದರೆ ತೀರಾ ಕಳಪೆ ಮಟ್ಟದಿಂದ ಕೂಡಿರುವುದು ತಿಳಿದುಬರುತ್ತಿದೆ. ಶಿಕ್ಷಣ ಮತ್ತು ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವುದರ ಸಲುವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಹಣವನ್ನು ವ್ಯಯಿಸುತ್ತಿವೆ. ಆದಾಗ್ಯೂ ಶಿಕ್ಷಣದ ಗುಣಮಟ್ಟ ಸುಧಾರಿಸಿಲ್ಲವೆಂದೇ ಹೇಳಬೇಕಾಗುತ್ತದೆ. "ಇದಕ್ಕೆ ಪುಷ್ಟಿ ನೀಡುವಂತೆ ಅಸರ್ ಮತ್ತು ಪ್ರಥಮ್ ಸಂಸ್ಥೆಗಳು ೨೦೦೯ ರಲ್ಲಿ ನಡೆಸಿರುವ ಸಮೀಕ್ಷೆಗಳಿಂದ ಬಿಹಾರ್, ಮಧ್ಯಪ್ರದೇಶಕ್ಕಿಂತ ಕರ್ನಾಟಕದಲ್ಲಿ ಶೈಕ್ಷಣಿಕ ಸ್ಥಿತಿಗತಿ ತುಂಬಾ ಕೆಟ್ಟದ್ದಾಗಿದೆ ಎಂಬ ಆತಂಕಕಾರಿ ಅಂಶ ಹೊರಬಿದ್ದಿದೆ. ರಾಜ್ಯದಲ್ಲಿ ನಾಲ್ಕರಿಂದ ಏಳನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಶೇ.೬೭ ರಷ್ಟು ಮಕ್ಕಳು ಮಾತ್ರ ಎರಡನೇ ತರಗತಿಯ ಕನ್ನಡ ಪಠ್ಯವನ್ನು ಓದಬಲ್ಲರು. ಆದರೆ ಮಧ್ಯಪ್ರದೇಶದಲ್ಲಿ ಶೇ.೯೨%, ಬಿಹಾರದಲ್ಲಿ ಶೇ.೮೩ ರಷ್ಟು ಮಕ್ಕಳು ಮಾತೃಭಾಷೆಯಲ್ಲಿ ಸ್ಪಷ್ಟವಾಗಿ ಓದುತ್ತಾರೆ. ಅದೇ ರೀತಿ ಐದನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ

ರಾಜ್ಯದಲ್ಲಿನ ಶೇ.೨೧ ರಷ್ಟು ಮಕ್ಕಳು ಮಾತ್ರ ಸರಳ ಗಣಿತದ ಲೆಕ್ಕಗಳನ್ನು ಬಿಡಿಸುತ್ತಾರೆ. ಈ ಪ್ರಮಾಣ ಮಧ್ಯ ಪ್ರದೇಶದಲ್ಲಿ ಶೇ.೬೫ ಹಾಗೂ ಬಿಹಾರದಲ್ಲಿ ಶೇ.೫೨ ರಷ್ಟಿದೆ. ರಾಜ್ಯದಲ್ಲಿನ ಸರ್ಕಾರಿ ಶಾಲೆಗಳಲ್ಲಿ ನಾಲ್ಕನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಶೇ.೧೦ ರಷ್ಟು ಮಕ್ಕಳು ಪದಗಳನ್ನೂ ಸಹ ಗುರುತಿಸುವುದಿಲ್ಲ. ರಾಜ್ಯದಲ್ಲಿ ಒಂದರಿಂದ ಹತ್ತನೇ ತರಗತಿವರೆಗಿನ ಶೇ.೨೦ ರಷ್ಟು ಮಕ್ಕಳು ಶಾಲೆಯಿಂದ ಹೊರಗೆ ಉಳಿದಿದ್ದಾರೆ. ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಈ ಪ್ರಮಾಣ ಶೇ.೨೮ ರಷ್ಟಿದೆ. ಶಾಲೆಯಿಂದ ಹೊರಗೆ ಉಳಿದಿರುವ ಹೆಣ್ಣುಮಕ್ಕಳ ಪ್ರಮಾಣ ಶೇ.೩೨ ರಷ್ಟಿದೆ. ಕರ್ನಾಟಕದಲ್ಲಿ ಶೇ.೮೦ ರಷ್ಟು ಮಕ್ಕಳು ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಆದರೆ ಅವರಿಗೆ ಗುಣಮಟ್ಟದ ಶಿಕ್ಷಣ ಎಂಬುದು ಇನ್ನೂ ಗಗನ ಕುಸುಮವಾಗಿದೆ ಎಂಬುದು ಈ ಸಮೀಕ್ಷೆಗಳ ಅಂಕಿ-ಅಂಶಗಳಿಂದ ಗೊತ್ತಾಗುತ್ತದೆ."[೬]

ಸಾಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಮೊದಲಿಗೆ ಜಾತಿ ಆಧಾರಿತವಾದ ಶಿಕ್ಷಣ ಪದ್ಧತಿ ಇತ್ತು. ಆದರೆ ಇಂದಿನ ಆಧುನಿಕ ಯುಗದಲ್ಲಿ ಶಿಕ್ಷಣದ ಹಲವಾರು ಹಂತಗಳು ಮತ್ತು ವಿಧಗಳಿವೆ. ಅವುಗಳೆಂದರೆ ಮುಖ್ಯವಾಗಿ ಪ್ರಾಥಮಿಕ, ಪ್ರೌಢ ಶಿಕ್ಷಣ, ಪದವಿ ಪೂರ್ವ ಅಥವಾ ೧೧ ಮತ್ತು ೧೨ ನೇ ತರಗತಿ, ಪದವಿ, ಸ್ನಾತಕೋತ್ತರ ಹೀಗೆ ಹಲವಾರು ಬಗೆಯ ಕೋರ್ಸ್‌ಗಳಿವೆ. ಆದರೆ ಇವೆಲ್ಲ ಬಗೆಯ ಶಿಕ್ಷಣಕ್ಕೆ ಪ್ರಾಥಮಿಕ ಹಂತದ ಶಿಕ್ಷಣವೇ ಆಧಾರ ಸ್ತಂಭ. ಈ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಗಳು ಬಲಿಷ್ಠವಾಗಿವೆ. "ಕಂದಾಯ ಇಲಾಖೆಯ ನಂತರದ ಬಹುದೊಡ್ಡ ಇಲಾಖೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ. ಸುಮಾರು ೫೦ ಸಾವಿರ ಸರ್ಕಾರಿ ಶಾಲೆಗಳಿರುವ ಈ ಇಲಾಖೆಯಲ್ಲಿ ಮೂರು ಲಕ್ಷಕ್ಕೂ ಹೆಚ್ಚು ಶಿಕ್ಷಕರಿದ್ದಾರೆ. ಒಂದು ಕೋಟಿ ಮಕ್ಕಳಿದ್ದಾರೆ. ಪ್ರತಿವರ್ಷ ಕೋಟ್ಯಂತರ ರೂಪಾಯಿಯನ್ನು ಶಿಕ್ಷಣಕ್ಕಾಗಿ ವೆಚ್ಚ ಮಾಡಲಾಗುತ್ತಿದೆ."[೭] ಈ ರೀತಿಯ ಉತ್ತಮ ವ್ಯವಸ್ಥೆಯನ್ನು ಹೊಂದಿದ್ದರೂ ಸಹ ನಿರೀಕ್ಷಿತ ಮಟ್ಟದ ಸಾಕ್ಷರತೆಯನ್ನು ಸಾಧಿಸಲು ಸಾಧ್ಯವಾಗಿಲ್ಲವೆಂದೇ ಹೇಳಬೇಕಾಗುತ್ತದೆ.

### ೬.೨ ಆಶ್ರಮ ಶಾಲಾ ವ್ಯವಸ್ಥೆ

ಶಿಕ್ಷಣ ಎನ್ನುವುದು ಕೇವಲ ಒಬ್ಬನ ಅಥವಾ ಒಂದು ಸಮುದಾಯದ ಸ್ವತ್ತಲ್ಲ. ಬದಲಾಗಿ ಇಡೀ ಮನುಕುಲಕ್ಕೆ ಸಂಬಂಧಪಟ್ಟದುದಾಗಿದೆ. ಇತ್ತೀಚಿನವರೆಗೂ ಅಂದರೆ ಬ್ರಿಟೀಷರ ಆಗಮನವಾಗುವವರೆಗೆ ಶಿಕ್ಷಣ ಎನ್ನುವುದು ಕೆಲವೇ ಸಮುದಾಯಗಳಿಗೆ ಮಾತ್ರ ಮೀಸಲು ಎನ್ನುವಂತಾಗಿತ್ತು. ಆದರೆ ಕಾಲ ಗತಿಸಿದಂತೆಲ್ಲಾ ಶಿಕ್ಷಣ ಪದ್ದತಿಯಲ್ಲಿ ಮಹತ್ವದ ಬದಲಾವಣೆಗಳು ಸಾಗುತ್ತಾ ಬಂದವು. ಉನ್ನತ ಜಾತಿಗಳಿಂದ ಹಿಡಿದು ಅಂಚಿನಲ್ಲಿರುವ ಸಮುದಾಯುಗಳವರೆಗೂ ಶಿಕ್ಷಣವನ್ನು ವಿಸ್ತರಿಸಲಾಗಿದೆ. ಸಮಾಜದಲ್ಲಿ ಅನ್ಯಾಯ ಮತ್ತು

ಶೋಷಣೆಗೆ ಒಳಗಾದ ಸಮುದಾಯಗಳೂ ಸಹ ಶಿಕ್ಷಣದ ಕಡೆ ವಾಲುತ್ತಿರುವುದು ಗಮನಿಸಬೇಕಾದ ಪರಿವರ್ತನೀಯ ಅಂಶವಾಗಿದೆ. ಸಮಾಜದಿಂದ ಕಡೆಗಣಿಸಲ್ಪಟ್ಟ ಸಮುದಾಯಗಳು ಇಂದು ಶಿಕ್ಷಣವನ್ನು ಪಡೆಯುತ್ತಿವೆ. ಅದರಲ್ಲಿಯೂ ಮುಖ್ಯವಾಗಿ ಆದಿವಾಸಿ ಸಮುದಾಯಗಳು ಶಿಕ್ಷಣವನ್ನು ಹೊಂದುತ್ತಿವೆ. ಇದಕ್ಕೆ ಮುಖ್ಯ ಕಾರಣವೆಂದರೆ, "ಸರ್ಕಾರದ ಜೊತೆಗೆ ಕರ್ನಾಟಕದಲ್ಲಿ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್, ಡೀಡ್, ಎಫ್‌ಇಡಿಐಎನ್‌ಎ, ಸಿಓಆರ್‌ಡಿ, ಸಮಗ್ರ ಗ್ರಾಮೀಣ ಆಶ್ರಮ, ಜನಶಿಕ್ಷಣ ಟ್ರಸ್ಟ್, ಚಿಂತನ ಫೌಂಡೇಷನ್, ಡಿಯುಡಿಐ, ಸಮೃದ್ಧಿ/ಕೃಪಾ, ವನವಾಸಿ ಕಲ್ಯಾಣ ಆಶ್ರಮ ಮೊದಲಾದ ಎನ್‌ಜಿಓ ಸರ್ಕಾರೇತರ ಸಂಸ್ಥೆಗಳು ಆದಿವಾಸಿಗಳ ಏಳಿಗೆಗೆ ದುಡಿಯುತ್ತಿವೆ."[೮]

ಸಿದ್ದಿಯರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವಾಗಿದೆ. ಆದರೆ ಇಂದು ನಿಧಾನವಾಗಿ ಆಧುನಿಕತೆಯ ಕಡೆ ಅಂಬೆಗಾಲಿಡುವ ಪ್ರಯತ್ನ ಮಾಡುತ್ತಿದ್ದಾರೆ. ಇವರು ಶಿಕ್ಷಣದ ಕಡೆ ಮುಖ ಮಾಡುತ್ತಿದ್ದಾರೆ. ಶಿಕ್ಷಣವು ಉಳಿದ ಎಲ್ಲಾ ಕ್ಷೇತ್ರಗಳನ್ನು ಬಲಪಡಿಸುವ ಸಾಧನವಾಗಿದೆ. "ಶಿಕ್ಷಣವು ಸಾಮಾಜಿಕ ಪುನರ್‌ರಚನೆಯ ಸಾಧನ; ಸಾಮಾಜಿಕ, ರಾಜಕೀಯ, ಆರ್ಥಿಕ, ನೈತಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಅಗತ್ಯವಾದ ಒಂದು ಚಟುವಟಿಕೆ. ವ್ಯಕ್ತಿಯ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳ ಸರ್ವಾಂಗೀಣ ವಿಕಾಸವೇ ಶಿಕ್ಷಣವಾಗಿದೆ."[೯] ಇಂತಹ ಶಿಕ್ಷಣವನ್ನು ಪಡೆಯುವ ಪ್ರಯತ್ನವನ್ನು ಸಿದ್ದಿಯರು ಮಾಡುತ್ತಿದ್ದಾರೆ. ದೇಶಾದ್ಯಂತ ಆದಿವಾಸಿಗಳಿಗೆ ಶಿಕ್ಷಣವನ್ನು ಒದಗಿಸುವ ಪ್ರಯತ್ನವನ್ನು ಸರ್ಕಾರ, ಸಂಘ ಸಂಸ್ಥೆಗಳು ಮತ್ತು ಸಮಾಜ ಸೇವಾ ಧುರೀಣ ವ್ಯಕ್ತಿಗಳು ಮಾಡುತ್ತಿದ್ದಾರೆ.

ಆದಿವಾಸಿಗಳಿಗೆ ಶಿಕ್ಷಣವನ್ನು ಒದಗಿಸುವಲ್ಲಿ ಸಮಾಜಸೇವಾ ಮನೋಭಾವನೆಯ ವ್ಯಕ್ತಿಗಳ ಪ್ರಮುಖ ಪ್ರಯತ್ನಗಳೂ ಸಹ ಸಾಗಿವೆ. ಅಂತಹ ಪ್ರಯತ್ನಗಳಲ್ಲಿ ಡಾ. ಅಚ್ಯುತಾನಂದ ಸಮಂತಾರವರು ಒಬ್ಬರಾಗಿದ್ದಾರೆ. ಇವರು ಒರಿಸ್ಸಾ ರಾಜ್ಯದಲ್ಲಿ ಬುಡಕಟ್ಟು ಮಕ್ಕಳಿಗಾಗಿ ಕಳಿಂಗ ಸಾಮಾಜಿಕ ವಿಜ್ಞಾನ ಸಂಸ್ಥೆಯನ್ನು ಪ್ರಾರಂಭಿಸಿದ್ದಾರೆ. "ಕಳಿಂಗ ರಿಲೀಫ್ ಆ್ಯಂಡ್ ಚಾರಿಟೇಬಲ್ ಟ್ರಸ್ಟ್ 'ಕಿಸ್'. ಈ ಸಂಸ್ಥೆ ಸುಮಾರು ಐದು ಸಾವಿರ ಮಂದಿ ಬುಡಕಟ್ಟು ಮಕ್ಕಳನ್ನು ಒಳಗೊಂಡ ಉಚಿತ ವಸತಿ ಶಾಲೆ ನಡೆಸುತ್ತಿದೆ. ಒರಿಸ್ಸಾದ ಒಟ್ಟಾರೆ ಜನಸಂಖ್ಯೆಯಲ್ಲಿ ಶೇ.೨೫ ರಷ್ಟು ಬುಡಕಟ್ಟು ಸಮುದಾಯಕ್ಕೆ ಸೇರಿದವರು. ೬೨ ಕ್ಕೂ ಹೆಚ್ಚು ಬುಡಕಟ್ಟು ಸಮುದಾಯಗಳು ಆ ರಾಜ್ಯಾದ್ಯಂತ ಹರಡಿಕೊಂಡಿವೆ. ಒಂದೊಂದು ಸಮುದಾಯದ ಆಚಾರ ವಿಚಾರವೂ ಇನ್ನೊಂದಕ್ಕಿಂತ ಭಿನ್ನ. ಅರ್ಧಕ್ಕೂ ಹೆಚ್ಚು

ಸಮುದಾಯಗಳು ಕಾಡಿನಲ್ಲೇ ವಾಸ. ಅಲ್ಲಿನ ಬುಡಕಟ್ಟು ಜನಾಂಗಗಳಲ್ಲಿ 'ಬೊಂಡಾ' ಪುರಾತನವಾದದ್ದು. ಈ ಸಮುದಾಯಕ್ಕೆ ಸೇರಿದವರು ಈಗಲೂ ಕಾಡಿನಲ್ಲಿ ಮರಗಳ ಮೇಲೆ ಚಿತ್ತಲೆಯಾಗಿಯೇ ವಾಸಿಸುತ್ತಾರೆ."[೧೦] ಅಂತಹ ಆದೀಮ ಬುಡಕಟ್ಟುಗಳನ್ನು ಮುಖ್ಯ ವಾಹಿನಿಗೆ ತಂದು ಉತ್ತಮವಾದ ಜೀವನವನ್ನು ರೂಪಿಸಿಕೊಳ್ಳಲು ಸಹಾಯ ಮಾಡುತ್ತಿದೆ.

"ಶಿಕ್ಷಣವು ಸಿದ್ದಿಗಳ ಸರ್ವತೋಮುಖ ಅಭಿವೃದ್ಧಿಯಲ್ಲಿ ಪ್ರಮುಖ ಕಾರ್ಯ ನಿರ್ವಹಿಸಬಲ್ಲದು. ಸಿದ್ದಿಗಳ ಬಾಲಕ ಬಾಲಕಿಯರು ಶಾಲೆಗಳಿಗೆ ಹೋಗಿ ಅಕ್ಷರಾಭ್ಯಾಸ ಮತ್ತು ಸಾಮಾನ್ಯ ಜ್ಞಾನ ಪಡೆದುಕೊಳ್ಳುತ್ತಿರುವುದು ಸಂತಸದ ಸಂಗತಿ. ಆಧುನೀಕರಣದ ಮೌಲ್ಯಗಳು ನಿರ್ಮಿಸುವ ಹೊಸ ಪರಿಸ್ಥಿತಿಗೆ ಸೂಕ್ತವಾಗಿ ಹೊಂದಿಕೊಳ್ಳುವಲ್ಲಿ, ಸಮತೋಲನವಾದ ವ್ಯಕ್ತಿತ್ವವನ್ನು ಬೆಳೆಸಿಕೊಂಡು 'ತನ್ನತನ'ದಲ್ಲಿ ಹೆಮ್ಮೆ ಹಾಗೂ ಆತ್ಮವಿಶ್ವಾಸ ಮೂಡುವಲ್ಲಿ ಸಿದ್ದಿ ಸಮುದಾಯಕ್ಕೆ ಆಧುನಿಕ ಶಿಕ್ಷಣ ಅತ್ಯಗತ್ಯ."[೧೧] ಅಂತಹ ಶಿಕ್ಷಣವನ್ನು ಒದಗಿಸುವಲ್ಲಿ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳಲ್ಲದೆ ಸಂವಿಧಾನವೂ ಸಹ ಅವಕಾಶವನ್ನು ಮಾಡಿಕೊಡುತ್ತಿದೆ. ಬುಡಕಟ್ಟು ಸಮುದಾಯಗಳ ಶಿಕ್ಷಣಕ್ಕಾಗಿ ಆಶ್ರಮ ಶಾಲೆಗಳನ್ನೂ ಸಹ ಪ್ರಾರಂಭಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಸುಮಾರು ೧೯೭೦ ರ ದಶಕದಲ್ಲಿ ಗಿರಿಜನ ಆಶ್ರಮ ಶಾಲೆಗಳು ಪ್ರಾರಂಭವಾದವು. ಅದರಲ್ಲಿಯೂ ಮುಖ್ಯವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಆದಿವಾಸಿಗಳು ವಾಸಿಸುವ ಪ್ರದೇಶಗಳಲ್ಲಿ ಇವುಗಳನ್ನು ಪ್ರಾರಂಭಿಸಲಾಗಿದೆ. ಒಂದು ಅಂದಾಜಿನ ಪ್ರಕಾರ ರಾಜ್ಯದಲ್ಲಿ ೧೨೦ ಕ್ಕೂ ಅಧಿಕ ಗಿರಿಜನ ಆಶ್ರಮ ಶಾಲೆಗಳು ಕಾರ್ಯನಿರತವಾಗಿವೆ.

ಗಿರಿಜನ ಸಮುದಾಯಗಳಿಗೆ ಶಿಕ್ಷಣವನ್ನು ಒದಗಿಸುವ ಮಹತ್ವದ ಉದ್ದೇಶದಿಂದ ಆಶ್ರಮ ಶಾಲಾ ವ್ಯವಸ್ಥೆಯನ್ನು ಜಾರಿಗೆ ತಂದಿದೆ. ಇದರಿಂದಾಗಿ ಸಮುದಾಯಗಳು ಶೈಕ್ಷಣಿಕವಾಗಿ ಮುಂದುವರೆಯಲು ಅವಕಾಶವಾಗುತ್ತಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿಯೂ ಸಹ ಹಲವಾರು ಆಶ್ರಮ ಶಾಲಾ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಲಾಗಿದೆ. ಅಂತಹವುಗಳಲ್ಲಿ ಮುಖ್ಯವಾದವುಗಳೆಂದರೆ, ಹಳಿಯಾಳ, ದಾಂಡೇಲಿ, ತೆರಗಾಂವ್, ಮುರಕೋಡ, ಯಲ್ಲಾಪುರ, ನಾಕ. ಹಳಿಯಾಳದಲ್ಲಿರುವ ಆಶ್ರಮ ಶಾಲೆಯು ೧೯೬೩ ರಲ್ಲಿಯೇ ಪ್ರಾರಂಭವಾಗಿ ನಿರಂತರವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಕೆಲವು ಆಶ್ರಮ ಶಾಲೆಗಳು ಒಂದರಿಂದ ಐದನೇ ತರಗತಿಯನ್ನು ಹೊಂದಿದ್ದರೆ, ೬ ರಿಂದ ೧೦ ನೇ ತರಗತಿಯವರೆಗೆ ಕೆಲವು ಆಶ್ರಮ ಶಾಲೆಗಳು ಕಂಡುಬರುತ್ತಿವೆ. ಒಂದೊಂದು ತರಗತಿಗೆ ೨೫ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಲು ಅವಕಾಶವಿದೆ. ಅಂದರೆ ೧ ರಿಂದ ೫ ನೇ ತರಗತಿ ಇರುವ ಆಶ್ರಮ ಶಾಲೆಯಲ್ಲಿ ೧೨೫ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನೀಡಲಾಗುತ್ತದೆ. ಈ ಶಾಲೆಗಳಿಗೆ ಹುಡುಗ ಮತ್ತು ಹುಡುಗಿಯರನ್ನು ಸೇರಿಸಿಕೊಳ್ಳಲಾಗುತ್ತದೆ. ಆದರೆ ೬ ರಿಂದ ೧೦ ನೇ ತರಗತಿಯವರೆಗೆ

ಹುಡುಗ ಮತ್ತು ಹುಡುಗಿಯರಿಗೆ ಪ್ರತ್ಯೇಕ ಆಶ್ರಮ ಶಾಲೆಗಳಿವೆ. ಅಲ್ಲಿ ಕ್ರಮವಾಗಿ ೬೦ ಮತ್ತು ೪೦ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲಾಗುತ್ತದೆ.

ಆಶ್ರಮ ಶಾಲೆಗಳಿಗೆ ೬ ವರ್ಷ ಮೇಲ್ಪಟ್ಟ ಮಕ್ಕಳನ್ನು ಒಂದನೇ ತರಗತಿಗೆ ಪ್ರವೇಶವನ್ನು ಮಾಡಿಕೊಳ್ಳಲಾಗುತ್ತದೆ. ಅಂದರೆ ವಿದ್ಯಾರ್ಥಿಗೆ ೬ ವರ್ಷಗಳು ತುಂಬಿದ್ದರೆ ಮಾತ್ರ ಪ್ರವೇಶಕ್ಕೆ ಅರ್ಹತೆಯನ್ನು ಪಡೆದುಕೊಳ್ಳುತ್ತಾನೆ. ಆಶ್ರಮ ಶಾಲೆ ಸೇರ್ಪಡೆಯಾಗಬೇಕಾದ ಆಯಾ ಜಾತಿಯ ವಿದ್ಯಾರ್ಥಿಗಳು ತಹಶೀಲ್ದಾರರಿಂದ ದೃಢೀಕೃತವಾದ ಜಾತಿ ಪ್ರಮಾಣಪತ್ರಗಳನ್ನು ಕಡ್ಡಾಯವಾಗಿ ಸಲ್ಲಿಸಬೇಕು. ಈ ರೀತಿಯಾದ ಕ್ರಮದಿಂದ ನೊಂದಣಿಯನ್ನು ನೀಡಲಾಗುತ್ತದೆ. ೫ ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣವಾದ ಮಗು ಮುಂದಿನ ಆಶ್ರಮ ಶಾಲೆಗೆ ಅರ್ಹತೆಯನ್ನು ಪಡೆಯುತ್ತಾನೆ. ೫ ನೇ ತರಗತಿ ಮುಗಿದ ನಂತರ ಮುಂದಿನ ಆಶ್ರಮ ಶಾಲೆಗೆ ಸೇರಬೇಕಾದರೆ, ಇಲ್ಲಿ ಕೊಡುವ ವರ್ಗಾವಣೆ ಪ್ರಮಾಣಪತ್ರ ಪ್ರಮುಖವಾಗಿರುತ್ತದೆ. ಆಶ್ರಮ ಶಾಲೆಯ ವಿದ್ಯಾರ್ಥಿಗಳಿಗೆ ಮುಂದಿನ ಆಶ್ರಮ ಶಾಲೆಯಲ್ಲಿ ಸೀಟು ಕಡ್ಡಾಯವಾಗಿ ದೊರೆಯುತ್ತದೆ.

ಆಶ್ರಮ ಶಾಲೆಗಳು ಅಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಹಲವಾರು ಸೌಕರ್ಯಗಳನ್ನು ಒದಗಿಸುತ್ತವೆ. ಅವುಗಳೆಂದರೆ ಮುಖ್ಯವಾಗಿ ಒಂದು ಮಗುವಿಗೆ ತಿಂಗಳಿಗೆ ೩೫೦ ರೂಪಾಯಿಗಳಂತೆ ಊಟಕ್ಕಾಗಿ ವ್ಯಯಿಸುವುದರ ಮುಖಾಂತರ ಉಚಿತ ಊಟವನ್ನು ಒದಗಿಸುತ್ತದೆ. ವಸತಿ ವ್ಯವಸ್ಥೆಯನ್ನು ನಿಡುತ್ತದೆ. ಸಾಬೂನು ಮತ್ತು ಕೊಬ್ಬರಿ ಎಣ್ಣೆಗಾಗಿ ಒಂದು ಮಗುವಿಗೆ ತಿಂಗಳಿಗೆ ೧೫ ರೂಪಾಯಿಗಳನ್ನು ಖರ್ಚು ಮಾಡುತ್ತದೆ. ಮಕ್ಕಳ ಬಟ್ಟೆಯನ್ನು ತೊಳೆದುಕೊಡುವ ವ್ಯವಸ್ಥೆಯನ್ನು ಮಾಡಲಾಗಿದೆ. ವರ್ಷಕ್ಕೆ ೨ ಜೊತೆ ಸಮವಸ್ತ್ರಗಳನ್ನು ನಿಡಲಾಗುತ್ತದೆ. ಉಚಿತ ಪುಸ್ತಕಗಳ ವಿತರಣೆಯನ್ನು ಮಾಡಲಾಗುತ್ತದೆ. ಮಕ್ಕಳಿಗೆ ಆಟದ ಸಲಕರಣೆಗಳನ್ನು ಒದಗಿಸಲಾಗುತ್ತದೆ. ಉಚಿತ ವೈದ್ಯಕೀಯ ತಪಾಸಣೆಯನ್ನು ಮಾಡಿಸಲಾಗುತ್ತದೆ. ಇಲಾಖೆಯ ಪ್ರಕಾರ ಪ್ರತಿ ೬ ತಿಂಗಳಿಗೊಮ್ಮೆ ಉಚಿತ ವೈದ್ಯಕೀಯ ತಪಾಸಣೆ ಮಾಡಲು ಅವಕಾಶ ಕಲ್ಪಿಸಿದೆ. ಅಲ್ಲದೆ ಮಧ್ಯದಲ್ಲಿ ಮಗುವಿಗೆ ಯಾವುದಾದರೂ ಚಿಕಿತ್ಸೆ ಕೊಡಬೇಕಾದ ಸಂದರ್ಭ ಒದಗಿದರೆ, ಅದಕ್ಕೂ ಅವಕಾಶವಿದೆ. ಹೀಗೆ ಹಲವಾರು ರೀತಿಯ ಸೌಲಭ್ಯಗಳನ್ನು ಆಶ್ರಮ ಶಾಲೆಗಳು ಒದಗಿಸುತ್ತವೆ.

ಬುಡಕಟ್ಟು ಸಮುದಾಯಗಳು ವಾಸಿಸುವ ಪ್ರದೇಶದಲ್ಲಿ ಗಿರಿಜನ ಮಕ್ಕಳಿಗೆ ಶಿಕ್ಷಣವನ್ನು ನೀಡುವುದರ ಸಲುವಾಗಿ ಆಶ್ರಮ ಶಾಲೆಗಳನ್ನು ಪ್ರಾರಂಭಿಸಲಾಗಿದೆ. ಆದರೆ ಗಿರಿಜನ ಆಶ್ರಮ ಶಾಲೆಗಳು ಸಮುದಾಯದವರ ಭೌತಿಕ ಜೀವನದಲ್ಲಿ ಅಗಾಧವಾದ ಬದಲಾವಣೆಗಳನ್ನು ತರುತ್ತದೆ ಎಂದು ನಿರೀಕ್ಷಿಸಲಾಗಿತ್ತು. ಆದರೆ ಗಿರಿಜನ ಆಶ್ರಮ ಶಾಲೆಗಳು ಅನೇಕ ಕಡೆಗಳಲ್ಲಿ

ಪರಿಣಾಮಕಾರಿಯಾಗಿ ಕೆಲಸ ಮಾಡಲು ವಿಫಲವಾಗಿವೆ. ಶಿಕ್ಷಣದ ವಿಧಾನವನ್ನು ಅನುಷ್ಠಾನಗೊಳಿಸುವುದರಿಂದ ಹಿಡಿದು ಸರ್ಕಾರದ ಮೇಲ್ವಿಚಾರಣೆಯವರೆಗೆ ಹಲವಾರು ವೈಫಲ್ಯಗಳನ್ನು ಹೊಂದಿವೆ. ಈ ಶಾಲೆಗಳು ಗಿರಿಜನರ ಮಧ್ಯೆ ಪರಿಣಾಮಕಾರಿಯಾಗಿ ಕೆಲಸ ಮಾಡಲು ವಿಫಲವಾಗಿವೆ. ಕೆಲವು ಕಡೆ ಅಗತ್ಯಕ್ಕೆ ತಕ್ಕಷ್ಟು ಶಿಕ್ಷಕರು ಕಂಡುಬರುವುದಿಲ್ಲ. ಮತ್ತೆ ಕೆಲವು ಕಡೆ ಕಟ್ಟಡಗಳಿದ್ದರೂ ಶಿಕ್ಷಕರೇ ಇರುವುದಿಲ್ಲ. ಹೀಗೆ ಹಲವಾರು ವೈಫಲ್ಯತೆಯನ್ನು ಹೊಂದಿರುವುದರಿಂದ ಆದಿವಾಸಿಗಳ ಶಿಕ್ಷಣ ಮಟ್ಟವನ್ನು ಸುಧಾರಿಸಲು ಸಾಧ್ಯವಾಗಿಲ್ಲವೆಂದೇ ಹೇಳಬೇಕಾಗುತ್ತದೆ.

ನಮ್ಮ ಕರ್ನಾಟಕ ರಾಜ್ಯದಲ್ಲಿ ೫೦ ಸಮುದಾಯಗಳು ಪರಿಶಿಷ್ಟ ಪಂಗಡದಲ್ಲಿ ಬರುತ್ತವೆ. ಅದರಲ್ಲಿ ಸಿದ್ದಿಯರು ಸಹ ಒಂದು. ಸಿದ್ದಿಯರು ಅತ್ಯಂತ ಹಿಂದುಳಿದ ಸಮುದಾಯದವರಾಗಿದ್ದಾರೆ. ಸರ್ಕಾರ ಪರಿಶಿಷ್ಟ ಪಂಗಡಗಳಿಗೆ ನೀಡುವ ಸೌಲಭ್ಯಗಳನ್ನು ಸರಿಯಾಗಿ ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಪರಿಶಿಷ್ಟ ವರ್ಗದವರಿಗೆ ನೀಡುತ್ತಿರುವ ಮೀಸಲಾತಿ ಆದಿವಾಸಿಗಳ ಒಟ್ಟಾರೆ ಜನಸಂಖ್ಯೆಯ ಆಧಾರದ ಮೇಲೆ ಕಲ್ಪಿಸಿದ್ದರೂ, ಅದು ಕಡಿಮೆ ಮಟ್ಟದ್ದಾಗಿದೆ. ಅದರಲ್ಲಿಯೂ ಮುಖ್ಯವಾಗಿ ಆದಿವಾಸಿಗಳಲ್ಲಿ ೫೦ ಸಮುದಾಯಗಳನ್ನು ಸೇರ್ಪಡೆ ಮಾಡಲಾಗಿದೆ. ಇವುಗಳಲ್ಲಿ ಸ್ವಲ್ಪ ಮುಂದುವರೆದ ಸಮುದಾಯಗಳು ಸರ್ಕಾರದ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿವೆ. ಅಂದಾಗ ಸಿದ್ದಿಯರಂತಹ ಹಿಂದುಳಿದ ಸಮುದಾಯಗಳಿಗೆ ಸೌಲಭ್ಯಗಳು ಅಷ್ಟೊಂದು ದೊರೆಯುತ್ತಿಲ್ಲ. ಅಂತಹವುಗಳಲ್ಲಿ ಆಶ್ರಮ ಶಾಲಾ ವ್ಯವಸ್ಥೆಯೂ ಸಹ ಒಂದು. ಆಶ್ರಮ ಶಾಲೆಗಳಿಗೆ ಇತರ ಸಮುದಾಯಗಳ ಮಕ್ಕಳು ಪ್ರಮುಖ ಸ್ಪರ್ಧಿಗಳಾಗಿವೆ. ಮೊದಲಿಗೆ ಸಿದ್ದಿಯರ ಮಕ್ಕಳು ಆಶ್ರಮ ಶಾಲೆಗಳಿಗೆ ಅಷ್ಟಾಗಿ ಪ್ರವೇಶ ಪಡೆಯುತ್ತಿದ್ದಿಲ್ಲ. ಆದರೆ ಇತ್ತೀಚೆಗೆ ಶಾಲೆ ಕಲಿಯುವ ಮಕ್ಕಳ ಸಂಖ್ಯೆಯಲ್ಲಿ ಗಣನೀಯವಾದ ಬದಲಾವಣೆ ಕಂಡುಬರುತ್ತಿದೆ. ಸಮುದಾಯದವರು ಇಂದು ಶಿಕ್ಷಣದ ಕಡೆ ಮುಖ ಮಾಡುತ್ತಿದ್ದಾರೆ. ಆದರೂ ಸಮುದಾಯದಲ್ಲಿ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸುವ ಪ್ರವೃತ್ತಿ ಇನ್ನೂ ಕಡಿಮೆಯಾಗಬೇಕಾಗಿದೆ.

ಹಿಂದುಳಿದ ಸಮುದಾಯಗಳ ಸಲುವಾಗಿ ಸರಕಾರ ಶಿಕ್ಷಣದಲ್ಲಿ ಹಲವಾರು ಉತ್ತಮವಾದ ಕ್ರಮಗಳನ್ನು ಕೈಗೊಳ್ಳುತ್ತಿದೆ. ಅಂದರೆ ಹಿಂದುಳಿದ ಸಮುದಾಯಗಳೂ ಕೂಡ ಎಲ್ಲಾ ಬಗೆಯ ಶಿಕ್ಷಣವನ್ನು ಪಡೆಯಬೇಕೆಂಬ ಉದ್ದೇಶದಿಂದ ಉನ್ನತ ಕೋರ್ಸ್‌ಗಳಿಗೆ ಮೀಸಲಾತಿಯ ಸೌಲಭ್ಯವನ್ನು ಕಲ್ಪಿಸಿದೆ. ಇಂದಿನ ಆಧುನಿಕ ಯುಗದಲ್ಲಿ ಶಿಕ್ಷಣ ವ್ಯಾಪಾರೀಕರಣಗೊಳ್ಳುತ್ತಿದೆ. ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ಶಿಕ್ಷಣವನ್ನು ವ್ಯಾಪಾರ ವ್ಯವಹಾರದ ದೃಷ್ಟಿಯಲ್ಲಿ ವ್ಯವಹರಿಸುತ್ತಿವೆ. ಈ ರೀತಿಯ ಸಂದರ್ಭದಲ್ಲಿ "ಕೇಂದ್ರ ಸರ್ಕಾರ

ಕಡ್ಡಾಯ ಶಿಕ್ಷಣ ಹಕ್ಕಿನ ಚೌಕಟ್ಟನ್ನು ರೂಪಿಸಿ ರಾಜ್ಯ ಸರ್ಕಾರಕ್ಕೆ ಕಳುಹಿಸಿದೆ. ರಾಜ್ಯ ಸರ್ಕಾರ ಸಾರ್ವಜನಿಕರ ಅಹವಾಲು ಕೇಳುವ ಉತ್ಸಾಹ ತೋರಿದೆ. ಇದೆಲ್ಲ ಸರಿ. ಆದರೆ ಶೇ.೨೫ ರ ಮೀಸಲಾತಿಗೆ ಕೆಲವೊಂದು ಖಾಸಗಿ ಶಾಲೆಗಳು ಅಪಸ್ವರ ಎತ್ತಿವೆ. ಆರ್ಥಿಕವಾಗಿ ಹಿಂದುಳಿದವರಿಗೆ. ಪರಿಶಿಷ್ಟ ವರ್ಗ – ಪರಿಶಿಷ್ಟ ಪಂಗಡಗಳ ಮಕ್ಕಳಿಗೆ ಖೋಟಾ ಕಾಯ್ದಿಟ್ಟರೆ ಶಿಕ್ಷಣದಂಗಡಿಯ (?) ಲಾಭಕ್ಕೆ ಹೊಡೆತ ಬೀಳುತ್ತದೆಂಬ ಭಯ. ಮೀಸಲಾತಿ ಮೂಲಕ ಪ್ರವೇಶ ಪಡೆಯುವ ಮಕ್ಕಳ ಪಾಲಕರಿಂದ ದುಬಾರಿ ಶುಲ್ಕ, ದುಪ್ಪಟ್ಟು ಡೊನೇಷನ್, ಕಪ್ಪ ಕಾಣಿಕೆ ಪಡೆಯುವಂತಿಲ್ಲ."[೧೨] ಅದಕ್ಕಾಗಿ ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ಶಿಕ್ಷಣದಲ್ಲಿನ ಮೀಸಲಾತಿಯನ್ನು ವಿರೋಧಿಸುತ್ತಿವೆ. ಆದರೆ ಸರ್ಕಾರದ ಇಂತಹ ಕ್ರಮ ಜಾರಿಗೆ ಬಂದರೆ ಹಿಂದುಳಿದ ವರ್ಗಗಳು ಶೈಕ್ಷಣಿಕವಾಗಿ ಮುಂದುವರೆದು ಸಮಾಜದ ಮುಖ್ಯ ವಾಹಿನಿಗೆ ಬರುವಲ್ಲಿ ಸಹಾಯಕವಾಗುತ್ತದೆ.

ಪ್ರಾಥಮಿಕ ಹಂತದಿಂದ ಹಿಡಿದು ಉನ್ನತ ವ್ಯಾಸಂಗದವರೆಗೆ ವಿದ್ಯಾರ್ಥಿಗಳನ್ನು ಆಕರ್ಷಿಸುವುದರ ಸಲುವಾಗಿ ಸರ್ಕಾರ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತರುತ್ತಿದೆ. ಅದರಲ್ಲಿಯೂ ಮುಖ್ಯವಾಗಿ ಪ್ರಾಥಮಿಕ ಹಂತದಲ್ಲಿ ಪ್ರತಿಯೊಂದು ಮಗು ಶಾಲೆಯತ್ತ ಧಾವಿಸಲು ಹಲವಾರು ಯೋಜನೆಗಳನ್ನು ಜಾರಿಗೆ ತಂದಿದೆ. ಅಂತಹ ವಿಶಿಷ್ಟ ಕಾರ್ಯಕ್ರಮಗಳೆಂದರೆ, "ಸರ್ವ ಶಿಕ್ಷಣ ಅಭಿಯಾನ ಯೋಜನೆ ಜಾರಿಗೆ ಬಂದ ನಂತರ ಶಿಕ್ಷಣಕ್ಕೆ ಹಣದ ಕೊರತೆ ಉಂಟಾಗಿಲ್ಲ. ಕೇಂದ್ರದ ನೆರವಿನೊಂದಿಗೆ ರಾಜ್ಯ ಸರ್ಕಾರ ತನ್ನ ಪಾಲಿನ ಹಣವನ್ನು ನೀಡುತ್ತಿದೆ. ಸಾರ್ವಜನಿಕ ಶಿಕ್ಷಣ ಇಲಾಖೆಯು 'ಬಾ ಬಾಲೆ ಶಾಲೆಗೆ', 'ಕೂಲಿಯಿಂದ ಶಾಲೆಗೆ', 'ಬೀದಿಯಿಂದ ಶಾಲೆಗೆ', 'ಟೆಂಟ್ ಶಾಲೆ', 'ಸಮುದಾಯದತ್ತ ಶಾಲೆ', 'ಚಿಣ್ಣರ ಅಂಗಳ', 'ಮಧ್ಯಾನದ ಬಿಸಿಯೂಟ' ಯೋಜನೆ ಸೇರಿದಂತೆ ಹಲವು ಯೋಜನೆಗಳನ್ನು ರೂಪಿಸಿದೆ."[೧೩]

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸರ್ಕಾರ ಮತ್ತು ಸಂವಿಧಾನ ಹಲವಾರು ಯೋಜನೆಗಳನ್ನು ಜಾರಿಗೆ ತಂದಿವೆ. ಅದರ ಫಲವಾಗಿ ಸಮುದಾಯಗಳಲ್ಲಿ ಶಿಕ್ಷಣವನ್ನು ಪಡೆಯುವವರ ಸಂಖ್ಯೆಯಲ್ಲಿ ಏರಿಕೆಯಾಗುತ್ತಿದೆ. ಸಿದ್ದಿಯರು ಸಹ ಇತ್ತೀಚಿನ ದಿನಮಾನದಲ್ಲಿ ತಕ್ಕಮಟ್ಟಿನ ಶಿಕ್ಷಣವನ್ನು ಪಡೆಯುವ ಪ್ರಯತ್ನ ಮಾಡುತ್ತಿದ್ದಾರೆ. ಆಶ್ರಮ ಶಾಲೆಗಳು ಸಮುದಾಯದವರು ವಾಸಿಸುವ ಪ್ರದೇಶಗಳಲ್ಲಿ ಪ್ರಾರಂಭವಾಗಿರುವುದರಿಂದ ಸಿದ್ದಿಯರ ಮಕ್ಕಳು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಸಮುದಾಯದಲ್ಲಿ ಬಡತನ ಸರ್ವೇ ಸಾಮಾನ್ಯವಾಗಿದೆ. ವಿದ್ವಾಂಸರೊಬ್ಬರು ಹೇಳುವಂತೆ 'ಹಸಿದವನಿಗೆ ಅನ್ನ ಕೊಡುವ ಬದಲು. ವೇದಾಂತ ಹೇಳಿದರೆ ಹೊಟ್ಟೆ ತುಂಬುತ್ತದೆಯೇ?' ಎನ್ನುವ ರೀತಿಯಲ್ಲಿ ಬಡತನದಿಂದ

ಸಮುದಾಯವನ್ನು ಮುಕ್ತಿಗೊಳಿಸಿದರೆ ಮಾತ್ರ ಸಮರ್ಪಕವಾದ ಶಿಕ್ಷಣವನ್ನು ನೀಡಬಹುದಾಗಿದೆ. ಇಲ್ಲದಿದ್ದರೆ ತುತ್ತಿನ ಚೀಲವನ್ನು ತುಂಬಿಕೊಳ್ಳುವುದರ ಸಲುವಾಗಿ ಅವರು ಶಾಲೆಯನ್ನು ಬಿಟ್ಟು ಕೂಲಿಗೆ ಹೋಗುವ ಅನಿವಾರ್ಯತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ.

**೬.೩ ಶೈಕ್ಷಣಿಕ ಸ್ಥಿತಿಗತಿ**

"ಮಾನವ ಸಮುದಾಯದ ಅಭಿವೃದ್ಧಿಗೆ ಶಿಕ್ಷಣ ಬೇಕೇ ಬೇಕು. ಸಾಕ್ಷರತೆಯ ಪ್ರಮಾಣ ಏರಿಕೆ ಆಶಾವಾದವನ್ನು ಉಂಟುಮಾಡುತ್ತದೆ. ಇದರಿಂದ ಉತ್ಪಾದನೆಯ ಹೆಚ್ಚಳ, ಆರೋಗ್ಯ ಮೊದಲಾದವು ಏರುತ್ತವೆ. ಕರ್ನಾಟಕದ ಆದಿವಾಸಿಗಳ ಸಾಕ್ಷರ ಮಟ್ಟ ಕಳವಳಕಾರಿ. ಅದು ಆದಿವಾಸಿಗಳ ಒಟ್ಟು ಶೇಕಡಾವಾರು ಪ್ರಮಾಣಕ್ಕಿಂತ ಯಾವಾಗಲೂ ಕೆಳಗೇ ಇದೆ. ರಾಜ್ಯದಲ್ಲಿ ೧೯೯೧ ರಿಂದ ೨೦೦೧ ರ ಅವಧಿಯಲ್ಲಿ ಆದಿವಾಸಿಗಳ ಜನಸಂಖ್ಯೆ ಶೇ.೧೨.೩ ರಷ್ಟು ಏರಿದ್ದರೆ, ಸಾಕ್ಷರ ಪ್ರಮಾಣ ಶೇ. ೧.೬ ರಷ್ಟು ಮಾತ್ರ ಏರಿದೆ. ಮಹಿಳಾ ಸಾಕ್ಷರ ಪ್ರಮಾಣ ೧೯೯೧ ರಲ್ಲಿ ೨೩.೬ ರಷ್ಟಿತ್ತು. ೨೦೦೧ ರಲ್ಲಿ ಇದು ೩೬.೬ ರಷ್ಟಾಗಿದೆ. ಪುರುಷ ಸಾಕ್ಷರ ಪ್ರಮಾಣ ೧೯೯೧ ರಲ್ಲಿ ಶೇ. ೪೭.೯ ರಷ್ಟಿದ್ದುದು ೨೦೦೧ ರಲ್ಲಿ ೫೯.೭ ರಷ್ಟಾಗಿದೆ. ಇತರೆ ಸಮುದಾಯಗಳಿಗೆ ಹೋಲಿಸಿದರೆ ಕರ್ನಾಟಕದ ಆದಿವಾಸಿ ಸಾಕ್ಷರ ಮಟ್ಟ ಬಹಳ ಕಡಿಮೆ. ಇದು ಶಿಕ್ಷಣ ಇಲಾಖೆ ಮಾಡಬೇಕಾದ ಕೆಲಸ ಬಹಳಷ್ಟಿದೆ ಎಂಬುದನ್ನು ತೋರಿಸುತ್ತದೆ. ಗ್ರಾಮ ಪಂಚಾಯತಿ ಮಟ್ಟದಲ್ಲಿ ಬಡತನ ನಿವಾರಿಸುವ, ಸಾಕ್ಷರತೆ ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರ ಗಮನಹರಿಸುವ ಅಗತ್ಯವನ್ನು ಇದು ಸೂಚಿಸುತ್ತದೆ."[೧೪]

ನಮ್ಮ ಭಾರತೀಯ ಸಮಾಜವು ಗ್ರಾಮಗಳಿಂದ ಕೂಡಿದ ದೇಶವಾಗಿದೆ. ಒಟ್ಟಾರೆ ಜನಸಂಖ್ಯೆಯಲ್ಲಿ ಶೇ. ೭೦ ರಿಂದ ೭೫ ರಷ್ಟು ಜನರು ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಅದಕ್ಕಿಂತಲೂ ಕಡಿಮೆ ಮಟ್ಟದ ಸಾಕ್ಷರತೆ ಆದಿವಾಸಿಗಳಲ್ಲಿ ಪ್ರಮುಖವಾಗಿ ಕಂಡುಬರುತ್ತಿದೆ. ಆದಿವಾಸಿಗಳಿಗೆ ಶಿಕ್ಷಣದ ಮಹತ್ವ ತಿಳಿದಿಲ್ಲ. ಒಂದು ವೇಳೆ ಶಿಕ್ಷಣದ ಮಹತ್ವವನ್ನು ಅರಿತಿದ್ದರೂ, ತುತ್ತಿನ ಚೀಲವನ್ನು ತುಂಬಿಸಿಕೊಳ್ಳುವುದರ ಕಡೆಗೆ ಹೆಚ್ಚಿನ ಒಲವನ್ನು ಹೊಂದಿದ್ದಾರೆ. ಹಿಂದುಳಿದ ಸಮುದಾಯಗಳ ಏಳಿಗೆಗಾಗಿ ಸರ್ಕಾರ ಹಲವಾರು ಆಯೋಗಗಳನ್ನು ರಚಿಸಿ ಅವುಗಳ ಮೂಲಕ ಅಧ್ಯಯನ ನಡೆಸಿ ವರದಿಯನ್ನು ಪಡೆದುಕೊಂಡಿದೆ. ಆಯೋಗಗಳು ನೀಡುವ ವರದಿಯನ್ನು ನಮ್ಮ ಸರ್ಕಾರಗಳು ಸಮರ್ಪಕವಾಗಿ ಅನುಷ್ಠಾನಕ್ಕೆ ತರುವಲ್ಲಿ ಮೀನಾಮೇಷ ಎಣಿಸುತ್ತಿವೆ. ಅದರಲ್ಲಿಯೂ ಸಹ ರಾಜಕೀಯ ಮಾಡುತ್ತಿರುವುದು ದುರದೃಷ್ಟದ ಸಂಗತಿಯಾಗಿದೆ. ಫಲವಾಗಿ ಹಿಂದುಳಿದ ಸಮುದಾಯಗಳ ಅಭಿವೃದ್ಧಿ ಆಮೆಗತಿಯಲ್ಲಿ ಸಾಗಿದೆ ಎಂದೇ ಹೇಳಬೇಕಾಗುತ್ತದೆ.

ಸಿದ್ದಿಯರು ಶಿಕ್ಷಣದಿಂದ ಬಹಳ ದೂರದಲ್ಲಿದ್ದಾರೆ. ಆದರೆ ಇತ್ತೀಚೆಗೆ ಇದರ ಪ್ರಮಾಣ ತಗ್ಗುತ್ತಿದೆ. ಇಂದಿನ ದಿನದಲ್ಲಿ ಸಮುದಾಯದ ಮಕ್ಕಳು ಬ್ಯಾಗ್‌ಗಳನ್ನು ಹಾಕಿಕೊಂಡು, ಕೈಯಲ್ಲಿ ಪುಸ್ತಕಗಳನ್ನು ಹಿಡಿದುಕೊಂಡು ಶಾಲಾ-ಕಾಲೇಜುಗಳಿಗೆ ಹೋಗುತ್ತಿರುವುದು ಕಂಡುಬರುತ್ತಿದೆ. ಆದರೆ ಪ್ರಾಥಮಿಕ ಹಂತದಲ್ಲಿ ಕಲಿಯುವಷ್ಟು ಮಕ್ಕಳ ಸಂಖ್ಯೆ ಪ್ರೌಢಶಾಲೆಗೆ ದಾಖಲಾಗುತ್ತಿಲ್ಲ. ಪ್ರೌಢಶಾಲೆಯ ಹಂತದಿಂದ ಕಾಲೇಜು ಹಂತಕ್ಕೆ ಗಮನಿಸುವುದಾದರೆ ಬಹಳ ಕಡಿಮೆ ಪ್ರಮಾಣದ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆಯುತ್ತಿರುವುದು ಕಂಡುಬರುತ್ತಿದೆ.

ಸಿದ್ದಿಯರ ಮಕ್ಕಳು ಯಾವ ಯಾವ ತರಗತಿಯಲ್ಲಿ ಓದುತ್ತಿದ್ದಾರೆ ಮತ್ತು ಯಾವ ಯಾವ ತರಗತಿಯವರೆಗೆ ಓದಿದ್ದಾರೆ ಎನ್ನುವ ಅಂಕಿ ಸಂಖ್ಯೆಯನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

| ಕ್ರ ಸಂ. | ತಾಲೂಕು | ೧ ರಿಂದ ೫ ನೇ | | ೬ ರಿಂದ ೧೦ ನೇ | | ಪಿ.ಯು.ಸಿ. | | ಪದವಿ | | ಇತರೆ | | ಒಟ್ಟು |
|---|---|---|---|---|---|---|---|---|---|---|---|---|
| | | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | |
| ೦೧ | ಅಂಕೋಲ | ೫೬ | ೧೮ | ೪೫ | ೧೧ | ೧ | – | – | – | ೧ | – | ೧೩೨ |
| ೦೨ | ಹಳೀಯಾಳ | ೧೪೮ | ೬೯ | ೮೫ | ೪೮ | ೧೦ | ೨ | ೬ | ೨ | ೫ | ೩ | ೩೭೮ |
| ೦೩ | ಜೋಯಿಡಾ | ೧೫ | ೧ | ೬ | – | – | – | – | – | – | – | ೨೨ |
| ೦೪ | ಕಾರವಾರ | ೮ | ೨ | ೩ | ೧ | – | – | – | – | – | – | ೧೪ |
| ೦೫ | ಮುಂಡಗೋಡು | ೨೨ | ೮ | ೧೬ | ೩ | ೧ | – | – | – | ೨ | – | ೫೨ |
| ೦೬ | ಶಿರಸಿ | ೧೫ | ೯ | ೮ | ೩ | ೧ | – | – | – | – | – | ೩೬ |
| ೦೭ | ಯಲ್ಲಾಪುರ | ೧೩೦ | ೫೪ | ೬೦ | ೨೧ | ೪ | ೧ | ೪ | – | ೧ | ೨ | ೨೭೭ |
| | ಒಟ್ಟು | ೩೯೪ | ೧೬೧ | ೨೨೩ | ೮೭ | ೧೭ | ೩ | ೧೦ | ೨ | ೯ | ೫ | ೯೧೧ |

ಸಿದ್ದಿಯರ ಶೈಕ್ಷಣಿಕ ಸ್ಥಾನಮಾನವನ್ನು ಗಮನಿಸಿದಾಗ ತೀರಾ ಹಿಂದುಳಿದಿರುವುದು ತಿಳಿದುಬರುತ್ತದೆ. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ನಂತರ ಕಾಲೇಜು ಓದುವವರ ಸಂಖ್ಯೆಯನ್ನು ಗಮನಿಸಿದಾಗ ದಿಢೀರ್ ಕುಸಿತ ಕಂಡುಬರುತ್ತದೆ. ಸಮುದಾಯದಲ್ಲಿ ಮಕ್ಕಳು ಸ್ವಲ್ಪ ದೊಡ್ಡವರಾದ ಕೂಡಲೇ ಶಿಕ್ಷಣವನ್ನು ಬಿಡಿಸಿ ಕೂಲಿ ಮತ್ತಿತರ ವೃತ್ತಿಗಳಲ್ಲಿ ತೊಡಗಿಸುತ್ತಿರುವುದು ಈ ವ್ಯವಸ್ಥೆಗೆ ಬಹುಮುಖ್ಯ ಕಾರಣವಾಗಿದೆ. ಇದೇ ರೀತಿಯ ಪರಿಸ್ಥಿತಿ ಮುಂದುವರೆದರೆ ಸಮುದಾಯದವರು ಮುಂದೆ ಬಹುದೊಡ್ಡ ಕಷ್ಟವನ್ನು ಎದುರಿಸಬೇಕಾಗುತ್ತದೆ.

## ಅಡಿಟಿಪ್ಪಣಿಗಳು

೧. ಕೆ.ಭೈರಪ್ಪ, ಸಮಾಜಶಾಸ್ತ್ರದ ಮೂಲ ತತ್ವಗಳು, ಪುಟ ೧೫೬.

೨. ಸಂ: ಎ.ಎಸ್.ಪ್ರಭಾಕರ, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪುಟ ೨೩೫.

೩. ಸಿ.ಎನ್. ಶಂಕರರಾವ್, ಸಮಾಜಶಾಸ್ತ್ರ, ಸಂಪುಟ ೧, ಪುಟ ೮೬ (ಭಾಗ-೪).

೪. ಪ್ರಜಾವಾಣಿ, ಜುಲೈ ೧೭, ೨೦೧೦, ಶನಿವಾರ, ಪುಟ ೬.

೫. ಅದೇ, ಪುಟ ೬.

೬. ಅದೇ, ಪುಟ ೬.

೭. ಅದೇ, ಪುಟ ೬.

೮. ಯೋಜನಾ, ಸೆಪ್ಟೆಂಬರ್ ೨೦೦೮, ಪುಟ ೨೫.

೯. ಡಾ. ವಿ.ಕೆ. ಹಂಪಿಹೊಳಿ, ಪ್ರೊ. ಬಿ.ಮೋಹನರಾವ್, ಶ್ರೇಷ್ಠ ಶಿಕ್ಷಣ ತಜ್ಞರು, ಪುಟ ೨೧೨.

೧೦. ವಿಜಯಕರ್ನಾಟಕ – ಸಾಪ್ತಾಹಿಕ ವಿಜಯ, ಭಾನುವಾರ, ೨೩ ನೇ ಡಿಸೆಂಬರ್ ೨೦೦೭, ಪುಟ ೧.

೧೧. ಪ್ರ.ಸಂ: ಪ್ರೊ. ಎಚ್.ಜೆ.ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂಪುಟ ೧, ಪುಟ ೯೮.

೧೨. ಪ್ರಜಾವಾಣಿ, ಬುಧವಾರ ೧೧ ನೇ ಅಗಸ್ಟ್ ೨೦೧೦, ಪುಟ ೬.

೧೩. ಪ್ರಜಾವಾಣಿ, ಜುಲೈ ೧೭, ೨೦೧೦, ಶನಿವಾರ, ಪುಟ ೬.

೧೪. ಯೋಜನಾ, ಸೆಪ್ಟೆಂಬರ್ ೨೦೦೮, ಪುಟ ೨೫.

ಅಧ್ಯಾಯ–೭

# ಸಮುದಾಯದ ರಾಜಕೀಯತೆ

೭.೧ ಜಾತಿ ಪಂಚಾಯತಿ

೭.೨ ಸಮುದಾಯದ ಸಂಘಟನೆ ಮತ್ತು ಹೋರಾಟ

೭.೩ ರಾಜಕೀಯ ಮೀಸಲಾತಿ ಬಳಕೆ ಮತ್ತು ಅಭಿವೃದ್ಧಿ

೭.೪ ರಾಜಕೀಯ ಮೀಸಲಾತಿ ಬಳಕೆಯಲ್ಲಿನ ತೊಡಕುಗಳು

೭.೫ ರಾಜಕೀಯ ಸ್ಥಿತಿಗತಿ

೭.೬ ಸರ್ಕಾರದ ಸೌಲಭ್ಯಗಳು ಮತ್ತು ಸಿದ್ದಿಯರು

೭.೭ ಆಧುನಿಕತೆಯ ಪ್ರಭಾವ

೭.೭.೧ ಆಧುನಿಕತೆಯ ಸ್ಪಂದನೆಯಲ್ಲಿ ಸಿದ್ದಿಯರು

೭.೮ ಮುಖ್ಯವಾಹಿನಿ ಮತ್ತು ಸಿದ್ದಿಯರು

ಪ್ರತಿಯೊಂದು ದೇಶವು ತನ್ನದೇ ಆದ ಮೂಲ ನಿವಾಸಿಗಳನ್ನು ಹೊಂದಿರುತ್ತದೆ. ಆಯಾ ದೇಶದ ಆಚಾರ-ವಿಚಾರ, ರೀತಿ-ನೀತಿ, ರೂಡಿಗಳು, ಸಂಪ್ರದಾಯ, ಪದ್ಧತಿ, ಸಂಸ್ಕೃತಿಗಳೆಲ್ಲವೂ ಆಯಾ ದೇಶದ ಜನರ ಹಿನ್ನೆಲೆಯನ್ನು ಒಳಗೊಂಡಿರುತ್ತದೆ. ನಮ್ಮ ಭಾರತೀಯ ಸಮಾಜವು ನಾಲ್ಕು ವರ್ಣ ವ್ಯವಸ್ಥೆಯಿಂದ ಪ್ರಾರಂಭವಾಗಿ, ಇಂದು ಸಾವಿರಾರು ಜಾತಿ ಉಪಜಾತಿಗಳನ್ನು ಒಳಗೊಂಡಿದೆ. ಈ ಜಾತಿಗಳೆಲ್ಲವೂ ಒಂದೇ ವಿಧವಾದ ಸ್ಥಾನಮಾನವನ್ನು ಹೊಂದಿಲ್ಲ. ಸಾಮಾಜಿಕ ಸ್ತರವಿನ್ಯಾಸದ ರೂಪವಾದ ಏಣಿಶ್ರೇಣಿ ವ್ಯವಸ್ಥೆಯನ್ನು ಹೊಂದಿದೆ. ಪ್ರಾಚೀನ ಕಾಲದಿಂದ ಭಾರತಕ್ಕೆ ಸ್ವತಂತ್ರ್ಯ ದೊರೆಯುವ ಅವಧಿಯವರೆಗೆ ಬ್ರಾಹ್ಮಣ ಸಮುದಾಯ ತನ್ನ ಪಾರುಪತ್ಯವನ್ನು ಹೊಂದಿತ್ತು. ಆ ಸಮಯದಲ್ಲಿ ಬ್ರಾಹ್ಮಣನನ್ನು ಭೂಮಿಯ ಮೇಲಿನ ದೇವರು ಎಂದು ಬಿಂಬಸಲಾಗುತ್ತಿತ್ತು. ಬ್ರಾಹ್ಮಣ ಯಾವ ತಪ್ಪು ಮಾಡುವುದಿಲ್ಲ. ಮಾಡಿದರೂ ಅದಕ್ಕೆ ಉಗ್ರವಾದ ಶಿಕ್ಷೆಗಳಿದ್ದಿಲ್ಲ. ಆದರೆ ಉಳಿದ ಕೆಳಜಾತಿಗಳು ತಪ್ಪು ಮಾಡಿದರೆ ಉಗ್ರವಾಗಿ ಶಿಕ್ಷಿಸಲಾಗುತ್ತಿತ್ತು. ಆಯಾ ಕುಲಪಂಚಾಯತಿಗಳು ತಪ್ಪು ಮಾಡಿದ ವ್ಯಕ್ತಿಯನ್ನು ಶಿಕ್ಷಿಸುತ್ತಿದ್ದವು. ಅದೇ ರೀತಿಯಾಗಿ ಪ್ರತಿಯೊಂದು ಬುಡಕಟ್ಟು ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಪರಂಪರೆಯ ಮೂಲಕ ನ್ಯಾಯ ನಿರ್ಣಯವನ್ನು ಕೈಗೊಳ್ಳುತ್ತಿದ್ದವು. ಆದರೆ ದೇಶಕ್ಕೆ ಸ್ವಾತಂತ್ರ್ಯ ದೊರೆತ ಮೇಲೆ, ಭಾರತದಲ್ಲಿದ್ದ ಎಲ್ಲಾ ಸಂಸ್ಥಾನಗಳನ್ನು ವಿಲೀನಗೊಳಿಸಿ ಅಖಂಡ ಭಾರತ ದೇಶ ನಿರ್ಮಾಣ ಮಾಡಿದ ನಂತರ ನಮ್ಮದೇ ಆದ ಸಂವಿಧಾನ ಅಸ್ತಿತ್ವಕ್ಕೆ ಬಂದಿತು. ಈ ಪ್ರಜಾಪ್ರಭುತ್ವ ವ್ಯವಸ್ಥೆಯಿಂದಾಗಿ ಭಾರತದ ಪ್ರತಿಯೊಬ್ಬ ಪ್ರಜೆಯು ಆಡಳಿತದಲ್ಲಿ ನೇರವಾಗಿ ಭಾಗಿಯಾಗುವುದಕ್ಕೆ ಅವಕಾಶವಾಯಿತು. ಈ ವ್ಯವಸ್ಥೆ ಅಸ್ತಿತ್ವಕ್ಕೆ ಬರುವುದಕ್ಕಿಂತ ಮುಂಚಿತವಾಗಿ ಬ್ರಿಟಿಷ್ ಸರಕಾರ ಭಾರತದಲ್ಲಿ ಸುಧಾರಣೆ

ತರುವ ಪ್ರಯತ್ನ ಮಾಡಿತು. ಒಂದು ಅರ್ಥದಲ್ಲಿ ಬ್ರಿಟಿಷರನ್ನು ಭಾರತೀಯ ಸಮಾಜದ ಸುಧಾರಕರೆಂದು ಕರೆದರೂ ತಪ್ಪಾಗಲಿಕ್ಕಿಲ್ಲ. "ಭಾರತದಲ್ಲಿ ಸಾರ್ವಜನಿಕ ಸೇವೆಗಳ ಕುರಿತು ೧೮೮೬-೮೭ ರಲ್ಲಿ ಎಚ್ಸನ್ ಆಯೋಗ ಕೆಲವು ಶಿಫಾರಸುಗಳನ್ನು ಮಾಡಿತು. ಈ ಆಯೋಗದ ಪ್ರಕಾರ, ಇಂಗ್ಲೆಂಡಿನಲ್ಲಿ ಮಾಡಿದ ಉನ್ನತ ಅಧಿಕಾರಿಗಳ ನೇಮಕವನ್ನು ಗಣನೀಯವಾಗಿ ಕಡಿಮೆ ಮಾಡಿ, ಇದರಿಂದ ಲಭ್ಯವಾಗುವ ಎಲ್ಲಾ ಉನ್ನತ ನೇಮಕಗಳನ್ನು ಸ್ಥಳೀಯವಾಗಿ ಭಾರತದಲ್ಲಿಯೇ ಮಾಡಬೇಕು ಎಂದಿತ್ತು. ಆದರೆ ಈ ಶಿಫಾರಸಿನಿಂದ ಆಗಿನ ವ್ಯವಸ್ಥೆಯಲ್ಲಿ ಯಾವುದೇ ಗಣನೀಯ ಬದಲಾವಣೆಯಾಗುತ್ತದೆಂದು ಹೇಳಲಾಗದೆಂದು ಡಾ॥ ಅಂಬೇಡ್ಕರ್, ಭಾರತೀಕರಣ ಮತ್ತು ಹಿಂದುಳಿದ ವರ್ಗಗಳ ಬೇಡಿಕೆಗಳನ್ನು ಕುರಿತು ಸಮರ್ಪಕವಾಗಿ ವಿವೇಚಿಸಿದರು."[೧] ಇಲ್ಲಿ ಪ್ರತಿಯೊಂದು ಹಿಂದುಳಿದ ವರ್ಗಗಳ ಏಳಿಗೆಯ ಆಶಾಭಾವವನ್ನು ಹೊಂದಿರುವುದು ತಿಳಿಯುತ್ತದೆ.

**೭.೧ ಜಾತಿ ಪಂಚಾಯತಿ**

ಮಾನವನು ಒಂದೆಡೆ ಸ್ಥಿರವಾಗಿ ನೆಲೆ ನಿಂತಂತೆಲ್ಲಾ ಹಲವಾರು ರೂಢಿಗಳು ಅಥವಾ ಪದ್ಧತಿಗಳು ಆಚರಣೆಗೆ ಬಂದವು. ಎಮಿಲಿ ಡರ್ಖೀಂರವರು ತಿಳಿಸುವಂತೆ ಮಾನವನಲ್ಲಿ ಕಾರ್ಯ ನೈಪುಣ್ಯತೆ ಹೆಚ್ಚಿದಂತೆಲ್ಲಾ ಶ್ರಮ ವಿಭಜನೆ ರೂಪುಗೊಂಡಿತು. ಶ್ರಮ ವಿಭಜನೆಯ ಆಧಾರದಲ್ಲಿ ಮುಂದೆ ಹೊಸ ಹೊಸ ವೃತ್ತಿಗಳು ಆರಂಭವಾಗುತ್ತವೆ. ವೃತ್ತಿಯ ಆಧಾರದ ಮೇಲೆ ಕುಲ ಅಥವಾ ಜಾತಿಗಳು ನಿರ್ಮಾಣವಾಗುತ್ತಾ ಬಂದವು. ಆಯಾ ವೃತ್ತಿ ಬಾಂಧವರಲ್ಲಿ ಅಥವಾ ಜಾತಿಗಳಲ್ಲಿ ಬರುವ ವ್ಯಾಜ್ಯಗಳನ್ನು ಬಗೆಹರಿಸುವುದಕ್ಕಾಗಿ ಜಾತಿ ಪಂಚಾಯತಿಗಳು ಅಸ್ತಿತ್ವಕ್ಕೆ ಬಂದವು. ಪ್ರತಿಯೊಂದು ಬುಡಕಟ್ಟು ಸಮುದಾಯಗಳೂ ಸಹ ತನ್ನದೇ ಆದ ಕುಲಪಂಚಾಯತಿಗಳನ್ನು ಪ್ರಾಚೀನ ಕಾಲದಿಂದಲೂ ಅಳವಡಿಸಿಕೊಂಡು ಬಂದಿರುವುದು ಪ್ರಮುಖವಾಗಿ ಕಂಡುಬರುತ್ತದೆ. "ಪ್ರತಿಯೊಂದು ಗ್ರಾಮದಲ್ಲಿಯೂ ವಿವಿಧ ಜಾತಿಗಳಿಗನುಗುಣವಾಗಿ, ಪ್ರತಿ ಜಾತಿಗೂ ಒಂದು ಜಾತಿ ಪಂಚಾಯತಿ ಇರುತ್ತದೆ. ತಮ್ಮ ತಮ್ಮ ಜಾತಿಯ ಐದು ಜನ ಹಿರಿಯರನ್ನು ಆಯ್ಕೆ ಮಾಡಿ ರೂಪಿಸುವುದರ ಮೂಲಕ ಆ ಜಾತಿ ಪಂಚಾಯತಿ ಅಸ್ತಿತ್ವಕ್ಕೆ ಬಂದಿರುತ್ತದೆ. ಆ ಐದು ಜನ ಪಂಚರನ್ನು ಹೆಚ್ಚಿನ ಗೌರವದಿಂದ ಕಾಣಲಾಗುತ್ತದೆ."[೨]

ಪ್ರತಿಯೊಂದು ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಪಂಚರನ್ನು ಒಳಗೊಂಡ ಕುಲ ಪಂಚಾಯತಿಯನ್ನು ಹೊಂದಿರುತ್ತವೆ. ಪ್ರಾಚೀನ ಕಾಲದಿಂದಲೂ ಇದರ ಅಸ್ತಿತ್ವವನ್ನು ಗುರುತಿಸಬಹುದಾಗಿದೆ. ಸಿದ್ದಿಯರಲ್ಲಿಯೂ ಸಹ ಬುದುವಂತ, ಕೋಲುಕಾರ ಎನ್ನುವ ಮುಖ್ಯಸ್ಥರನ್ನು ಒಳಗೊಂಡಿದೆ. ತಮ್ಮ ತಮ್ಮಲ್ಲಿಯ ವ್ಯಾಜ್ಯಗಳನ್ನು ಇವರ ಸಮ್ಮುಖದಲ್ಲಿ

ಪಂಚಾಯತಿ ಕಟ್ಟೆಯಲ್ಲಿ ಬಗೆಹರಿಸಲಾಗುತ್ತದೆ. ಆದರೆ ಇವರಲ್ಲಿ ಇತರೆ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರುವಂತಹ ಉಗ್ರವಾದ ಶಿಕ್ಷೆಯ ಸ್ವರೂಪಗಳು ಕಂಡುಬರುವುದಿಲ್ಲ.

“ಆಂಗ್ಲರು ಭಾರತಕ್ಕೆ ಆಗಮಿಸುವುದಕ್ಕಿಂತ ಪೂರ್ವ ನಮ್ಮ ಬುಡಕಟ್ಟುಗಳು ಕಾಡಿನಲ್ಲಿ ಸ್ವಚ್ಛಂದವಾಗಿ ಬದುಕುತ್ತಿದ್ದವು. ಇಡೀ ಕಾಡೇ ನಮ್ಮದು ಎಂಬ ಪರಿಕಲ್ಪನೆ ಅವರಲ್ಲಿತ್ತು. ಈ ಹಂತದಲ್ಲಿ ಅವರಿಗೆ ಸ್ವಂತ ಆಸ್ತಿಯ ಕಲ್ಪನೆ ಇರಲಿಲ್ಲ. ಬೇಟೆ ಮತ್ತು ಆಹಾರ ಸಂಗ್ರಹಣೆಯಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಆದಿವಾಸಿಗಳು ಕೃಷಿಯನ್ನು ರೂಪಿಸಿಕೊಂಡಾಗಲೂ ಒಂದೇ ಸ್ಥಳದಲ್ಲಿ ಹಲವಾರು ವರ್ಷಗಳವರೆಗೆ ನೆಲೆನಿಂತು ಕೃಷಿ ಕೈಗೊಳ್ಳುತ್ತಿರಲಿಲ್ಲ. ಕುಮರಿ ಬೇಸಾಯ ಮಾಡುತ್ತಾ ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುತ್ತಿದ್ದರು.”[೩] ಆದರೆ ಸಿದ್ದಿಯರು ಇದಕ್ಕೆ ಭಿನ್ನವಾಗಿದ್ದಾರೆ. ಕಾರಣ ಇವರು ಗುಲಾಮರಾಗಿ ಪರಿಚಿತರಾಗಿರುವುದೇ ಅರಬರು, ಪೋರ್ಚುಗೀಸರು ಮತ್ತು ಬ್ರಿಟಿಷರಿಂದ. ಆದ್ದರಿಂದ ಇವರು ಗುಲಾಮಗಿರಿಯ ದಾಸ್ಯದಿಂದ ತಪ್ಪಿಸಿಕೊಂಡು ಬಂದ ನಂತರದ ಅವಧಿಯಲ್ಲಿ ಸಮುದಾಯದ ಸಂಸ್ಕೃತಿ ಮತ್ತು ಇತರ ಪದ್ಧತಿಗಳನ್ನು ಅನುಷ್ಠಾನಕ್ಕೆ ತರಲಾರಂಭಿಸಿದರು. ಸಮುದಾಯದ ಸಾಮಾಜಿಕತೆಯಲ್ಲಿ ಸಿದ್ದಿಯರ ಕುಲಪಂಚಾಯತಿ ಬಗೆಗೆ ಹೆಚ್ಚಿನ ವಿವರಣೆಯನ್ನು ನೀಡಲಾಗಿದೆ.

### ೭.೨ ಸಮುದಾಯದ ಸಂಘಟನೆ ಮತ್ತು ಹೋರಾಟ

ನೀಗ್ರೋ ಜನಾಂಗದವರು ಇತರ ಸಮುದಾಯಗಳೊಂದಿಗೆ ಅತಿ ವೇಗವಾಗಿ ಹೊಂದಿಕೊಂಡು ಬಿಡುತ್ತಾರೆ. ಅಮೆರಿಕಾ, ಭಾರತದಂತಹ ದೇಶಗಳಲ್ಲಿ ಗುಲಾಮರಾಗಿ ಪರಿಚಿತರಾದ ಇವರು ಆಯಾ ದೇಶದಲ್ಲಿನ ಸಮುದಾಯಗಳೊಂದಿಗೆ ಬೆರೆತು ಎಲ್ಲರಲ್ಲಿ ಒಬ್ಬರಾಗುವ ಗುಣವನ್ನು ಹೊಂದಿದ್ದಾರೆ. ಈ ರೀತಿಯ ವ್ಯವಸ್ಥೆ ಕೇವಲ ಭಾರತದಲ್ಲಿ ಮಾತ್ರವಲ್ಲದೇ ಅಮೆರಿಕಾದಂತಹ ವಿಶ್ವದ ಬಲಿಷ್ಠ ರಾಷ್ಟ್ರದಲ್ಲಿಯೂ ಸಹ ಸಾಧ್ಯವಾಗಿದೆ. ವಿಶ್ವದಲ್ಲಿಯೇ ಪ್ರತಿಷ್ಠಿತ ಹುದ್ದೆಯಾದ ಅಮೇರಿಕಾದ ಅಧ್ಯಕ್ಷ ಪದವಿಯನ್ನು ಇಂದು ಶ್ರೀ ಬರಾಕ್ ಒಬಾಮಾರಂತಹ ನೀಗ್ರೋ ಸಮುದಾಯದ ಕಪ್ಪು ವ್ಯಕ್ತಿಯು ಅಲಂಕರಿಸಿರುವುದು ವಿಶೇಷ. ಅಲ್ಲದೆ ಇತರ ನೀಗ್ರೋ ಸಂತತಿಯವರನ್ನು ಗಮನಿಸುವುದಾದರೆ, “ನೀಗ್ರೋ ಮುಖಂಡರು ಈಚೆಗೆ ಈ ಪಿಗ್ಮಿಗಳ ಮುಖ್ಯ ನೆಲೆಯಾದ ಅರಣ್ಯದ ಅಂಚುಗಳನ್ನು ಸವರಿ ಬೇಸಾಯ ಮಾಡತೊಡಗುವುದಕ್ಕೆ ಮೊದಲು ಪಿಗ್ಮಿಗಳು ಪ್ರಧಾನವಾಗಿ ಆಯಾ ಹಂಗಾಮಿನಲ್ಲಿ ತಲೆದೋರುವ ಗೆದ್ದಲು, ಈಚಲುಹುಳು ಇತ್ಯಾದಿ ಹುಳು–ಹುಪ್ಪಟೆಗಳನ್ನು ಮತ್ತು ಜೇನುತುಪ್ಪವನ್ನು ತಿಂದು ಜೀವಿಸುತ್ತಿದ್ದರು. ಆದರೆ ನೀಗ್ರೋ ಆಗಮನದ ನಂತರ, ಅವರಿಗೆ ತದ್ವಿರುದ್ಧ ಜನತೆಯಾದರು. ಪಿಗ್ಮಿಗಳು ಪರಸ್ಪರ ಸಹಾಯಕ ಸಂಬಂಧಗಳನ್ನು ರೂಡಿಸಿಕೊಂಡು ಅವರೊಂದಿಗೆ ಬದುಕುತ್ತಿದ್ದಾರೆ. ಅವರು ನೀಗ್ರೋಗಳಿಗೆ ಮಾಂಸ ಪದಾರ್ಥಗಳನ್ನು ಮತ್ತು

ಆಕ್ರಮಣಕಾರರು ಹಾಗೂ ಆನೆಗಳ ದಾಳಿಯ ಮುನ್ಸೂಚನೆಯನ್ನು ಕೊಟ್ಟು ಸಹಕರಿಸಿದರೆ, ಪ್ರತಿಯಾಗಿ ನೀಗ್ರೋಗಳು ಪಿಗ್ಮಿಗಳಿಗೆ ಕಬ್ಬಿಣದ ಸಾಧನ, ಸಾಮಗ್ರಿಗಳನ್ನು, ಮಡಿಕೆ ಕುಡಿಕೆಗಳನ್ನು, ಬಾಳೆಯ ಹಣ್ಣು ಮತ್ತು ಕಾಯಿಗಳನ್ನು ಸರಬರಾಜು ಮಾಡುತ್ತಾರೆ. ಜೊತೆಗೆ ಪಿಗ್ಮಿಗಳು ನೀಗ್ರೋಗಳ ಗ್ರಾಮಗಳಿಗೆ ಆಗಾಗ ಭೇಟಿಕೊಡುತ್ತಾ ತಮ್ಮ ಪೋಷಕರ ಭಾಷೆಯಾಡುತ್ತಾ, ತಮ್ಮ ಯುವಕರನ್ನು ನೀಗ್ರೋಗಳ ಯುವ ಕೂಟಗಳಿಗೆ ಕಳುಹಿಸಿ, ಆ ಮುಖಾಂತರ ಪೋಷಕ–ಪೋಷಿತ ಬಾಂಧವ್ಯವನ್ನು ಕುದುರಿಸಿಕೊಳ್ಳುತ್ತಾ, ಹೊಂದಿ ಬಾಳಿಕೊಂಡುಬರುತ್ತಿದ್ದಾರೆ."[೨] ಈ ರೀತಿಯಾದ ಮನೋಭಾವನೆ ನೀಗ್ರೋ ಕುಲದವರಾದ ಸಿದ್ದಿಯರಲ್ಲಿ ಪ್ರಮುಖವಾಗಿ ಕಂಡುಬರುತ್ತದೆ.

ಸ್ವಾತಂತ್ರ್ಯ ದೊರೆಯುವುದಕ್ಕಿಂತಲೂ ಪೂರ್ವದಲ್ಲಿಯೇ ಸಿದ್ದಿಯರು ಉತ್ತರಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಇವರನ್ನು ಗೋವಾ. ಗುಜರಾತ್, ಕೇರಳ ಹೀಗೆ ಹಲವಾರು ಕಡೆ ಮಾರಾಟ ಮಾಡಿರುವುದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ರಾಜರುಗಳು ಸಿದ್ದಿಯರನ್ನು ಕೊಂಡುಕೊಂಡು ಸೈನಿಕ, ಅಂಗರಕ್ಷಕ ಮತ್ತು ಸೈನ್ಯದ ಮುಖಂಡನನ್ನಾಗಿ ನೇಮಿಸಿರುವುದೂ ಸಹ ತಿಳಿದುಬರುತ್ತದೆ. ಸಿದ್ದಿಯರು ಯಾವುದೇ ಮಾಲಿಕ ಅಥವಾ ರಾಜನ ಹತ್ತಿರ ಕೆಲಸಕ್ಕೆ ಸೇರಿದರೂ ನಿಷ್ಠೆಯನ್ನು ಹೊಂದಿರುತ್ತಿದ್ದರು. ಆದರೂ ಮಾಲಿಕರ ಹಿಂಸೆ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಯಿತು. ಯಾವುದೇ ಜೀವಿಯಾಗಲೀ ಎಲ್ಲಿಯವರೆಗೆ ಸಹಿಸಿಕೊಳ್ಳಲು ಸಾಧ್ಯ? ಅದರಲ್ಲಿಯೂ ಮನುಷ್ಯ ಎಷ್ಟು ಅಂತ ಸಹಿಸಲು ಸಾಧ್ಯ? ನಂತರ ತಿರುಗಿಬೀಳುವುದು ಪ್ರಕೃತಿಯ ಸಹಜ ಗುಣ. ಪ್ರಬಲ ಮಾಲಿಕ ಸಮುದಾಯದವರ ವಿರುದ್ಧ ತಿರುಗಿಬೀಳುವ ಸಾಮರ್ಥ್ಯ ಇವರಲ್ಲಿರಲಿಲ್ಲ. ಕಾರಣ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಮಾರಾಟವಾಗಿ ಚದುರಿಹೋಗಿದ್ದರು. ಆಗ ಹಲ್ಲು ಕಿತ್ತ ಹಾವಿನಂತಹ ಪರಿಸ್ಥಿತಿಯಲ್ಲಿದ್ದರು. ಅಂದರೆ ಏಕಾಂಗಿಯಾಗಿ ಗುಲಾಮಗಿರಿಯಲ್ಲಿ ತೊಡಗಿದ್ದರಿಂದ ಇವರಲ್ಲಿ ಶಕ್ತಿ ಅಡಗಿಹೋಗಿತ್ತು. ಇವರ ಕಣ್ಮುಂದೆ ಎರಡು ಮಾರ್ಗಗಳಿದ್ದವು. ಅವುಗಳೆಂದರೆ ಮೊದಲನೇಯದು ಮಾಲಿಕನು ಏನೇ ಹಿಂಸೆ ಕೊಟ್ಟರೂ ಸಾಯುವವರೆಗೆ ಅವನ ಹತ್ತಿರ ದುಡಿಯುವುದು. ಎರಡನೇಯದಾಗಿ ಮಾಲಿಕನಿಂದ ತಪ್ಪಿಸಿಕೊಂಡು ಓಡಿ ಹೋಗುವುದು. ಇವರು ಎರಡನೇಯ ಮಾರ್ಗವನ್ನು ಅನುಸರಿಸಿದರು. ಪರಿಣಾಮವಾಗಿ ಒಬ್ಬೊಬ್ಬರಾಗಿ ಮಾಲಿಕರಿಂದ ತಪ್ಪಿಸಿಕೊಂಡು ಬಂದು ಕಾಡು ಸೇರಿದರು. ಅರಣ್ಯ ಪ್ರವೇಶಿಸಿದ ಎಷ್ಟೋ ವರ್ಷಗಳ ನಂತರ ಮುಖ್ಯವಾಹಿನಿಗೆ ಬರುವ ಪ್ರಯತ್ನವನ್ನು ಮಾಡಿದರು. ಆದರೆ ಈ ಸಮುದಾಯದವರು ಇತ್ತೀಚೆಗೆ ಒಂದು ಸಂಘಟನೆಯನ್ನು ನಿರ್ಮಿಸಿಕೊಳ್ಳುವುದರ ಮೂಲಕ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸಿದರು.

ಉತ್ತರ ಕನ್ನಡ ಜಿಲ್ಲೆಯ ಸಿದ್ದಿಯರಿಗೆ ೧೯೮೨ ನೇ ಇಸ್ವಿಯು ಒಂದು ಪರ್ವಕಾಲವೆಂದು ಹೇಳಬಹುದು. ಕಾರಣ ೧೯೮೨ ಕ್ಕೂ ಮುಂಚೆ ಸಿದ್ದಿಯರು ಉತ್ತರಕನ್ನಡ ಜಿಲ್ಲೆಯಲ್ಲಿ ವಾಸವಾಗಿದ್ದಾರೆ ಎಂಬ ವಿಷಯ ಸರ್ಕಾರಕ್ಕೆ ತಿಳಿದಿರಲೇ ಇಲ್ಲ ಎನ್ನಬೇಕಾಗುತ್ತದೆ. ೧೯೮೨ ರಲ್ಲಿ ಸಿದ್ದಿ ಸಮುದಾಯದ ಕೆಲವು ಹಿರಿಯರು ಸಂಘ ರಚನೆಗೆ ಪ್ರಯತ್ನಿಸಿದರು. ಸಿದ್ದಿಯ ಹಿರಿಯರು ಸ್ವಾತಂತ್ರ್ಯ ಹೋರಾಟದಲ್ಲಿ ಹೋರಾಡಿದ್ದರೂ ಸಹ ಸರ್ಕಾರದ ಗಮನಕ್ಕೆ ಬಂದಿರಲಿಲ್ಲ. ಸಿದ್ದಿಯ ಹಿರಿಯರು ಸಂಘದ ರಚನೆಗೆ ಪ್ರಯತ್ನ ಪಟ್ಟುದುದರ ಫಲವಾಗಿ ೧೯೮೪ ರಲ್ಲಿ ಸಿದ್ದಿ ಜನಾಂಗದ ನಿಯೋಗ ಬೆಂಗಳೂರಿಗೆ ತೆರಳಿತು. ಅಲ್ಲಿ ಸಂಘದ ನೊಂದಣಿ ಮಾಡಿಸಲು ಹೋದಾಗ ಸಮುದಾಯದವರಿಗೊಂದು ಆಶ್ಚರ್ಯ ಕಾದಿತ್ತು. ಅದೇನೆಂದರೆ ನಿಮ್ಮ ಸಮುದಾಯ ನಮ್ಮ ಕರ್ನಾಟಕದಲ್ಲಿ ಎಲ್ಲಿದೆ? ಎಷ್ಟು ಜನಸಂಖ್ಯೆ ಇದೆ? ಎಷ್ಟ ವರ್ಷದಿಂದ ವಾಸವಾಗಿದ್ದೀರಿ? ಎನ್ನುವ ಪ್ರಶ್ನೆಗಳು ಸರ್ಕಾರದಿಂದ ಎದುರಾದವು. ಆಗ ಶ್ರೀಮಾನ್ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಯಾಗಿದ್ದರು. ಸಿದ್ದಿಯರ ಬಗೆಗೆ ವಿಶೇಷ ಗಮನಹರಿಸಿ, ಇವರನ್ನು ೧೯೮೬ ರಲ್ಲಿ ಪ್ರವರ್ಗ–೧ ಕ್ಕೆ ಸೇರಿಸಿದರು. ಆಗ ಸಿದ್ದಿ ಸಮುದಾಯ ಕರ್ನಾಟಕದಲ್ಲಿದೆ ಎನ್ನುವ ವಾಸ್ತವಾಂಶ ಬೆಳಕಿಗೆ ಬಂದಿತು. ಈ ಸಮುದಾಯ ಮುಖ್ಯ ವಾಹಿನಿಗೆ ಬರದಿರುವುದಕ್ಕೆ ಒಂದು ರೀತಿಯಲ್ಲಿ ಸಿದ್ದಿಯರೂ ಸಹ ಕಾರಣವಾಗಿದ್ದಾರೆ. ಏಕೆಂದರೆ ಇವರು ಕಡುಬಡತನವನ್ನು ಹೊಂದಿರುವುದರಿಂದ ಮಗುವಿಗೆ ೬ ವರ್ಷ ತುಂಬಿದ ನಂತರ ಕೂಲಿಗೆ ಕಳುಹಿಸುತ್ತಿದ್ದರು. ಇಲ್ಲವೇ ಮಗುವನ್ನು ಜೀತದ ಕೆಲಸಕ್ಕೆ ನಿಯೋಜಿಸುತ್ತಿದ್ದರು. ಅಲ್ಲದೆ ಮಾಲಿಕನ ಹತ್ತಿರ ಕೂಲಿ ಮಾಡುವ ಸಿದ್ದಿಯರು ಬೇರೆ ಕಡೆ ಹೋಗಲು ಪ್ರಯತ್ನಿಸಿದರೆ ಇವರನ್ನು ಹಲವಾರು ರೀತಿಯಲ್ಲಿ ಹಿಂಸಿಸಲಾಗುತ್ತಿತ್ತು ಎನ್ನುವ ಮನದಾಳದ ನೋವನ್ನು ಸಮುದಾಯದ ಹಿರಿಯ ತಿಳುವಳಿಕೆದಾರರಾದ ಹಳಿಯಾಳದ ಡಿಯೋಗ್ ಬಿ ಸಿದ್ದಿಯವರು ತಿಳಿಸುತ್ತಾರೆ.

೧೯೮೪ ರಲ್ಲಿ 'ಅಖಿಲ ಕರ್ನಾಟಕ ಸಿದ್ದಿಯರ ವಿಕಾಸ ಸಂಘ' ನೊಂದಣಿಯಾಗಿ ಅಸ್ತಿತ್ವಕ್ಕೆ ಬಂದಿತು. ಈ ಸಂಘ ಅಸ್ತಿತ್ವಕ್ಕೆ ಬಂದ ನಂತರ ಸಮುದಾಯದ ಮೇಲಾಗುವ ದೌರ್ಜನ್ಯಗಳು ಮತ್ತು ಸರ್ಕಾರ ಹಾಗೂ ಅಧಿಕಾರಿಗಳನ್ನು ಪ್ರಶ್ನಿಸುವ ಮಟ್ಟಕ್ಕೆ ತಲುಪಿತು. ಪರಿಣಾಮವಾಗಿ ಮಾಲಿಕರಿಂದ ಹೊಡೆತ ತಿನ್ನುವುದು ತಪ್ಪಿತು. ಹಿಂದೆ ಸಿದ್ದಿಯರು ಮಾಡುವ ಸಣ್ಣ ಪುಟ್ಟ ತಪ್ಪುಗಳಿಗೆ ಅವರನ್ನು ಕೊಲ್ಲಲಾಗುತ್ತಿತ್ತು. ಆದರೆ ಪೋಲಿಸ್ ಠಾಣೆಯಲ್ಲಿ ಯಾವುದೇ ಮೊಕದ್ದಮೆ ದಾಖಲಾಗದಿರುವುದು ತಿಳಿಯುತ್ತದೆ. ಸಿದ್ದಿಯರ ಸಂಘ ಅಸ್ತಿತ್ವಕ್ಕೆ ಬಂದ ನಂತರ ಮಾಲಿಕರು ಇವರನ್ನು ಹಿಂಸಿಸುವ, ಹೊಡೆಯುವ, ಕೊಲ್ಲುವ ಪ್ರಮಾಣ ಒಮ್ಮೆಲೇ ಇಳಿಮುಖವಾಯಿತು. ಪರಿಣಾಮವಾಗಿ ಇತರರಂತೆ ಜೀವನ ನಡೆಸುವುದಕ್ಕೆ

ಸಾಧ್ಯವಾಗಿದೆ. ೧೯೮೪ ರಲ್ಲಿ ಸಿದ್ದಿಯರ ಸಂಘ ಅಸ್ತಿತ್ವಕ್ಕೆ ಬರಲು ಜೆ.ಬಿ.ಡಿಸಿಲ್ವಾ ಮತ್ತು ಕೋಯಿಮಾ ಎನ್ನುವ ಪಾದ್ರಿಗಳು ಪ್ರಮುಖ ಕಾರಣರಾಗಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಈ ಸಂಘವು ಅಸ್ತಿತ್ವಕ್ಕೆ ಬಂದಿತು. ಈ ಸಂಘ ಅಸ್ತಿತ್ವಕ್ಕೆ ಬರುವ ಸಂದರ್ಭದಲ್ಲಿ ಹಲವರು ಇದನ್ನು ವಿರೋಧಿಸಿದರು. ಅಥವಾ ಅನ್ಯ ಸಮುದಾಯದ ಕೆಲವರು ಅಡ್ಡಿಪಡಿಸಲು ಪ್ರಯತ್ನಿಸಿದರು. ಅಂತಹವರಲ್ಲಿ ಮಂಗಳೂರಿನ ಶಿವಪ್ಪ ಪೂಜಾರಿ ಪ್ರಮುಖರು. ಈ ಸಂಘಕ್ಕೆ ಯಾರೂ ಇಲ್ಲ. ಈ ಸಂಘಕ್ಕೆ ಪ್ರೋತ್ಸಾಹ ನೀಡಬೇಡಿ ಎಂದು ನೇರವಾಗಿ ತಿಳಿಸಿ ಸಂಘದ ಅಸ್ತಿತ್ವಕ್ಕೆ ಅಡ್ಡಗಾಲು ಹಾಕಲು ಪ್ರಯತ್ನಿಸಿದರು. ಹೀಗೆ ಹಲವಾರು ಜನರು ಅಡ್ಡಿಪಡಿಸಿದರೂ ಸಂಘ ಅಸ್ತಿತ್ವಕ್ಕೆ ಬಂದಿತು. ಸಂಘ ಅಸ್ತಿತ್ವಕ್ಕೆ ಬಂದ ನಂತರ ಸಿದ್ದಿ ಜನಾಂಗವನ್ನು ಮೆಚ್ಚುವಂತೆ ಅಂದಿನ ಟೀಕಾಕಾರರು ಇಂದು ಸಮುದಾಯದ ಬಗೆಗೆ ಮಾತನಾಡುತ್ತಿದ್ದಾರೆ.

ಸಿದ್ದಿಯರು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಸರ್ಕಾರಕ್ಕೆ ಸೌಲಭ್ಯಗಳನ್ನು ಯಾಚಿಸಿದಾಗ ಸರ್ಕಾರ ಜಾಣ ಉತ್ತರವನ್ನು ನೀಡುತ್ತದೆ. ಅದೇನೆಂದರೆ, ನೀವು ಪ್ರವರ್ಗ–೧ ರಲ್ಲಿ ಬರುತ್ತೀರಿ ಆದ್ದರಿಂದ ನಿಮ್ಮ ಬೇಡಿಕೆಗಳನ್ನು ಈಡೇರಿಸಲು ಸಾಧ್ಯವಿಲ್ಲವೆಂದು ಸರ್ಕಾರ ಸ್ಪಷ್ಟಪಡಿಸುತ್ತದೆ. ಆದರೂ ಧೃತಿಗೆಡದೆ ಸಿದ್ದಿಯರು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾರೆ. ನಂತರದಲ್ಲಿ ಉತ್ತರಕನ್ನಡ ಜಿಲ್ಲೆಯ ಸಂಸದೆಯರಾಗಿದ್ದ ಮಾರ್ಗರೇಟ್ ಆಳ್ವಾರವರ ಪ್ರಮುಖ ಪ್ರಯತ್ನದಿಂದ ಪರಿಶಿಷ್ಟ ಪಂಗಡವಾಗಿ ಸರ್ಕಾರದಿಂದ ಮಾನ್ಯತೆ ಪಡೆಯಲು ಕಾರಣವಾಯಿತು ಎನ್ನುವ ಅಭಿಪ್ರಾಯವನ್ನು ಸಿದ್ದಿಯರಲ್ಲಿ ಬಹುತೇಕರು ತಿಳಿಸುತ್ತಾರೆ.

ಸಿದ್ದಿಯರು ಒಬ್ಬರ ಕೈಯಿಂದ ಇನ್ನೊಬ್ಬರ ಕೈಗಳಿಗೆ ತೊತ್ತುಗಳಾಗಿ ಬದಲಾವಣೆಯಾಗುತ್ತಾ ಬಂದಂತೆಲ್ಲಾ ಅವರ ಮೂಲ ಸಂಸ್ಕೃತಿ ಹರಿದು ಚಿಂದಿಯಾಗಿ ಹೋಯಿತು. ನಮ್ಮ ಸರ್ಕಾರ ತೆಗೆದುಕೊಳ್ಳುವ ಕ್ರಮ ಕೆಲವು ಸಂದರ್ಭದಲ್ಲಿ ಯಾವ ರೀತಿಯಾಗಿರುತ್ತದೆ ಎಂದರೆ 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ, ಜುಟ್ಟಿಗೆ ಮಲ್ಲಿಗೆ ಹೂವು' ಎನ್ನುವಂತಿರುತ್ತದೆ. ನಮ್ಮ ದೇಶದಲ್ಲಿ ಹಲವಾರು ಬಡ ಸಮುದಾಯಗಳಿವೆ. ಅವುಗಳನ್ನು ಸಂರಕ್ಷಿಸುವುದರ ಬದಲು ಅನ್ಯ ದೇಶಿಯರನ್ನು ಸಂರಕ್ಷಿಸುವ ಕೆಲಸ ಮಾಡುತ್ತಿದೆ. ಅಂದರೆ ಟಿಬೆಟಿಯನ್ನರಿಗೆ ಆಶ್ರಯ ಧಾಮವನ್ನು ನಿರ್ಮಿಸಿ ಅವರಿಗೆ ಸಹಾಯ ಮಾಡುತ್ತಿದೆ. ಆದರೆ ದೇಶದಲ್ಲಿಯೇ ಇರುವ ಸಮುದಾಯಗಳಿಗೆ ಇದರ ಭಾಗ್ಯವಿಲ್ಲದಂತಾಗಿದೆ. ಸಿದ್ದಿಯರು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಅತ್ಯಂತ ಕೆಳಸ್ತರದಲ್ಲಿದ್ದಾರೆ. ಇವರನ್ನು ಮೇಲೆತ್ತುವ ಪ್ರಯತ್ನವನ್ನು ಸರ್ಕಾರ ಮಾಡಬೇಕಾಗಿದೆ. ಅಂದಾಗ ಮಾತ್ರ ಸಮುದಾಯದ ಏಳಿಗೆ ಸಾಧ್ಯವಾಗುತ್ತದೆ.

## ೭.೩ ರಾಜಕೀಯ ಮೀಸಲಾತಿ ಬಳಕೆ ಮತ್ತು ಅಭಿವೃದ್ಧಿ

ಭಾರತ ದೇಶಕ್ಕೆ ೧೯೪೭ ಆಗಸ್ಟ್ ೧೫ ರಂದು ಸ್ವಾತಂತ್ರ್ಯ ದೊರೆಯಿತು. ಆದರೆ ಬುಡಕಟ್ಟ ಸಮುದಾಯಗಳಿಗೆ "ಡಿಸೆಂಬರ್ ೨೪, ೧೯೯೬ Panchayat Extension to Schedule Areas Act ಜಾರಿಗೆ ಬಂದ ದಿನ. ಈ ಕಾಯ್ದೆಯು ಷೆಡ್ಯೂಲ್ ಏರಿಯಾದಲ್ಲಿ ವಾಸಮಾಡುತ್ತಿರುವ ಬುಡಕಟ್ಟು ಸಮುದಾಯಗಳಿಗೆ ಅಲ್ಲಿಯ ಸಂಪನ್ಮೂಲಗಳ ಮೇಲೆ ಅಧಿಪತ್ಯ ಸ್ಥಾಪಿಸಲು ಅನುವು ಮಾಡಿಕೊಟ್ಟಿತು ಹಾಗೂ ಅವರ ಪಾರಂಪರಿಕ ವ್ಯವಸ್ಥೆಯನ್ನು ಜಾರಿಗೊಳಿಸಲು ಅನುವು ಮಾಡಿಕೊಟ್ಟ ದಿನ."[೫]

ಬುಡಕಟ್ಟು ಸಮುದಾಯಗಳು ರಾಜಕೀಯವಾಗಿ ಪ್ರಗತಿಯನ್ನು ಸಾಧಿಸುವುದಕ್ಕೆ ಪಂಚಾಯತ್ ರಾಜ್ ವ್ಯವಸ್ಥೆಯು ಪ್ರಮುಖ ಪಾತ್ರ ವಹಿಸುತ್ತದೆ. ಪಂಚಾಯತ್ ರಾಜ್ ವ್ಯವಸ್ಥೆಯು ಭಾರತಕ್ಕೆ ಸ್ವಾತಂತ್ರ್ಯ ಬಂದ ದಿನದಿಂದಲೂ ಅಸ್ತಿತ್ವದಲ್ಲಿದ್ದರೂ ನಂತರದ ದಿನಗಳಲ್ಲಿ ಈ ವ್ಯವಸ್ಥೆಯನ್ನು ಉತ್ಕೃಷ್ಟವಾಗಿ ಅಳವಡಿಸಿಕೊಳ್ಳಲಾಗಿದೆ. ಪಂಚಾಯತ್ ರಾಜ್ ವ್ಯವಸ್ಥೆಯು ಸಂವಿಧಾನಿಕ ಸ್ಥಾನಮಾನವನ್ನು ಪಡೆದಾಗ, ಶತಶತಮಾನಗಳಿಂದ ಅನ್ಯಾಯಕ್ಕೆ ಒಳಗಾದ ಹಿಂದುಳಿದ ವರ್ಗಗಳ ಪಾಲಿಗೆ ಭಾಗ್ಯದ ಬಾಗಿಲು ತೆರೆದಂತಾಯಿತು. ದುರ್ಬಲ ಸಮುದಾಯಗಳಿಗೆ ಮೀಸಲಾತಿಯನ್ನು ಕಲ್ಪಿಸುವುದರ ಮುಖಾಂತರ ಅವುಗಳ ರಾಜಕೀಯ ಪ್ರವೇಶಕ್ಕೆ ಅನುವು ಮಾಡಿಕೊಟ್ಟಿತು.

ಕರ್ನಾಟಕದಲ್ಲಿ ೨೦೦೩ ಕ್ಕಿಂತ ಮೊದಲು ೪೯ ಬುಡಕಟ್ಟು ಸಮುದಾಯಗಳಿದ್ದವು. ೨೦೦೩ ರಲ್ಲಿ ಉತ್ತರಕನ್ನಡ ಜಿಲ್ಲೆಯ ಸಿದ್ದಿ ಸಮುದಾಯ ೫೦ ನೇ ಬುಡಕಟ್ಟು ಸಮುದಾಯವಾಗಿ ಸೇರ್ಪಡೆಯಾಯಿತು. ಕರ್ನಾಟಕ ರಾಜ್ಯ ಪತ್ರ, ಗುರುವಾರ ಮೇ ೧೫, ೨೦೦೩ ರಂದು ಸಿದ್ದಿ ಸಮುದಾಯವನ್ನು ಬುಡಕಟ್ಟು ಸಮುದಾಯವೆಂದು ಘೋಷಿಸಿ ಬುಡಕಟ್ಟು ಪಟ್ಟಿಯೊಳಗೆ ಅಧಿಕೃತವಾಗಿ ಸೇರ್ಪಡೆ ಮಾಡಿರುವುದು ತಿಳಿದುಬರುತ್ತದೆ. ಸಿದ್ದಿಯರು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿದ ನಂತರ ಸರ್ಕಾರದಿಂದ ಕೆಲವು ಸೌಲಭ್ಯಗಳು ದೊರೆಯುವಂತಾಯಿತು. ಅದರಲ್ಲಿ ಪ್ರಮುಖವಾಗಿ ರಾಜಕೀಯ ಪ್ರವೇಶಕ್ಕೆ ಅನುಕೂಲವಾಯಿತು. ಸಂವಿಧಾನದ ಪ್ರಕಾರ "ಅನುಸೂಚಿತ ಜಾತಿಗೆ ಶೇ. ೧೫, ಅನುಸೂಚಿತ ಪಂಗಡಕ್ಕೆ ಶೇ. ೩, ಹಿಂದುಳಿದ ವರ್ಗಕ್ಕೆ ಶೇ. ೩೩"[೬] ಮೀಸಲಾತಿಯನ್ನು ಕಲ್ಪಿಸಿದೆ. ಈ ಮೀಸಲಾತಿಯ ಮುಖಾಂತರ ಸಿದ್ದಿಯರು ರಾಜಕೀಯ ಪ್ರವೇಶ ಮಾಡುತ್ತಿದ್ದಾರೆ.

ಸಿದ್ದಿಯರು ಬಡವರಾಗಿದ್ದು, ನಾಗರಿಕ ಸಮುದಾಯದಿಂದ ಅನ್ಯಾಯಕ್ಕೊಳಗಾಗಿದ್ದರೂ ಇಂದು ಸ್ವತಂತ್ರ ಜೀವನ ನಡೆಸುವುದರ ಕಡೆ ಮುಖ ಮಾಡುತ್ತಿದ್ದಾರೆ. ಪರಿಣಾಮವಾಗಿ ಗ್ರಾಮ ಪಂಚಾಯತಿ ಮತ್ತು ತಾಲೂಕ ಪಂಚಾಯತಿಗಳಲ್ಲಿ ಸ್ಪರ್ಧಿಸಿ ತಮ್ಮ ಅಸ್ತಿತ್ವವನ್ನು

ಕಂಡುಕೊಳ್ಳುವುದರ ಮುಖಾಂತರ ರಾಜಕೀಯ ಜೀವನಕ್ಕೆ ಪ್ರವೇಶಿಸುತ್ತಿದ್ದಾರೆ. ಆಧುನಿಕ ಸಮಾಜದ ಕೆಲವು ಸಮುದಾಯಗಳು ಇವರನ್ನು ಮೂಲೆಗುಂಪು ಮಾಡಲು ಪ್ರಯತ್ನಿಸಿದರು. ಅದನ್ನೆಲ್ಲಾ ಎದುರಿಸಿ ಇಂದು ಹೊಸ ಜೀವನದ ಕಡೆ ಮುಖ ಮಾಡುತ್ತಿರುವುದು ಸಿದ್ದಿಯರ ಅಭಿವೃದ್ಧಿಯ ಸಂಕೇತವಾಗಿದೆ. ಇಂದು "ನಾವು ಭಾರತದಲ್ಲಿ ಪ್ರಜಾಪ್ರಭುತ್ವದ ಪದ್ಧತಿಯ ಸರ್ಕಾರವನ್ನು ರೂಡಿಸಿಕೊಂಡಿರುವುದರಿಂದ ನಮ್ಮ ಜೀವನಕ್ಕೆ ಮುಖವು ಮೂಡಿದೆ. ರಾಜಕೀಯದಿಂದ ದೂರವಿರುವುದು ಈಗ ಕಾಲ್ಪನಿಕ ವಿಚಾರವೆನಿಸಬಹುದು. ಏಕೆಂದರೆ ಎಲ್ಲಾ ಜನರು ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಭಾಗವಹಿಸುವ ಅನಿವಾರ್ಯ ಸ್ಥಿತಿ ಮೂಡಿಬಂದಿದೆ."[೬] ಇದರ ಫಲವಾಗಿ ಸಿದ್ದಿಯರು ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ನೇರ ಭಾಗಿಗಳಾಗುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ.

ಸಿದ್ದಿಯರು ಪರಿಶಿಷ್ಟ ಪಂಗಡಕ್ಕೆ ಸೇರಿದ ನಂತರದ ಅವಧಿಯಿಂದ ರಾಜಕೀಯದಲ್ಲಿ ಪ್ರವೇಶವನ್ನು ಪಡೆಯುತ್ತಿದ್ದಾರೆ. ಅಂದರೆ ಅನುಸೂಚಿತ ಪಂಗಡಕ್ಕೆ ಮೀಸಲಿಟ್ಟ ಸ್ಥಾನದಿಂದ ಆಯ್ಕೆಯಾಗಿ ಬರುತ್ತಿರುವುದು ಮುಖ್ಯವಾಗಿ ತಿಳಿಯುತ್ತದೆ. ಅದರಲ್ಲಿಯೂ ಮುಖ್ಯವಾಗಿ ಪರಿಶಿಷ್ಟ ಪಂಗಡದ ಮಹಿಳಾ ಮೀಸಲಾತಿಯಿಂದ ಆಯ್ಕೆಯಾಗಿರುವುದು ಗಮನಿಸಬೇಕಾದ ಮತ್ತೊಂದು ಅಂಶವಾಗಿದೆ. ಸಿದ್ದಿ ಸಮುದಾಯದ ಮಹಿಳೆಯರೇ ರಾಜಕೀಯದಲ್ಲಿ ತೊಡಗಿದ್ದಾರೆ. ಆದರೆ ಸಮುದಾಯದಿಂದ ಯಾವೊಬ್ಬ ಪುರುಷನು ರಾಜಕೀಯ ಸದಸ್ಯನಾಗಿರುವುದು ತಿಳಿದುಬರುವುದಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಪರಿಶಿಷ್ಟ ಪಂಗಡದ ಮೀಸಲಾತಿ ಕ್ಷೇತ್ರಕ್ಕೆ ಇತರ ಬುಡಕಟ್ಟು ಸಮುದಾಯಗಳು ತೀವ್ರ ಸ್ಪರ್ಧೆಯೊಡ್ಡುತ್ತಿವೆ. ಆ ರೀತಿಯ ಸ್ಪರ್ಧೆಯನ್ನು ಎದುರಿಸುವ ಸಾಮರ್ಥ್ಯ ಸಿದ್ದಿಯರಿಗಿಲ್ಲ. ಕಾರಣವೆಂದರೆ, ಆರ್ಥಿಕವಾಗಿ ದುರ್ಬಲರಿದ್ದಾರೆ. ಮತ್ತು ಮುಖ್ಯವಾಹಿನಿಗೆ ಅಷ್ಟೊಂದು ಪರಿಚಿತರಲ್ಲದಿರುವುದು. ಆದರೆ ಅದೇ ಸಮುದಾಯದ ಮಹಿಳಾ ಮೀಸಲಾತಿ ಸ್ಥಾನಕ್ಕೆ ಇತರ ಸಮುದಾಯದ ಮಹಿಳೆಯರು ಅಷ್ಟೊಂದು ಆಸಕ್ತಿಯನ್ನು ತೋರುತ್ತಿಲ್ಲ. ಬದಲಾಗಿ ಕೆಲವು ಕಡೆ ಸಿದ್ದಿ ಮಹಿಳೆ ಇನ್ನೊಬ್ಬ ಸಿದ್ದಿ ಮಹಿಳೆಯೊಂದಿಗೆ ಚುನಾವಣೆಯಲ್ಲಿ ಸ್ಪರ್ಧಿಸುತ್ತಿರುವುದು ತಿಳಿದುಬರುತ್ತದೆ. ಅಂದರೆ, ಇತರೆ ಬುಡಕಟ್ಟು ಸಮುದಾಯಗಳ ಮಹಿಳೆಯರನ್ನು ರಾಜಕಾರಣಕ್ಕೆ ಪ್ರವೇಶಿಸಲು ಆ ಸಮುದಾಯಗಳು ಹಿಂಜರಿಯುತ್ತಿವೆ. ಅಲ್ಲದೆ ಕೆಲವು ಪ್ರದೇಶಗಳಲ್ಲಿ ಸಿದ್ದಿಯರು ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿರುವುದರಿಂದ ಸಮುದಾಯದವರ ಗೆಲುವಿಗೆ ಪ್ರಮುಖ ಕಾರಣವಾಗಿದೆ.

ರಾಜಕೀಯ ಎಂದ ತಕ್ಷಣ ನೆನಪಿಗೆ ಬರುವುದು ರಾಜಕೀಯ ಪಕ್ಷಗಳು. ಸಿದ್ದಿಯರು ಚುನಾವಣೆಗೆ ಸ್ಪರ್ಧಿಸಬೇಕಾದರೆ ರಾಜಕೀಯ ಪಕ್ಷಗಳ ಮುಖಾಂತರ ಸ್ಪರ್ಧಿಸಿರುವುದು ಕಂಡುಬರುತ್ತದೆ. "ಕರ್ನಾಟಕದಲ್ಲಿ ಪಂಚಾಯತ್ ಸಂಸ್ಥೆಗಳ ಚುನಾವಣೆಗೆ ಸಂಬಂಧಿಸಿದಂತೆ

ರಾಜಕೀಯ ಪಕ್ಷಗಳ ಪ್ರವೇಶಕ್ಕೆ ಶಾಸನಾತ್ಮಕ ಕ್ರಮವನ್ನು ಮೊಟ್ಟ ಮೊದಲ ಬಾರಿಗೆ ೧೯೮೩ ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದಲ್ಲಿ ಹಸಿರು ನಿಶಾನೆಯನ್ನು ನೀಡುವ ಮೂಲಕ ಜಾರಿಗೆ ತರಲಾಯಿತು. ಜನತಾ ಪಕ್ಷ ಸರ್ಕಾರದ ರುವಾರಿಯಾದ ರಾಮಕೃಷ್ಣ ಹೆಗಡೆ ಮತ್ತು ಪಂಚಾಯತ್ ಹರಿಕಾರರಾದ ಅಬ್ದುಲ್ ನಜೀರ್ ಸಾಬ್ ಅವರು ಇದಕ್ಕೊಂದು ಉತ್ತಮ ಬುನಾದಿಯನ್ನು ಹಾಕಿದರೆಂದು ಹೇಳಬಹುದು."[೮] ಪಂಚಾಯತ್ ರಾಜ್ ಚುನಾವಣೆಯಿಂದ ಹಿಡಿದು ಲೋಕಸಭೆಯವರೆಗೆ ಇಂದು ರಾಜಕೀಯ ಪಕ್ಷಗಳದ್ದೇ ಕಾರುಬಾರು. ಸಿದ್ದಿಯರೂ ಸಹ ಕಾಂಗ್ರೆಸ್, ಭಾರತೀಯ ಜನತಾ ಪಾರ್ಟಿ, ಜನತಾ ದಳ (ಎಸ್), ಸಮಾಜವಾದಿ ಪಕ್ಷಗಳಿಂದ ಆರಿಸಿ ಬಂದಿದ್ದಾರೆ. ಅಂದರೆ ಪಕ್ಷಗಳು ಸ್ಥಳೀಯ ಮಟ್ಟದ ಚುನಾವಣೆಯಲ್ಲಿಯೂ ಪ್ರಮುಖ ಪ್ರಭಾವ ಬೀರುತ್ತಿವೆ.

ಪ್ರಸ್ತುತ ಸಿದ್ದಿ ಸಮುದಾಯದವರು ಪಂಚಾತಯತ್ ರಾಜ್ ವ್ಯವಸ್ಥೆಗೆ ತಾಲೂಕವಾರು ಆಯ್ಕೆಯಾಗಿರುವುದನ್ನು ಈ ಕೆಳಗಿನಂತೆ ತಿಳಿಯಬಹುದು.

ಹಳಿಯಾಳ ತಾಲೂಕಿನ ಗ್ರಾಮ ಪಂಚಾಯತಿಯ ಸಿದ್ದಿ ಸಮುದಾಯದ ಸದಸ್ಯರ ವಿವರ

| ಕ್ರ. ಸಂ. | ಸದಸ್ಯರ ಹೆಸರು | ಗ್ರಾಮ, ಗ್ರಾ.ಪಂ. | ಧರ್ಮ | ಪಕ್ಷ |
|---|---|---|---|---|
| ೧ | ಲೂಝಿಯಾ ಮಿಂಗೆಲ್ ಸಿದ್ದಿ | ಹೊಸೂರು, ತಟ್ಟಿಗೇರ | ಕ್ರೈಸ್ತ ಸಿದ್ದಿ | ಕಾಂಗ್ರೆಸ್ |
| ೨ | ಇದಾಲಿನ್ ಇಂಥ್ರೋಜ್ ಬೆಳಗಾಂವ್‌ಕರ್ | ಮುಕ್ಕಿನಕೊಪ್ಪ, ಗುಂಡೊಳ್ಳಿ | ಕ್ರೈಸ್ತ ಸಿದ್ದಿ | ಕಾಂಗ್ರೆಸ್ |
| ೩ | ಪ್ರಾಸ್ಸಿ ಕುಸ್ತಾದ್ ಸಿದ್ದಿ | ದೊಡ್ಡಕೊಪ್ಪ, ಜನಗಾ | ಮುಸ್ಲಿಂ ಸಿದ್ದಿ | ಕಾಂಗ್ರೆಸ್ |
| ೪ | ಮೇರಿ ಭಾವತೀಸ್ ಗರಿಬಾಚೆ ಸಿದ್ದಿ | ಕಾಮತಿಕೊಪ್ಪ, ಗುಂಡೊಳ್ಳಿ | ಕ್ರೈಸ್ತ ಸಿದ್ದಿ | ಕಾಂಗ್ರೆಸ್ |

ಯಲ್ಲಾಪುರ ತಾಲೂಕಿನ ಗ್ರಾಮ ಪಂಚಾಯತಿಯ ಸಿದ್ದಿ ಸಮುದಾಯದ ಸದಸ್ಯರ ವಿವರ

| ಕ್ರ. ಸಂ. | ಸದಸ್ಯರ ಹೆಸರು | ಗ್ರಾಮ, ಗ್ರಾ.ಪಂ. | ಧರ್ಮ | ಪಕ್ಷ |
|---|---|---|---|---|
| ೧ | ಲಲಿತಾ ಬಾಬುಣಿ ಸಿದ್ದಿ | ವಜ್ರಳ್ಳಿ | ಹಿಂದೂ ಸಿದ್ದಿ | ಬಿ.ಜೆ.ಪಿ. |
| ೨ | ದೇವಿಕಾ ನಾಗರಾಜ್ ಸಿದ್ದಿ | ಆನಗೋಡ | ಹಿಂದೂ ಸಿದ್ದಿ | ಬಿ.ಜೆ.ಪಿ. |
| ೩ | ಲಕ್ಷ್ಮೀ ನಾಗ್ಯ ಸಿದ್ದಿ | ಹಾಸಣಗಿ | ಹಿಂದೂ ಸಿದ್ದಿ | ಕಾಂಗ್ರೆಸ್ |

| ೪ | ಸುಶೀಲಾ ಶಾಂತಾರಾವ್ ಸಿದ್ದಿ | ಹಿತ್ಲಳ್ಳಿ | ಹಿಂದೂ ಸಿದ್ದಿ | ಕಾಂಗ್ರೆಸ್ |
|---|---|---|---|---|
| ೫ | ಶಾಂತಾಬಾಯಿ ಸುಕ್ರು ಸಿದ್ದಿ | ಇಡಗುಂದಿ | ಹಿಂದೂ ಸಿದ್ದಿ | ಕಾಂಗ್ರೆಸ್ |
| ೬ | ಲಕ್ಷ್ಮೀ ಸುಬ್ಬುರಾವ್ ಸಿದ್ದಿ | ಕಂಪ್ಲಿ | ಹಿಂದೂ ಸಿದ್ದಿ | ಕಾಂಗ್ರೆಸ್ |
| ೭ | ಯಶೋಧಾ ದಾನೇಶ್ವರ ಸಿದ್ದಿ | ಕಣ್ಣಿಗಿ | ಹಿಂದೂ ಸಿದ್ದಿ | ಬಿ.ಜೆ.ಪಿ. |
| ೮ | ಪಾರ್ವತಿ ಸಣ್ಣ್ಯಾ ಸಿದ್ದಿ | ಕುಂದರಗಿ | ಹಿಂದೂ ಸಿದ್ದಿ | ಕಾಂಗ್ರೆಸ್ |
| ೯ | ತನ್ನು ವಿಲಿಯಂ ಸಿದ್ದಿ | ಮದ್ನೂರು | ಕ್ರೈಸ್ತ ಸಿದ್ದಿ | ಕಾಂಗ್ರೆಸ್ |
| ೧೦ | ಲಲಿತಾ ನರಸಿಂಹ ಸಿದ್ದಿ | ನಂದಿಹಳ್ಳಿ | ಹಿಂದೂ ಸಿದ್ದಿ | ಕಾಂಗ್ರೆಸ್ |
| ೧೧ | ಭಾಗೀರಥಿ ಚಂದ್ರು ಸಿದ್ದಿ | ಉಮಚಗಿ | ಹಿಂದೂ ಸಿದ್ದಿ | ಕಾಂಗ್ರೆಸ್ |

**ಕಾರವಾರ ತಾಲೂಕು ಪಂಚಾಯತಿಯ ಸಿದ್ದಿ ಸಮುದಾಯದ ಸದಸ್ಯರ ವಿವರ**

| ಕ್ರ. ಸಂ. | ಸದಸ್ಯರ ಹೆಸರು | ತಾಲೂಕು ಪಂಚಾಯತ್ ಕ್ಷೇತ್ರ | ಧರ್ಮ | ಪಕ್ಷ |
|---|---|---|---|---|
| ೧ | ರಾಜಬೀ ಮೋದಿನ್‌ಸಾಬ್ ಸಿದ್ದಿ. | ಬಂಗಾರಪ್ಪ ನಗರ | ಮುಸ್ಲಿಂ ಸಿದ್ದಿ | ಸಮಾಜವಾದಿ ಪಕ್ಷ |

ಸಿದ್ದಿ ಸಮುದಾಯದಿಂದ ಒಬ್ಬರು ಮಾತ್ರ ಕಾರವಾರ ತಾಲೂಕು ಪಂಚಾಯತಿಯ ಸದಸ್ಯರಾಗಿದ್ದಾರೆ. ಉಳಿದಂತೆ ಹಳಿಯಾಳದಲ್ಲಿ ಕಾಂಗ್ರೆಸ್‌ನಿಂದ ನಾಲ್ಕು ಜನ ಸಿದ್ದಿ ಮಹಿಳೆಯರು ಗ್ರಾಮ ಪಂಚಾಯತಿಗೆ ಆಯ್ಕೆಯಾಗಿದ್ದಾರೆ. ಇವರಲ್ಲಿ ಮೂರು ಜನ ಕ್ರೈಸ್ತ ಧರ್ಮದವರಾಗಿದ್ದಾರೆ. ಒಬ್ಬರು ಮಾತ್ರ ಇಸ್ಲಾಂ ಧರ್ಮದ ಸಿದ್ದಿಯರಾಗಿದ್ದಾರೆ. ಆದರೆ ಹಿಂದೂ ಸಿದ್ದಿಗಳು ಹಳಿಯಾಳ ತಾಲೂಕಿನ ರಾಜಕೀಯದಲ್ಲಿ ಯಾರೂ ಸಹ ಗೆಲುವನ್ನು ಪಡೆದಿರುವುದಿಲ್ಲ. ಯಲ್ಲಾಪುರ ತಾಲೂಕಿನ ವಿವಿಧ ಗ್ರಾಮಗಳ ಗ್ರಾಮ ಪಂಚಾಯತಿಗೆ ಸಿದ್ದಿಯರ ಒಟ್ಟು ಹನ್ನೊಂದು ಜನ ಮಹಿಳೆಯರು ಆಯ್ಕೆಯಾಗಿದ್ದಾರೆ. ಒಬ್ಬರು ಮಾತ್ರ ಕ್ರೈಸ್ತ ಧರ್ಮದ ಸಿದ್ದಿಯವರಾಗಿದ್ದರೆ, ಉಳಿದ ಹತ್ತು ಜನ ಸದಸ್ಯರು ಹಿಂದೂ ಸಿದ್ದಿಯರಾಗಿದ್ದಾರೆ. ಮೂರು ಜನ ಬಿ.ಜೆ.ಪಿ ಪಕ್ಷದಿಂದ ಆರಿಸಿ ಬಂದಿದ್ದರೆ, ಉಳಿದ ಎಂಟು ಜನ ಸಿದ್ದಿಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿರುವುದು ತಿಳಿಯುತ್ತದೆ. ಸಿದ್ದಿಯರು ನಿಧಾನವಾಗಿ ರಾಜಕೀಯದಲ್ಲಿ ಅಂಬೆಗಾಲಿಡುತ್ತಿದ್ದಾರೆ ಎಂದು ಹೇಳಬಹುದು. ಇಂದಿನ ಅಮೆರಿಕಾದ ಅಧ್ಯಕ್ಷ ಸ್ಥಾನ ಕಪ್ಪು ವ್ಯಕ್ತಿಗೆ ಒಲಿದಂತೆ ಮುಂದೊಂದು ದಿನ ಸಿದ್ದಿಯರು ಭಾರತದ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸಬಹುದೆಂದು ಆಶಿಸಬಹುದಾಗಿದೆ.

## ೭.೫ ರಾಜಕೀಯ ಸ್ಥಿತಿಗತಿ

ಸಿದ್ದಿಯರು ಇಂದು ರಾಜಕೀಯದಲ್ಲಿ ಹೇಳಿಕೊಳ್ಳುವಂತಹ ಸ್ಥಾನಮಾನವನ್ನು ಪಡೆದಿಲ್ಲ. ಇವರ ಒಟ್ಟು ಜನಸಂಖ್ಯೆಯಿಂದ ಹದಿನೈದು ಜನ ಗ್ರಾ.ಪಂ. ಸದಸ್ಯರು ಮತ್ತು ಒಬ್ಬರು ಮಾತ್ರ ತಾಲೂಕ ಪಂಚಾಯತ್ ಸದಸ್ಯರಾಗಿದ್ದಾರೆ. ಗ್ರಾಮ ಪಂಚಾಯತ್‌ನಲ್ಲಿ ರಾಜಕೀಯವಾಗಿ ಪ್ರವೇಶ ಪಡೆದಿದ್ದಾರೆ ಎಂದ ತಕ್ಷಣ ಇವರು ರಾಜಕೀಯವಾಗಿ ಪ್ರಬಲರಾಗುತ್ತಿದ್ದಾರೆಂದು ಹೇಳುವಂತಿಲ್ಲ. ಕಾರಣ ಗ್ರಾ.ಪಂ. ಚುನಾವಣೆಯು ಸ್ಥಳೀಯ ಮಟ್ಟದ್ದಾಗಿರುತ್ತದೆ. ಅಲ್ಲದೆ ಒಂದು ವಾರ್ಡ್‌ನ ಸದಸ್ಯರು ಆಯ್ಕೆ ಮಾಡಿರುತ್ತಾರೆ. ಇಲ್ಲವೇ ಚಿಕ್ಕದಾದ ತಮ್ಮ ಗ್ರಾಮ ಸಮುದಾಯದಿಂದ ಆಯ್ಕೆಯಾಗಿರುತ್ತಾರೆ. ಆದ್ದರಿಂದ ಸಮುದಾಯ ರಾಜಕೀಯದಲ್ಲಿ ಸಾಗುವ ಹಾದಿ ಇನ್ನೂ ಬಹುದೂರವಿದೆ. ತಮ್ಮ ಸಮುದಾಯದವರೇ ಹೆಚ್ಚಾಗಿ ನೆಲೆಸಿರುವ ಮೀಸಲು ಸ್ಥಾನದಿಂದ ಆಯ್ಕೆಯಾಗಿರುವುದರಿಂದ ಇದನ್ನು ಗಂಭೀರವಾಗಿ ಪರಿಗಣಿಸುವ ಅವಶ್ಯಕತೆ ಇಲ್ಲ. ಕಾರಣ ಮೀಸಲು ಕ್ಷೇತ್ರವನ್ನು ಹೊರತುಪಡಿಸಿ ಇನ್ನುಳಿದ ಕ್ಷೇತ್ರಗಳಲ್ಲಿ ಸ್ಪರ್ಧಿಸಿ ಜಯಿಸಿದ್ದರೆ ಆಗ ಸಿದ್ದಿಯರ ರಾಜಕೀಯಕ್ಕೆ ಇನ್ನೂ ಹೆಚ್ಚಿನ ಮಹತ್ವ ದೊರೆಯುತ್ತಿತ್ತು. ಜೊತೆಗೆ ರಾಜಕೀಯ ಪ್ರಬುದ್ಧತೆಯನ್ನು ಸಾಧಿಸುವುದಕ್ಕೆ ಅವಕಾಶವಾಗುತ್ತಿತ್ತು.

ಸಿದ್ದಿಯರು ಪರಿಶಿಷ್ಟ ಪಂಗಡವಾಗಿ ಸೇರ್ಪಡೆಯಾಗುವುದಕ್ಕಿಂತ ಮುಂಚೆ ರಾಜಕೀಯದಲ್ಲಿ ಪ್ರವೇಶಿಸಿದ್ದಲ್ಲ. ಪರಿಶಿಷ್ಟ ಪಂಗಡವಾಗಿ ಗುರುತಿಸಿಕೊಂಡ ನಂತರ ಮೀಸಲು ಕ್ಷೇತ್ರದಲ್ಲಿ ಅನಿವಾರ್ಯತೆ ಎಂಬಂತೆ ಸ್ಪರ್ಧಿಸಿರಬಹುದು. ಆದರೆ ಸ್ವ ಹಿತಾಸಕ್ತಿಯಿಂದ ಇನ್ನೂ ರಾಜಕೀಯ ಪ್ರವೇಶವಾಗದಿರುವುದು ತಿಳಿದುಬರುತ್ತದೆ. ರಾಜಕೀಯ ಪ್ರಜ್ಞೆಯನ್ನು ಹೊಂದಿ, ಪ್ರಜಾಪ್ರಭುತ್ವದಲ್ಲಿ ನೇರ ಭಾಗಿಗಳಾಗಬೇಕಿರುವುದು ಸಾಕಷ್ಟಿದೆ. ಒಬ್ಬರು ಮಾತ್ರ ತಾಲೂಕು ಪಂಚಾಯತಿಗೆ ಆಯ್ಕೆಯಾಗಿದ್ದಾರೆ. ಇನ್ನುಳಿದಂತೆ ತಾಲೂಕ ಪಂಚಾಯತಿಯಿಂದ ಯಾರೂ ಕೂಡ ಸ್ಪರ್ಧಿಸಿಲ್ಲ ಮತ್ತು ಆಯ್ಕೆಯಾಗಿಲ್ಲ. ಅಲ್ಲದೆ ಪಂಚಾಯತ್ ರಾಜ್ ವ್ಯವಸ್ಥೆಯ ಮತ್ತೊಂದು ಹಂತವಾದ ಜಿಲ್ಲಾ ಪಂಚಾಯತ್‌ನಿಂದ ಸಮುದಾಯದ ಯಾರೊಬ್ಬರೂ ಆಯ್ಕೆಯಾಗಿಲ್ಲ. ಇನ್ನುಳಿದಂತೆ ಸಿದ್ದಿಯರಲ್ಲಿ ಎಂ.ಎಲ್.ಎ., ಎಂ.ಎಲ್.ಸಿ. ಮತ್ತು ಎಂ.ಪಿ.ಗಳಾಗಿ ಯಾರೂ ಸ್ಪರ್ಧಿಸಿಲ್ಲದಿರುವುದು ತಿಳಿದುಬರುತ್ತದೆ.

ಸಿದ್ದಿಯರು ಆರ್ಥಿಕವಾಗಿ ಸ್ಥಿತಿವಂತರಲ್ಲದಿರುವುದರಿಂದ ರಾಜಕೀಯ ನಿರಾಸಕ್ತಿ ಪ್ರಮುಖವಾಗಿ ಕಂಡುಬರುತ್ತದೆ. ಇಂದು ಆಯ್ಕೆಯಾಗಿರುವ ಪಂಚಾಯತ್ ಸದಸ್ಯರು ತಮ್ಮ ಉಪಜೀವನಕ್ಕಾಗಿ ಕೂಲಿಯನ್ನು ಮಾಡುತ್ತಿದ್ದಾರೆ. ಅಂದರೆ ಇವರ ರಾಜಕೀಯ ಸ್ಥಾನಮಾನ ಅಥವಾ ಸ್ಥಿತಿಗತಿಗಳು ಯಾವ ರೀತಿಯಾಗಿವೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು. ಆಯ್ಕೆಯಾದ ಸದಸ್ಯರು ತಮ್ಮ ಅಧಿಕಾರವನ್ನು ಸಮರ್ಥವಾಗಿ ನಿಭಾಯಿಸುತ್ತಿದ್ದೇವೆ ಎಂದು

ತಿಳಿಸುತ್ತಾರೆ. ಆದರೆ ಮಾಲಿಕನು ನೀಡುವ ಕೂಲಿ ಹಣಕ್ಕೆ ಕೈಚಾಚುವ ಪರಿಸ್ಥಿತಿಯನ್ನು ಹೊಂದಿರುವ ಇವರು ಮಾಲಿಕನಿಗೆ ವಿರುದ್ಧವಾಗಿ ಕ್ರಮ ಕೈಗೊಳ್ಳಲು ಸಾಧ್ಯವಾದೀತೆ? ಎನ್ನುವ ಪ್ರಶ್ನೆ ಕಾಡುತ್ತದೆ.

**೭.೬ ಸರ್ಕಾರದ ಸೌಲಭ್ಯಗಳು ಮತ್ತು ಸಿದ್ದಿಯರು**

ಸಮಾಜದಲ್ಲಿ ಮೂರು ಪ್ರಕಾರದ ಸಮುದಾಯಗಳನ್ನು ಗುರುತಿಸಲಾಗುತ್ತದೆ. ಅವುಗಳೆಂದರೆ ಆದಿವಾಸಿ ಸಮುದಾಯ, ಗ್ರಾಮ ಸಮುದಾಯ ಮತ್ತು ನಗರ ಸಮುದಾಯ. ಆದಿವಾಸಿ ಸಮುದಾಯವು ಗ್ರಾಮ ಮತ್ತು ನಗರ ಸಮುದಾಯಗಳಿಂದ ಸಂಪೂರ್ಣ ಭಿನ್ನವಾಗಿದೆ. ಈ ನಾಗರಿಕ ಸಮುದಾಯಗಳಿಂದ ಬಹುದೂರದಲ್ಲಿ ವಾಸವಾಗಿರುತ್ತದೆ. ಭಾರತದ ಬಹುತೇಕ ಬುಡಕಟ್ಟುಗಳು ಅರಣ್ಯದಲ್ಲಿ ವಾಸಿಸುತ್ತಿವೆ. ಆದ್ದರಿಂದ ಇವರನ್ನು ಗಿರಿಜನ ಎಂತಲೂ ಕರೆಯಲಾಗುತ್ತದೆ. ಕಾರಣಾಂತರಗಳಿಂದ ಪುನರ್ವಸತೀಕರಣದ ಸೋಗಿನಲ್ಲಿ ಬುಡಕಟ್ಟು ಸಮುದಾಯಗಳನ್ನು ಕಾಡಿನಿಂದ ಹೊರಗೆ ಅಟ್ಟಲಾಗುತ್ತಿದೆ. ಕಾಡನ್ನೇ ಸಂಪೂರ್ಣವಾಗಿ ಅವಲಂಬಿಸಿ ಬದುಕುತ್ತಿದ್ದ ಸಮುದಾಯಗಳನ್ನು ನಗರದ ಕಡೆ ತರಲಾಗುತ್ತಿದೆ. ನಗರದ ಜೀವನಕ್ಕೆ ಇವರದು ಸಂಪೂರ್ಣ ಭಿನ್ನ ಜೀವನವಿದೆ. ನಗರ ಜೀವನಕ್ಕೆ ಬುಡಕಟ್ಟುಗಳನ್ನು ಸ್ಥಳಾಂತರಿಸಿದುದರ ಪರಿಣಾಮವಾಗಿ ಆ ಕಡೆ ತಮ್ಮ ಸಂಸ್ಕೃತಿಯನ್ನಾಗಲೀ, ಈ ಕಡೆ ನಗರದ ಸಂಸ್ಕೃತಿಯನ್ನಾಗಲಿ ಅನುಕರಣೆ ಮಾಡಲಾಗದೆ ಅತಂತ್ರ ಪರಿಸ್ಥಿತಿಗೆ ದೂಡಲ್ಪಟ್ಟಿದ್ದಾರೆ. ಬುಡಕಟ್ಟು ಸಮುದಾಯದವರು ಅನಕ್ಷರಸ್ಥರಾಗಿದ್ದಾರೆ. ಇವರ ಮೌಢ್ಯ, ಪರಂಪರೆ, ಸಂಸ್ಕೃತಿ, ಆಚಾರ-ವಿಚಾರಗಳಿಗೆ ನಾಗರಿಕ ಸಮಾಜದಲ್ಲಿ ಮನ್ನಣೆ ದೊರೆಯುತ್ತಿಲ್ಲ. ಪರಿಣಾಮವಾಗಿ ಬುಡಕಟ್ಟುಗಳು ಹಲವಾರು ಸಮಸ್ಯೆಗಳನ್ನು ಎದುರಿಸುವಂತಾಗಿದೆ. ಈ ಸಮಸ್ಯೆಯನ್ನು ಮನಗಂಡ ಭಾರತದ ಘನ ಸರ್ಕಾರವು ಪರಿಶಿಷ್ಟ ಪಂಗಡಗಳ ಅಭಿವೃದ್ಧಿಗಾಗಿ ೧೯೭೪-೭೫ ರಲ್ಲಿ ಗಿರಿಜನ ಉಪಯೋಜನೆಯೊಂದನ್ನು ಜಾರಿಗೆ ತಂದಿತು.

೧೯೭೪-೭೫ ರಲ್ಲಿ ಜಾರಿಗೆ ಬಂದ ಈ ಉಪಯೋಜನೆಯು ಕೆಲವು ಜಿಲ್ಲೆಗಳಿಗೆ ಮಾತ್ರ ಅನ್ವಯವಾಗುತ್ತಿತ್ತು. ಆದರೆ ಇದನ್ನು ೧೯೯೨ ರಿಂದ ರಾಜ್ಯದ ಎಲ್ಲಾ ಜಿಲ್ಲೆಗಳ ಬುಡಕಟ್ಟುಗಳಿಗೆ ದೊರೆಯುವಂತೆ ವಿಸ್ತರಿಸಲಾಯಿತು. ಈ ಗಿರಿಜನ ಉಪಯೋಜನೆಯಿಂದಾಗಿ ಬುಡಕಟ್ಟು ಸಮುದಾಯಗಳು ಸರ್ಕಾರದ ಹಲವಾರು ಯೋಜನೆಗಳನ್ನು ಪಡೆದು ಪ್ರಗತಿ ಸಾಧಿಸುವುದಕ್ಕೆ ವೇದಿಕೆ ನಿರ್ಮಾಣ ಮಾಡಿತು. ಈ ಯೋಜನೆಯಿಂದಾಗಿ ಬುಡಕಟ್ಟುಗಳು ಸಾಮಾಜಿಕ, ಆರ್ಥಿಕ ಶೋಷಣೆಯಿಂದ ಮುಕ್ತಿ ಪಡೆಯುವುದಕ್ಕೆ ಸಹಕಾರಿಯಾಯಿತು. ಬುಡಕಟ್ಟುಗಳ ಸರ್ವತೋಮುಖ ಅಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆರ್ಥಿಕ

ನೆರವನ್ನು ನೀಡಿದವು. ಈ ಯೋಜನೆಯು ಆರೋಗ್ಯ, ವಸತಿ, ಶಿಕ್ಷಣವನ್ನು ನೀಡುವುದರ ಜೊತೆಗೆ ಸಮುದಾಯಗಳ ಮೂಲ ವೃತ್ತಿಗೆ ಅಥವಾ ಅವರ ಉಪಜೀವನಕ್ಕೆ ಪ್ರೋತ್ಸಾಹ ನೀಡಿತು. ಗೃಹ ಕೈಗಾರಿಕೆ ಅಥವಾ ಕರಕುಶಲ ಕಲೆಗೆ ಹೆಚ್ಚಿನ ಒತ್ತು ನೀಡಿತು. ಫಲವಾಗಿ ಬುಡಕಟ್ಟುಗಳು ಅಭಿವೃದ್ಧಿಯನ್ನು ಸಾಧಿಸುವುದಕ್ಕೆ ಅವಕಾಶ ಒದಗಿದಂತಾಯಿತು. ಮಾನವನ ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ ಮತ್ತು ಬಟ್ಟೆಯನ್ನು ಒದಗಿಸುವ ಪ್ರಾಮಾಣಿಕ ಪ್ರಯತ್ನವನ್ನು ಹೊಂದಿದುದರ ಫಲವಾಗಿ ಬುಡಕಟ್ಟುಗಳು ಅಭಿವೃದ್ಧಿಯನ್ನು ಸಾಧಿಸುವಂತಾಗಿದೆ.

"ಪರಿಶಿಷ್ಟ ಪಂಗಡದವರ ಸರ್ವತೋಮುಖ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆಯ ಅಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಸುಮಾರು ೨೮ ಅಭಿವೃದ್ಧಿ ಇಲಾಖೆ. ನಿಗಮ ಮಂಡಳಿಗಳು ತಮ್ಮ ಯೋಜನಾ ಆಯವ್ಯಯದಲ್ಲಿ ಶೇ. ೩ ನ್ನು ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಮೀಸಲಾಗಿಟ್ಟು, ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಹಲವಾರು ಆರ್ಥಿಕ ಸವಲತ್ತುಗಳ ಜೊತೆಗೆ ಶೈಕ್ಷಣಿಕ ಮತ್ತು ಸಾಮಾಜಿಕ ಸೌಲಭ್ಯಗಳನ್ನು ಒದಗಿಸುತ್ತಿವೆ. ಅಲ್ಲದೆ ಕುಡಿಯುವ ನೀರಿನ ಪೂರೈಕೆ, ವಿದ್ಯುದ್ದೀಕರಣ, ವೈದ್ಯಕೀಯ ಸೌಲಭ್ಯ, ವಸತಿ, ಸಂಪರ್ಕ ರಸ್ತೆ ಮುಂತಾದ ಮೂಲಭೂತ ಸೌಕರ್ಯಗಳಿಗೆ ಆದ್ಯತೆ ನೀಡಲಾಗುತ್ತಿದೆ. ಬುಡಕಟ್ಟು ಪರ ಯೋಜನೆಗಳನ್ನು ನೇರವಾಗಿ ಫಲಾನುಭವಿಗಳಿಗೆ ಮುಟ್ಟಲು ಹಾಗು ಅನವಶ್ಯಕ ವಿಳಂಬವನ್ನು ತಪ್ಪಿಸಲು ಮತ್ತು ಪರಿಣಾಮಕಾರಿಯಾಗಿ ಯೋಜನೆಗಳನ್ನು ಪರಿವೀಕ್ಷಿಸಲು ಅನುಕೂಲವಾಗುವಂತೆ ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯತ್ ಮೂಲಕ ಕೇಂದ್ರ ಪುರಸ್ಕೃತ ಯೋಜನೆಗಳೆಂದು ವಿಭಜಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು, ಇದರ ಮೇಲುಸ್ತುವಾರಿಯನ್ನು ನೋಡಿಕೊಳ್ಳುವುದಕ್ಕೋಸ್ಕರ ೭-೧೧-೯೯ ರಿಂದ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯವನ್ನು ಪ್ರಾರಂಭಿಸಲಾಗಿದೆ."[೬]

ಸಿದ್ದಿಯರು ಗಿರಿಜನ ಉಪಯೋಜನೆಯ ಕೆಲವು ಸೌಲಭ್ಯಗಳನ್ನು ಹಲವಾರು ಕಡೆ ಪಡೆದಿರುವುದು ಕಂಡುಬರುತ್ತಿದೆ. ಕೃಷಿ ಇಲಾಖೆಯ ವತಿಯಿಂದ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ದೊರೆಯುವ ಸೌಲಭ್ಯಗಳು ಕೆಲವು ಸಿದ್ದಿಯರಿಗೆ ದೊರೆತಿವೆ. ಹಳಿಯಾಳ, ಯಲ್ಲಾಪುರ, ಅಂಕೋಲ, ಜೋಯಿಡಾ ತಾಲೂಕಿನ ಸಿದ್ದಿಯರ ಕೃಷಿ ಭೂಮಿಗೆ ಕೆರೆ, ನದಿ, ಬೋರ್‌ವೆಲ್ ವ್ಯವಸ್ಥೆಯಿಂದ ನೀರಾವರಿ ಸೌಲಭ್ಯವನ್ನು ಕಲ್ಪಿಸಲಾಗಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ನೀರಾವರಿ ತನಿಖಾ ಉಪವಿಭಾಗವು ೨೦೦೬-೦೭ ರಲ್ಲಿ ಹಳಿಯಾಳದ ೨೭ ಗ್ರಾಮಗಳಿಂದ ೯೭೩ ಎಕರೆ, ಯಲ್ಲಾಪುರ ತಾಲೂಕಿನ ೩೬ ಗ್ರಾಮಗಳಿಂದ

೮೫೧ ಎಕರೆ, ಅಂಕೋಲ ತಾಲೂಕಿನ ೧೬ ಗ್ರಾಮಗಳಿಂದ ೨೯೬ ಎಕರೆ ಮತ್ತು ಜೋಯಿಡಾ ತಾಲೂಕಿನ ೫ ಗ್ರಾಮಗಳಿಂದ ೨೦ ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸಲು ಅನುದಾನ ನೀಡಿ ಮುಂದಿನ ಕ್ರಮಕ್ಕೆ ಆದೇಶಿಸುವ ವರದಿಯನ್ನು ಸಲ್ಲಿಸಿತು. ಫಲವಾಗಿ ನೀರಾವರಿ ಇಲಾಖೆಯು ಸಿದ್ದಿಯರ ಹಲವಾರು ವ್ಯಕ್ತಿಗಳಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿತು. ವೈಯಕ್ತಿಕ ಬೋರ್‌ವೆಲ್‌ಗಳನ್ನೂ ಸಹ ಕೊರೆಯಿಸಿ ಕೊಟ್ಟಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಕೃಷಿಗೆ ಅನುಗುಣವಾದ ಪರಿಕರಗಳನ್ನು ಕೊಂಡುಕೊಳ್ಳಲು ಸಹಾಯಧನವನ್ನು ನೀಡಲಾಗಿದೆ. ಬೋರ್‌ವೆಲ್ ಕೊರೆಯಿಸಿಕೊಂಡ ಕೆಲವು ಕುಟುಂಬಗಳಿಗೆ ಪಂಪ್‌ಸೆಟ್ ಸೌಲಭ್ಯವೂ ಸಹ ದೊರೆತಿದೆ. ಬೆಳೆದ ಧಾನ್ಯಗಳನ್ನು ರಕ್ಷಿಸಿಕೊಳ್ಳುವ ಸಲುವಾಗಿ ಧಾನ್ಯ ಸಂಗ್ರಹಣಾ ಪೆಟ್ಟಿಗೆಯನ್ನು ಪೂರೈಸಲಾಗಿದೆ. ಕೆಲವು ಕಡೆ ಸಿದ್ದಿಯರ ಅಕ್ರಮ ಭೂಮಿಯನ್ನು ಸಕ್ರಮಗೊಳಿಸಲಾಗಿದೆ.

ಜೋಯಿಡಾ ತಾಲೂಕಿನ ಕೆಲವು ಕುಟುಂಬಗಳಿಗೆ ಮೀನುಗಾರಿಕೆಯ ಇಲಾಖೆಯಿಂದ ಹರಿಗೋಲು ಮತ್ತು ಬಲೆಗಳನ್ನು ನೀಡಲಾಗಿದೆ. ಹೈನುಗಾರಿಕೆಯಲ್ಲಿ ಆಸಕ್ತಿ ಹೊಂದಿರುವ ಬುಡಕಟ್ಟಿನ ಫಲಾನುಭವಿಗಳಿಗೆ ಪಶುಸಂಗೋಪನಾ ಇಲಾಖೆಯಿಂದ ಸಬ್ಸಿಡಿ ದರದಲ್ಲಿ ಸಾಲ ನೀಡಲಾಗಿದೆ. ಹಸು, ಎಮ್ಮೆ ಮುಂತಾದ ಪಶುಪಾಲನೆಗಾಗಿ ಸಿದ್ದಿಯರಲ್ಲಿಯ ಹಲವರು ಇದರ ಸೌಲಭ್ಯವನ್ನು ಪಡೆದಿರುವುದು ತಿಳಿದುಬರುತ್ತದೆ. ಹಳಿಯಾಳ ತಾಲೂಕು ಒಂದರಲ್ಲಿಯೇ ಹೈನುಗಾರಿಕೆಗಾಗಿ ಸಿದ್ದಿ ಸಮುದಾಯದವರಿಗೆ ೨೦೦೪-೦೫ ರಲ್ಲಿ ಸುಮಾರು ೧,೭೦,೦೦೦/- ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ.

ಅರಣ್ಯದ ಬಿದಿರು ಮತ್ತು ಬೆತ್ತಗಳಿಂದ ಕೆಲವರು ಬುಟ್ಟಿ ಮತ್ತಿತರ ಆಸನಗಳನ್ನು ತಯಾರಿಸುತ್ತಾರೆ. ಗಿರಿಜನ ಕರಕುಶಲ ಕಸುಬುದಾರರಿಗೆ ಬುಟ್ಟಿ ಎಣೆಯಲು ಮತ್ತು ಬಿದುರಿನ ಇನ್ನಿತರ ಕೆಲಸಗಳನ್ನು ನಿರ್ವಹಿಸಲು ಅರಣ್ಯ ಇಲಾಖೆಯು ಅರ್ಹ ಪ್ರತೀ ಫಲಾನುಭವಿಗಳಿಗೆ ೫೦೦ ಬಿದಿರು ಮತ್ತು ೫೦೦ ಬೆತ್ತಗಳನ್ನು ಉಚಿತವಾಗಿ ನೀಡುತ್ತದೆ. ಜೇನು, ಕೃಷಿ ಕೈಗೊಳ್ಳುವ ಬುಡಕಟ್ಟು ಫಲಾನುಭವಿಗಳಿಗೆ ೪೫೦ ರೂಪಾಯಿಗಳಿಗೆ ಒಂದು ಜೇನುಪೆಟ್ಟಿಗೆಯಂತೆ ಐದು ಜೇನುಪೆಟ್ಟಿಗೆಗಳನ್ನು ಉಚಿತವಾಗಿ ಒದಗಿಸುತ್ತಿದೆ. ಜೇನಿನ ಕೃಷಿಗೆ ಪ್ರೋತ್ಸಾಹವನ್ನು ನೀಡುತ್ತದೆ.

ಗ್ರಾಮೀಣ ಮತ್ತು ಸಣ್ಣ ಕೈಗಾರಿಕೆಯ ಇಲಾಖೆಯ ಆಸಕ್ತಿ ಇರುವ ಬುಡಕಟ್ಟು ನಿರುದ್ಯೋಗಿ ಯುವಕ-ಯುವತಿಯರಿಗೆ ವಿವಿಧ ರೀತಿಯ ತರಬೇತಿಯನ್ನು ನೀಡುತ್ತದೆ. ತರಬೇತಿಯಲ್ಲಿ ಶಿಷ್ಯವೇತನವನ್ನು ನೀಡುತ್ತದೆ. ತರಬೇತಿಯ ನಂತರ ಅವರ ತರಬೇತಿಗನುಗುಣವಾದ ೨೦೦೦ ರೂಪಾಯಿ ಬೆಲೆಯ ಸಾಧನ-ಸಲಕರಣೆಗಳನ್ನು ಒದಗಿಸುತ್ತದೆ. ಈ ಇಲಾಖೆಯ ವತಿಯಿಂದ ಹಳಿಯಾಳ ತಾಲೂಕಿನ ಒಬ್ಬರು ಇಟ್ಟಿಗೆ

ತಯಾರಿಕೆಯ ಘಟಕಕ್ಕೆ ಸಹಾಯವನ್ನು ಪಡೆದು ಇಟ್ಟಿಗೆ ಭಟ್ಟಿಯ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ ವತಿಯಿಂದ ಬುಡಕಟ್ಟು ವರ್ಗದ ಕಾಲೋನಿಗಳಿಗೆ ವಿದ್ಯುತ್ ಒದಗಿಸಲು ಒಂದು ಕಾಲೋನಿಗೆ ೪೦ ಸಾವಿರ ರೂಪಾಯಿಗಳನ್ನು ವೆಚ್ಚ ಮಾಡುವ ಕಾರ್ಯಕ್ರಮವನ್ನು ಜಾರಿಗೆ ತರಲಾಗಿದೆ. ಬುಡಕಟ್ಟು ಸಮುದಾಯದವರ ಪಂಪ್‌ಸೆಟ್‌ಗಳಿಗೆ ಉಚಿತ ವಿದ್ಯುತ್ ಒದಗಿಸಲಾಗುತ್ತದೆ. ಭಾಗ್ಯಜ್ಯೋತಿ ಯೋಜನೆಯಡಿ ಪರಿಶಿಷ್ಟ ಪಂಗಡದವರ ಮನೆಗೆ ವಿದ್ಯುತ್ ಸೌಲಭ್ಯವನ್ನು ಒದಗಿಸಲಾಗುತ್ತದೆ. ಸಿದ್ದಿಯರ ಒಟ್ಟು ಕುಟುಂಬಗಳಿಂದ ೧೯೪೬ ಮನೆಗಳಲ್ಲಿ ವಿದ್ಯುತ್ ವ್ಯವಸ್ಥೆ ಇದೆ. ಇದರಲ್ಲಿ ೨೦೫ ಮನೆಯ ವಿದ್ಯುತ್ ವ್ಯವಸ್ಥೆ ಸಿದ್ದಿಯರು ಒದಗಿಸಿಕೊಂಡಿದ್ದರು. ಉಳಿದಂತೆ ೧೭೪೧ ಮನೆಗಳು ಸರ್ಕಾರದ ವಿದ್ಯುತ್ ಸೌಲಭ್ಯವನ್ನು ಹೊಂದಿರುವುದು ಕ್ಷೇತ್ರ ಕಾರ್ಯದ ಮುಖಾಂತರ ತಿಳಿದು ಬಂದಿದೆ.

ವಸತಿ ಇಲಾಖೆಯು ಶೇಕಡಾವಾರು ಗುರಿಯನ್ನು ನಿಗದಿಪಡಿಸಿಕೊಂಡು ನಗರ ಮತ್ತು ಗ್ರಾಮೀಣ ಪ್ರದೇಶದ ಬುಡಕಟ್ಟಿನವರಿಗೆ ಆಶ್ರಯ ನಿವೇಶನವನ್ನು ವಿತರಣೆ ಮಾಡುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಆಶ್ರಯ ವಸತಿ ನಿರ್ಮಾಣ ಯೋಜನೆಯಡಿ ನಿರ್ಮಾಣವಾಗುವ ಮನೆಗಳಿಗೆ ಸಹಾಯಧನ ನೀಡಲಾಗುತ್ತದೆ. ನೆರಳಿನ ಭಾಗ್ಯ ಯೋಜನೆಯಡಿ ೫೦೦೦ ರೂಪಾಯಿಗಳ ವೆಚ್ಚದಲ್ಲಿ ಹುಲ್ಲಿನ ಮೇಲ್ಚಾವಣಿಯನ್ನು ಬದಲಾಯಿಸಿ ಹೆಂಚಿನ ಚಾವಣಿಯನ್ನು ಒದಗಿಸಲಾಗುತ್ತಿದೆ.

ಸಿದ್ದಿಯರ ತಾಲೂಕುವಾರು ಗ್ರಾಮಗಳ ಒಟ್ಟಾರೆ ನಿವೇಶನ, ಮನೆ ಮತ್ತು ವಿದ್ಯುತ್‌ನ ವಿವರವನ್ನು ಅಂಕಿ ಅಂಶಗಳ ಪಟ್ಟಿ – ೬ ರಲ್ಲಿ ಗಮನಿಸಿ.

೧೯೯೭–೯೮ ರಿಂದ ಅಂಬೇಡ್ಕರ್ ವಸತಿ ಯೋಜನೆಯನ್ನು ಜಾರಿಗೆ ತರಲಾಗಿದೆ. ಗಿರಿಜನ ಕಲ್ಯಾಣ ಇಲಾಖೆ ಮತ್ತು ಗ್ರಾಮೀಣ ಅಭಿವೃದ್ಧಿ ಇಲಾಖೆಯ ಸಹಭಾಗಿತ್ವದಲ್ಲಿ ೨೦ ಸಾವಿರ ರೂಪಾಯಿಗಳ ಮನೆಯನ್ನು ಬುಡಕಟ್ಟಿನವರಿಗೆ ಒದಗಿಸಲಾಗುತ್ತದೆ. ಉತ್ತರಕನ್ನಡ ಜಿಲ್ಲೆಯ ಸಿದ್ದಿಯರ ೧೨೨೪ ಕುಟುಂಬಗಳಿಗೆ ಈ ಸೌಲಭ್ಯ ದೊರೆತಿದೆ.

ಕ್ರೀಡೆ ಮತ್ತು ಯುವಜನ ಸೇವಾ ಇಲಾಖೆಯಿಂದ ಬುಡಕಟ್ಟು ಯುವಕ–ಯುವತಿಯರಿಗೆ ಕ್ರೀಡಾಶಾಲೆಗಳು ಮತ್ತು ವಸತಿ ನಿಲಯಗಳ ನಿರ್ವಹಣೆ ಜೊತೆಗೆ ಕ್ರೀಡೆಗೆ ಪ್ರೋತ್ಸಾಹ ನೀಡಲಾಗುತ್ತದೆ. ನಮ್ಮ ಸರ್ಕಾರ ಈ ವಿಷಯದಲ್ಲಿ ಸ್ವಲ್ಪ ಮಟ್ಟಿನ ಸ್ವಾರ್ಥವನ್ನು ಹೊಂದಿರುವುದು ಕಂಡುಬರುತ್ತದೆ. ಸಿದ್ದಿಯರು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಯಾಗುವುದಕ್ಕಿಂತ ಮುಂಚೆಯೇ ಕ್ರೀಡೆಗೆ ಇವರನ್ನು ಆಯ್ಕೆ ಮಾಡಿಕೊಂಡಿತ್ತು. ಇವರ "ಬಲಿಷ್ಠ ದೇಹ ಮತ್ತು

ಶಕ್ತಿಯನ್ನು ನಾವು ದೇಶದ ಮರ್ಯಾದೆಗಾಗಿ ಬಳಸಲು ಯೋಜಿಸುತ್ತೇವೆ. ಸಾಮಾಜಿಕವಾಗಿ ನೀಗ್ರೋಗಳಿಗೆ ಎಷ್ಟು ತಾರತಮ್ಯ ಮಾಡಿದರೂ ಅಮೆರಿಕಾ ದೇಶ ತನ್ನ ದೇಶದ ಪ್ರತಿಷ್ಠೆಯನ್ನು ಎತ್ತಿ ಹಿಡಿಯಲು ಒಲಂಪಿಕ್ಸ್‌ಗೆ ಕರಿಯರನ್ನೇ ಹೆಚ್ಚು ಆಯ್ಕೆ ಮಾಡುತ್ತದಲ್ಲಾ ಹಾಗೆ ನಾವೂ ಸಿದ್ದಿ ಮಕ್ಕಳ ಬೆನ್ನು ಬಿದ್ದಿದ್ದೇವೆ. ಆದರೆ ಇದರಲ್ಲೂ ನಮ್ಮ ಸರ್ಕಾರ ಸೋತಿದೆ."[೧೦] ಇವರನ್ನು ಕ್ರೀಡೆಯಲ್ಲಿ ಸರಿಯಾಗಿ ಸದ್ಬಳಕೆ ಮಾಡಿಕೊಳ್ಳುವ ಕೊರತೆ ಎದ್ದು ಕಾಣುತ್ತಿದೆ. ಆದರೆ ಸಿದ್ದಿಯರ ಹಲವಾರು ಯುವಕ ಯುವತಿಯರನ್ನು ಕ್ರೀಡೆಗೆ ಆಯ್ಕೆ ಮಾಡಿಕೊಂಡು ತರಬೇತಿಯನ್ನು ನೀಡಲಾಗುತ್ತಿದೆ. ಕೆಲವು ಸಿದ್ದಿಯರು ರಾಷ್ಟ್ರೀಯ ಮಟ್ಟದ ಕ್ರೀಡಾಕೂಟಗಳಲ್ಲಿ ಭಾಗವಹಿಸಿ ಗಮನಾರ್ಹ ಸಾಧನೆ ಮಾಡಿರುವ ಉದಾಹರಣೆಗಳೂ ಸಹ ಸಿಗುತ್ತವೆ. "ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗದ ಹುಡುಗಿ ಸುಶೀಲಾ ಸಿದ್ದಿ, ಕಳೆದ ಏಳು ವರ್ಷಗಳಲ್ಲಿ ರಾಷ್ಟ್ರಮಟ್ಟದ ಅಥ್ಲೀಟ್ ಆಗಿ ಬೆಳೆದಿದ್ದಾಳೆ. ಹಳಿಯಾಳ ಸಮೀಪದ ದೊಡ್ಡಕೊಪ್ಪದ ನಿಕ್ಲಾ ಮತ್ತು ಥೆರೇಸಾ ಅವರ ಮಗಳಾಗಿರುವ ಇವಳು ೧೯೯೯ ರಲ್ಲಿ ಐದನೇ ತರಗತಿ ಓದುತ್ತಿದ್ದಾಗಲೇ ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ಸಾಧನೆ ತೋರುವ ಲಕ್ಷಣಗಳನ್ನು ಹೊರಗೆಡವಿದ್ದಳು........ ಈಗ ಜೆ.ಎಸ್.ಎಸ್. ಕಾಲೇಜಿನಲ್ಲಿ ಪಿ.ಯು.ಸಿ ದ್ವಿತೀಯ ವರ್ಷದಲ್ಲಿ ಓದುತ್ತಿರುವ ಸುಶೀಲ ೧೨.೧ ಸೆಕೆಂಡುಗಳಲ್ಲಿ ನೂರು ಮೀಟರ್ ಮತ್ತು ೨೫.೨ ಸೆಕೆಂಡುಗಳಲ್ಲಿ ಎರಡುನೂರು ಮೀಟರ್ ದೂರವನ್ನು ಕ್ರಮಿಸುವ ಸಾಮರ್ಥ್ಯಗಳಿಸಿದ್ದಾಳೆ. ೨೦೦೬ ರಲ್ಲಿ ನಡೆದ ರಾಷ್ಟ್ರೀಯ ಅಥ್ಲೆಟಿಕ್ ಚಾಂಪಿಯನ್‌ಷಿಪ್‌ನ ೧೦೦ ಮೀ. ಓಟದಲ್ಲಿ ಕಂಚು, ೨೦೦೫ ರಲ್ಲಿ ಕಂಚುಗೆದ್ದ ರಾಜ್ಯ ರಿಲೆ ತಂಡದಲ್ಲಿಯೂ ಇವಳು ಇದ್ದಳು."[೧೧] ಕ್ರೀಡೆಗೆ ಇನ್ನೂ ಹೆಚ್ಚಿನ ಪ್ರಮಾಣದ ಪ್ರೋತ್ಸಾಹ ದೊರೆಯುವ ಅಗತ್ಯವಿದೆ.

ಕನ್ನಡ ಸಂಸ್ಕೃತಿ ಇಲಾಖೆಯ ವತಿಯಿಂದ ಹೆಚ್ಚಿನ ಪ್ರೋತ್ಸಾಹ ದೊರಕಿಲ್ಲವಾದರೂ ಹಲವಾರು ರಂಗ ಕಲೆಗಳನ್ನು ಇಂದು ಪ್ರದರ್ಶಿಸುತ್ತಿದ್ದಾರೆ.

ಸಾರ್ವಜನಿಕ ಶಿಕ್ಷಣ ಇಲಾಖೆಯ ವತಿಯಿಂದ ಬುಡಕಟ್ಟು ಸಮುದಾಯದ ಒಂದರಿಂದ ಏಳನೇ ತರಗತಿಯವರೆಗಿನ ಮಕ್ಕಳಿಗೆ ಉಚಿತ ಸಮವಸ್ತ್ರಗಳನ್ನು ವಿತರಿಸಲಾಗುತ್ತದೆ. ಅಲ್ಲದೆ ಒಂದರಿಂದ ಏಳನೇ ತರಗತಿಯವರೆಗೆ ಬುಡಕಟ್ಟು ವಿದ್ಯಾರ್ಥಿನಿಯರಿಗೆ ಶಾಲಾ ಬ್ಯಾಗ್ (ಚೀಲ)ಗಳನ್ನು ವಿತರಿಸಲಾಗುತ್ತದೆ. ಸಿದ್ದಿಯರ ಹಲವಾರು ಮಕ್ಕಳಿಗೆ ಈ ಸೌಲಭ್ಯ ದೊರಕಿದೆ. ಸಿದ್ದಿಯರು ತಮ್ಮ ಮಕ್ಕಳ ಶಾಲೆಯನ್ನು ಅರ್ಧಕ್ಕೆ ಬಿಡಿಸುತ್ತಿರುವುದರಿಂದ ಸ್ಪಷ್ಟವಾದ ಅಂಕಿ ಸಂಖ್ಯೆಗಳು ಲಭಿಸಿಲ್ಲವಾದರೂ ಈ ಯೋಜನೆಯ ಸೌಲಭ್ಯ ದೊರೆಯುತ್ತಿದೆ.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ವತಿಯಿಂದ ಸಿದ್ದಿಯರಲ್ಲಿಯ ಕೆಲವರು ಇದರ ಯೋಜನೆಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಮೊದಲೇ ತಿಳಿಸಿದಂತೆ ಪಂಚಾಯತ್‌ರಾಜ್ ವ್ಯವಸ್ಥೆಗೆ ಹಲವಾರು ಜನ ಸಿದ್ದಿಯರು ಆಯ್ಕೆಯಾಗಿರುವುದರಿಂದ ಮೇಲಿನ ಇಲಾಖೆಯಿಂದ ಲಭ್ಯವಾಗುವ ಯೋಜನೆಗಳನ್ನು ಸಮುದಾಯಕ್ಕೆ ಸಮರ್ಪಕವಾಗಿ ಸಾಧ್ಯವಾದಷ್ಟು ಉಪಯೋಗಿಸಿಕೊಳ್ಳುತ್ತಿದ್ದಾರೆ. ಈ ರೀತಿಯಾದ ಅಭಿಪ್ರಾಯವನ್ನು ಗುಂಡೊಳ್ಳಿ ಗ್ರಾಮ ಪಂಚಾಯತಿಯ ಸದಸ್ಯೆಯಾದ ಮೇರಿ ಭಾವತೀಸ್ ಸಿದ್ದಿಯವರು ತಿಳಿಸುತ್ತಾರೆ.

ಸಹಕಾರ ಇಲಾಖೆಯ ವತಿಯಿಂದ ಬುಡಕಟ್ಟು ಸಮುದಾಯಗಳು ಕಾಡಿನಲ್ಲಿ ದೊರೆಯುವ ಕಿರು ಉತ್ಪನ್ನಗಳನ್ನು ಸಂಗ್ರಹಿಸಿ ಯೋಗ್ಯ ಬೆಲೆಗೆ ಮಾರಾಟ ಮಾಡಲು ಮತ್ತು ಜೀವನಕ್ಕೆ ಬೇಕಾಗುವ ಅವಶ್ಯಕ ಪದಾರ್ಥಗಳನ್ನು ಕಡಿಮೆ ದರದಲ್ಲಿ ಪಡೆಯಲು 'ದೊಡ್ಡ ಪ್ರಮಾಣದ ವಿವಿದೋದ್ಧೇಶ ಸಹಕಾರ ಸಂಘ' (LAMPS)ಗಳನ್ನು ಪ್ರಾರಂಭಿಸಲಾಗಿದೆ. ಹಳಿಯಾಳ ಮತ್ತು ಯಲ್ಲಾಪುರ ತಾಲೂಕುಗಳಲ್ಲಿ ಈ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಹಳಿಯಾಳದ ಡಿಯೋಗ್ ಬಿ. ಸಿದ್ದಿ ಮತ್ತು ಯಲ್ಲಾಪುರ (ಗುಳ್ಳಾಪುರ)ದ ಕೃಷ್ಣ ಟಿ.ಸಿದ್ದಿಯವರು ಇದರಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದಾರೆ.

ಸಮಾಜ ಕಲ್ಯಾಣ ಇಲಾಖೆಯು ಬುಡಕಟ್ಟು ಸಮುದಾಯದ ಅರ್ಹ ಫಲಾನುಭವಿಗಳಿಗೆ ಹೊಸ ವೃತ್ತಿ ಅಥವಾ ವ್ಯಾಪಾರವನ್ನು ನಡೆಸಲು ಸಾಲವನ್ನು ಒದಗಿಸುತ್ತದೆ. ಹಳಿಯಾಳ ತಾಲೂಕಿನ ಒಬ್ಬರು ಕಿರಾಣಿ ಅಂಗಡಿಯನ್ನು ಪ್ರಾರಂಭಿಸಲು ಈ ಇಲಾಖೆಯಿಂದ ಸಹಾಯವನ್ನು ಪಡೆದುಕೊಂಡಿದ್ದಾರೆ.

ಹೀಗೆ ಮೇಲೆ ತಿಳಿಸಲ್ಪಟ್ಟ ಈ ಅಭಿವೃದ್ಧಿ ಯೋಜನೆಗಳ ವಿವರಗಳನ್ನು ನನ್ನ ಅಧ್ಯಯನದ ಕ್ಷೇತ್ರ ಕಾರ್ಯ ಮಾಡಿದ ಸಂದರ್ಭದಲ್ಲಿ ಸಿದ್ದಿಯರ ವ್ಯಕ್ತಿಗಳು ಮತ್ತು ಕುಟುಂಬದಿಂದ ಮಾಹಿತಿಯನ್ನು ಪಡೆಯಲಾಗಿದೆ. ಅಲ್ಲದೆ ಸಂಬಂಧಪಟ್ಟ ಕೆಲವು ಸರ್ಕಾರಿ ಕಛೇರಿಗಳಿಗೆ ಭೇಟಿ ಕೊಟ್ಟು ಅಲ್ಲಿನ ಅಧಿಕಾರಿಗಳನ್ನು ಸಂಪರ್ಕಿಸಿ ಮತ್ತು ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳ ಜೊತೆಗೆ ಚರ್ಚಿಸಿ ಕೆಲವೊಂದು ಮಾಹಿತಿಯನ್ನು ಪಡೆಯಲಾಗಿದೆ.

**೭.೭ ಆಧುನಿಕತೆಯ ಪ್ರಭಾವ**

ಇಂದು ಸಮಾಜವು ತೀವ್ರ ಗತಿಯಲ್ಲಿ ಬದಲಾವಣೆಯನ್ನು ಹೊಂದುತ್ತಿದೆ. ಹಳೆಯ ವಿಧಾನ ಅಥವಾ ವ್ಯವಸ್ಥೆಯನ್ನು ಕಳಚಿಕೊಂಡು ದಿನದಿಂದ ದಿನಕ್ಕೆ ಆಧುನಿಕತೆಯನ್ನು ಮೈಗೂಡಿಸಿಕೊಳ್ಳುತ್ತಿದೆ. ಸ್ಪರ್ಧೆ ಎನ್ನುವುದು ಇತ್ತೀಚೆಗೆ ಪ್ರಮುಖವಾಗಿ ಕಂಡುಬರುತ್ತಿದೆ. ವ್ಯಾಪಾರ ವ್ಯವಹಾರಗಳು ದೇಶದ ಆರ್ಥಿಕತೆಯನ್ನು ನಿರ್ಧರಿಸುತ್ತವೆ. ಎಲ್ಲದಕ್ಕೂ ಮುಖ್ಯವಾಗಿ

ವಿಜ್ಞಾನ ಮತ್ತು ತಂತ್ರಜ್ಞಾನಗಳು ಶರವೇಗದಲ್ಲಿ ಅಭಿವೃದ್ಧಿಯನ್ನು ಹೊಂದುತ್ತಿವೆ. ಭೂಮಿಯ ಮೇಲೆ ಕುಳಿತು ಅನ್ಯ ಗ್ರಹಗಳಿಗೆ ಸಂಪರ್ಕವನ್ನು ಸಾಧಿಸುತ್ತಿದ್ದಾನೆ. ಪ್ರಕೃತಿಯ ವಿಸ್ಮಯಗಳನ್ನು ಭೇದಿಸುವತ್ತ ಮಾನವನು ಪ್ರಮುಖ ಹೆಜ್ಜೆ ಇರಿಸಿದ್ದಾನೆ. ಇಷ್ಟೂ ಸಾಲದೆಂಬಂತೆ ಯಂತ್ರಮಾನವನನ್ನು ಸೃಷ್ಟಿಸಿದ್ದಾನೆ. ತನ್ನ ಸಾಮಾನ್ಯ ಕಾರ್ಯವನ್ನು ಸಹ ಯಂತ್ರಮಾನವನೇ ನಿರ್ವಹಿಸುವ ಮೂಲಕ ಸಮಾಜ ಸಂಪೂರ್ಣವಾಗಿ ಯಾಂತ್ರೀಕೃತಗೊಳ್ಳುತ್ತಿದೆ. ಈ ರೀತಿಯ ವ್ಯವಸ್ಥೆಯಲ್ಲಿ ಮತ್ತೊಂದೆಡೆ ವಿಶ್ವದ ಎರಡು ನೂರು ದಶಲಕ್ಷಕ್ಕೂ ಹೆಚ್ಚಿನ ಜನರು ಇದಕ್ಕೆ ಭಿನ್ನವಾದ ಜೀವನ ನಿರ್ವಹಿಸುತ್ತಿದ್ದಾರೆ. ಕಾಡಿನ ಮರೆಯಲ್ಲಿ, ಬೆಟ್ಟ-ಗುಡ್ಡಗಳಲ್ಲಿ, ಗಿರಿ-ಕಂದರಗಳಲ್ಲಿ, ಕಾಡುಜನರು, ಗಿರಿಜನರು, ಆದಿವಾಸಿಗಳು, ಹಿಂದುಳಿದವರು ಎನ್ನುವ ಹಣೆಪಟ್ಟಿ ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ನಾಗರಿಕ ಸಮಾಜದಿಂದ ದೂರ ಉಳಿದು ಜೀವನ ನಿರ್ವಹಿಸುತ್ತಿದ್ದಾರೆ. ಇವುಗಳ ಸಂಸ್ಕೃತಿ, ಜೀವನ ವಿಧಾನ, ಆಚರಣೆಗಳು, ಅಂತರ್‌ಕ್ರಿಯೆಯ ವ್ಯವಸ್ಥೆಗಳು ನಮ್ಮ ಆಧುನಿಕ ಸಮಾಜಕ್ಕಿಂತ ಭಿನ್ನವಾಗಿ ಬದುಕುತ್ತಿವೆ. ಇಂತಹ ಸಮುದಾಯಗಳನ್ನು ಇಂದು ಸರ್ಕಾರ ಮತ್ತು ಸ್ವಯಂಸೇವಾ ಸಂಸ್ಥೆಗಳು ಅಭಿವೃದ್ಧಿ ಮಾಡುವ ಪ್ರಯತ್ನ ಮಾಡುತ್ತಿವೆ. ಅಭಿವೃದ್ಧಿಯ ನೆಪದಲ್ಲಿ ಒಂದು ಸಮುದಾಯದ ಮೂಲ ಸಂಸ್ಕೃತಿಯನ್ನು ಸಂಪೂರ್ಣವಾಗಿ ತಿರುಚುವ ಪ್ರಯತ್ನ ನಡೆಯುತ್ತಿದೆ. ಆದಿವಾಸಿಗಳ ಅಭಿವೃದ್ಧಿ ಎಂದ ಕೂಡಲೇ ಅವರನ್ನು ನಗರಕ್ಕೆ ತಂದು ಬಿಡುವುದಲ್ಲ. ಬದಲಾಗಿ ಅವುಗಳು ನೆಲೆಸಿರುವ ಪ್ರದೇಶದಲ್ಲಿ ಅವರ ಸಂಸ್ಕೃತಿಗೆ ದಕ್ಕೆಯಾಗದ ರೀತಿಯಲ್ಲಿ ಪ್ರಯತ್ನ ಮಾಡಬೇಕಾಗಿದೆ. ಇವು ಸೂಕ್ಷ್ಮ ಸಮುದಾಯಗಳಾಗಿವೆ. ಆದಿವಾಸಿಗಳ ಅಭಿವೃದ್ಧಿಯಲ್ಲಿ ಮುಖ್ಯವಾಗಿ ಜಾಣ್ಮೆಯ ಜೊತೆಗೆ ತಾಳ್ಮೆಯೂ ಅವಶ್ಯವಾದುದು. ಕಾರಣ ಯಾವುದೇ ಸಮುದಾಯವಾಗಲಿ ತನ್ನಲ್ಲಿ ದಿಢೀರ್ ಬದಲಾವಣೆಯನ್ನು ಬಯಸುವುದಿಲ್ಲ. ಆದಿವಾಸಿಗಳ ಅನ್ಯೋನ್ಯತೆಯ ಸಂಬಂಧಕ್ಕೆ ಧಕ್ಕೆ ಬಾರದ ರೀತಿಯಲ್ಲಿ ಅಭಿವೃದ್ಧಿಪಡಿಸಬೇಕಾಗಿದೆ. ನಿಜವಾಗಿಯೂ ಆದಿವಾಸಿಗಳು ಕನಿಷ್ಠ ಪ್ರಮಾಣದ ಜೀವನ ನಿರ್ವಹಿಸುತ್ತಿದ್ದಾರೆ. ಇವರ ಈ ತೆರನಾದ ಬದುಕು ಇಂದು ನಿನ್ನೆಯದಲ್ಲ. ಬದಲಾಗಿ ಶತ-ಶತಮಾನಗಳಿಂದಲೂ ಈ ರೀತಿಯಾದ ಕೂಪದಲ್ಲಿ ಜೀವಿಸುತ್ತಿದ್ದಾರೆ. ಅರಣ್ಯ ಕಾಯ್ದೆಯಿಂದಾಗಿ ಸ್ವತಂತ್ರ ಜೀವನ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಜೊತೆಗೆ ನಾಗರಿಕ ಸಮಾಜದಲ್ಲಿ ಬಂದು ಬದುಕು ಸಾಗಿಸೋಣವೆಂದರೆ ಅದೂ ಕೂಡ ಸಾಧ್ಯವಾಗುತ್ತಿಲ್ಲ. ಕಾರಣ ಮೇಲುಜಾತಿಯವರು ಇವರನ್ನು ಕೀಳಾಗಿ ಕಾಣುತ್ತಾರೆ. ಇಂತಹ ಅತಂತ್ರ ಪರಿಸ್ಥಿತಿಯಲ್ಲಿ ಒಂದು ಹೊತ್ತು ಊಟಕ್ಕೂ ಗತಿಯಿಲ್ಲದ ಜೀವನ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಇಂದಿನ ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳು ಇವರನ್ನು ಮತ್ತಷ್ಟು ಪ್ರಪಾತಕ್ಕೆ ತಳ್ಳುತ್ತಿವೆ

ಎಂದು ಹೇಳಬೇಕಾಗುತ್ತದೆ. ಆಯಾ ಧರ್ಮದವರೇ ಅವರನ್ನು ಕೀಳಾಗಿ ಕಾಣುತ್ತಿರುವುದು ದುರಂತವೇ ಸರಿ.

ಸಿದ್ದಿಯರು ಮುಖ್ಯವಾಗಿ ಕೂಲಿ ಮತ್ತು ಚಿಕ್ಕ ಹಿಡುವಳಿಯ ಕೃಷಿಯನ್ನು ನಂಬಿಕೊಂಡು ಜೀವನವನ್ನು ನಿರ್ವಹಿಸುತ್ತಿದ್ದಾರೆ. ಇಂದಿಗೂ ಸಿದ್ದಿಯರಲ್ಲಿ ಬಹುತೇಕರು ಕೂಲಿಯನ್ನು ನಂಬಿಕೊಂಡು ಜೀವನ ನಿರ್ವಹಿಸುತ್ತಿದ್ದಾರೆ. ಇಂದು ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಸರಿಯಾದ ಕೃಷಿ ಕೂಲಿ ಕಾರ್ಯಗಳೂ ಸಹ ದೊರಕುತ್ತಿಲ್ಲ. ಇದರಲ್ಲಿಯೂ ಸಹ ಯಾಂತ್ರೀಕರಣಗೊಂಡಿದೆ. ಈಗ ಸರಿಯಾದ ಕೂಲಿ ಕೆಲಸಗಳೂ ಸಹ ಲಭ್ಯವಾಗುತ್ತಿಲ್ಲ. ಆಧುನಿಕತೆಯ ವಿವಿಧ ಸಲಕರಣೆಗಳು, ಮಾಧ್ಯಮಗಳು, ಸರ್ಕಾರದ ಅಭಿವೃದ್ಧಿ ಕ್ರಮಗಳು, ಅರಣ್ಯ ಕಾಯ್ದೆಗಳು ಇವರನ್ನು ಮತ್ತಷ್ಟು ಅತಂತ್ರಗೊಳಿಸುತ್ತಿವೆ. ಆ ಕಡೆ ಅರಣ್ಯದಲ್ಲಿ ಸ್ವತಂತ್ರ ಜೀವನ ನಿರ್ವಹಿಸುವುದಕ್ಕೆ ಆಗುತ್ತಿಲ್ಲ. ಈ ಕಡೆ ಆಧುನಿಕ ಸಮಾಜದೊಂದಿಗೆ ಬೆರೆಯಲು ಸಾಧ್ಯವಾಗುತ್ತಿಲ್ಲ. ನಾಗರಿಕ ಸಮಾಜದಲ್ಲಿ ಆಧುನಿಕತೆಯು ವೇಗವಾಗಿ ಮುನ್ನುಗ್ಗುತ್ತಿದೆ. ಸಿದ್ದಿಯರು ಅನಕ್ಷರಸ್ಥರು ಮತ್ತು ಅರಣ್ಯವಾಸಿಗಳಾಗಿರುವುದರಿಂದ ಆಧುನಿಕತೆಯ ಗಂಧವೇ ಇಲ್ಲವೆನ್ನಬಹುದು.

ಆದಿವಾಸಿಗಳ ಅಭಿವೃದ್ಧಿಗಾಗಿ ಸರ್ಕಾರ ತನ್ನ ಕಡತದಲ್ಲಿ ಮಾತ್ರ ದೊಡ್ಡ ದೊಡ್ಡ ಪ್ರಮಾಣದ ಲೆಕ್ಕಗಳನ್ನು ತೋರಿಸುತ್ತಿದೆ. ಅರ್ಥಶಾಸ್ತ್ರಜ್ಞರೂ ಸಹ ಆದಿವಾಸಿಗಳ ಅಭಿವೃದ್ಧಿಯನ್ನು ಈಗಿರುವ ಯೋಜನೆಗಳಲ್ಲಿಯೇ ಸೇರಿಸುವ ಪ್ರಯತ್ನ ಮಾಡುತ್ತಿದ್ದಾರೆ. ಈ ರೀತಿಯಾದ ವ್ಯವಸ್ಥೆ ಇರುವಾಗ ಆದಿವಾಸಿಗಳ ಅಭಿವೃದ್ಧಿ ಕಷ್ಟಸಾಧ್ಯ. "ಈ ದೇಶದಲ್ಲಿ ಆದಿವಾಸಿಗಳನ್ನು ಸಬಲೀಕರಿಸಲು ಒಂದು ಪ್ರತ್ಯೇಕ ಅಭಿವೃದ್ಧಿ ನೀತಿ ಇಲ್ಲ. ಆದಿವಾಸಿಗಳ ಅಭಿವೃದ್ಧಿಯ ಕುರಿತು ಸ್ಪಷ್ಟವಾದ ಮತ್ತು ಉಪಯುಕ್ತ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಸಮಗ್ರ ಭಾರತದ ಬುಡಕಟ್ಟು ನೀತಿ ಎಂಬುದಿಲ್ಲ. ಅನೇಕ ಅರ್ಥಶಾಸ್ತ್ರಜ್ಞರು 'ಈಗಿರುವ ಅಭಿವೃದ್ಧಿ ನೀತಿಯಲ್ಲಿಯೇ ಆದಿವಾಸಿಗಳಿಗೆ ಅನೇಕ ಕಾರ್ಯಕ್ರಮಗಳಿರುವುದರಿಂದ ಆದಿವಾಸಿಗಳು ಸಮಗ್ರ ಭಾರತದ ಅಭಿವೃದ್ಧಿಯ ಮುಖ್ಯ ವಾಹಿನಿಗೆ ಸೇರಿಕೊಂಡು ಬಿಡಬೇಕು' ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಈ ಬಗೆಯ ನಿಲುವುಗಳು ನಿರಂತರವಾಗಿ ವಿಫಲವಾಗಿರುವುದನ್ನು ನಾವು ಕಾಣುತ್ತೇವೆ. ಇದಕ್ಕೆ ಬಹಳ ದೊಡ್ಡ ಉದಾಹರಣೆಯೆಂದರೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಸರಿಸುಮಾರು ೫೭ ವರ್ಷಗಳಾಗಿದ್ದರೂ ಆದಿವಾಸಿಗಳು ಅಭಿವೃದ್ಧಿಯಾಗದೇ ಇರುವುದು. ಆದಿವಾಸಿಗಳು ಅಭಿವೃದ್ಧಿಯಾಗಿಲ್ಲ ಎಂದು ಹೇಳುವುದಕ್ಕೆ ಯಾವ ಕಸರತ್ತನ್ನೂ ಮಾಡಬೇಕಾಗಿಲ್ಲ. ಇದಕ್ಕಾಗಿ ಯಾವ ಅಳತೆಗೋಲಿನ ಅವಶ್ಯಕತೆಯೂ ಇಲ್ಲ. ಅರ್ಥಶಾಸ್ತ್ರಜ್ಞರು ಏನೇ ಹೇಳಿದರೂ ಸಹ, ಆದಿವಾಸಿಗಳಿಗೆ ವಿಶೇಷವಾದ ಅಭಿವೃದ್ಧಿ

ನೀತಿಯೊಂದರ ಅವಶ್ಯಕತೆ ಇದೆ. ಜನತಂತ್ರ ವ್ಯವಸ್ಥೆಯಲ್ಲಿ, ಜಾತ್ಯಾತೀತ ಸಿದ್ಧಾಂತದಲ್ಲಿ ಎಲ್ಲಕ್ಕಿಂತ ಹೆಚ್ಚಿನದಾಗಿ ಮನುಷ್ಯತ್ವದಲ್ಲಿ ನಂಬಿಕೆ ಇರುವ ತಜ್ಞರು ಈ ನಿಟ್ಟಿನಲ್ಲಿ ಗಂಭೀರವಾಗಿ ಯೋಚಿಸಬೇಕಿದೆ ಮತ್ತು ಪ್ರದೇಶವಾರು ಚದುರಿ ಹೋಗಿರುವ ಮತ್ತು ಸಂಕೀರ್ಣ ಸಮಸ್ಯೆಗಳಿಂದ ಸುತ್ತುವರೆಯಲ್ಪಟ್ಟ ಆದಿವಾಸಿಗಳ ಸಬಲೀಕರಣಕ್ಕೆ ಸಮಗ್ರ ರಾಷ್ಟ್ರೀಯ ನೀತಿಯೊಂದು ರೂಪುಗೊಳ್ಳುವುದರ ಅವಶ್ಯಕತೆ ಇದೆ."[೧೨] ಅಂದಾಗ ಮಾತ್ರ ಆದಿವಾಸಿಗಳು ಮುಂದುವರೆಯುವುದಕ್ಕೆ ಸಾಧ್ಯವಾಗುತ್ತದೆ. ಇಂದಿನ ಆಧುನಿಕ ಯುಗದಲ್ಲಿ ಆದಿವಾಸಿಗಳಿಗಾಗಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದ್ದರೂ ಸಮರ್ಪಕವಾದ ನೀತಿಯ ಕೊರತೆಯಿಂದಾಗಿ ಆದಿವಾಸಿಗಳನ್ನು ಮುಖ್ಯ ವಾಹಿನಿಗೆ ತರುವಲ್ಲಿ ತೊಡಕುಂಟಾಗುತ್ತಿದೆ.

ಸಿದ್ದಿಯರು ಇಂದು ಆಧುನಿಕತೆಯ ಕಡೆ ಮುಖ ಮಾಡುತ್ತಿದ್ದಾರೆ. ವಿಜ್ಞಾನ ಮತ್ತು ತಂತ್ರಜ್ಞಾನದ ಫಲವಾಗಿ ಇವರಲ್ಲಿ ಕೆಲವು ಮಟ್ಟಿಗೆ ಬದಲಾವಣೆಗಳು ಗೋಚರಿಸುತ್ತಿವೆ. ಸಿದ್ದಿಯರು ಇನ್ನೂ ಪ್ರಗತಿ ಪಥದಲ್ಲಿ ಸಾಗುವಂತೆ ಮಾಡಬೇಕಾದರೆ ಇವರಿಗೆ ಮುಖ್ಯವಾಗಿ ಶಿಕ್ಷಣವನ್ನು ನೀಡಬೇಕಾಗಿದೆ. ಸ್ವಯಂಸೇವಾ ಸಂಸ್ಥೆಗಳು ನಿಸ್ವಾರ್ಥ ಮನೋಭಾವನೆಯಿಂದ ದುಡಿಯುವ ಅನಿವಾರ್ಯತೆ ಇದೆ. ಗುಲಾಮಗಿರಿಯ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ಬಂದು ಇಂದು ಸ್ವತಂತ್ರವಾಗಿ ಬೆಳೆಯಲು ಪ್ರಯತ್ನಿಸುತ್ತಿರುವ ಇವರಿಗೆ ಸರ್ಕಾರ ಊರುಗೋಲಾಗಬೇಕಿದೆ.

### ೭.೭.೧ ಆಧುನಿಕ ಸ್ಪಂದನೆಯಲ್ಲಿ ಸಿದ್ದಿಯರು

ಸಿದ್ದಿಯರು ಇಂದು ಸ್ವತಂತ್ರವಾಗಿ ಬದುಕುತ್ತಿದ್ದಾರೆ. ಗುಲಾಮಗಿರಿಯ ಪದ್ಧತಿಯಿಂದಾಗಿ ತಮ್ಮ ಮೂಲ ಸಂಸ್ಕೃತಿಯನ್ನೇ ಕಳೆದುಕೊಂಡಿದ್ದರು. ಆದರೆ ಇಂದು ತಮ್ಮದೇ ಆದ ಸಂಸ್ಕೃತಿಯನ್ನು ಸೃಷ್ಟಿಸಿಕೊಳ್ಳುವುದರ ಮುಖಾಂತರ ಸಮಾಜಕ್ಕೆ ಮಾದರಿಯಾಗಿದ್ದಾರೆ. ಕಾಲ ಗತಿಸಿದಂತೆಲ್ಲಾ ಒಂದೆಡೆ ಸ್ಥಿರವಾಗಿ ಸಿದ್ದಿಯರು ನೆಲ ಕಂಡುಕೊಂಡಿದ್ದಾರೆ. ಬದಲಾಗುತ್ತಿರುವ ಸಮಾಜದಲ್ಲಿ ಸಿದ್ದಿಯರು ಆಧುನಿಕತೆಯನ್ನು ಮೈಗೂಡಿಸಿಕೊಳ್ಳುತ್ತಿದ್ದಾರೆ. ಸಂಸ್ಕೃತಾನುಕರಣ ಪ್ರಕ್ರಿಯೆಯಿಂದಾಗಿ ಮುಂದುವರೆದ . ಸಮುದಾಯದವರ ಸಂಸ್ಕೃತಿಯನ್ನು ಹೆಚ್ಚಾಗಿ ಅಳವಡಿಸಿಕೊಂಡಿರುವುದರಿಂದ ಕ್ರೂರವಾದ ಆಚರಣೆಗಳೇನೂ ಕಂಡುಬರುವುದಿಲ್ಲ. ಇಂದಿನ ಯುವ ಪೀಳಿಗೆ ಶಿಕ್ಷಣವನ್ನು ಪಡೆಯುತ್ತಿದೆ. ಆಧುನಿಕ ಸಮಾಜದೊಂದಿಗೆ ಸಂಪರ್ಕ ಬೆಸೆಯುವುದರ ಮುಖಾಂತರ ಆಲೋಚನೆ ಮಾಡುವ ಮತ್ತು ಸರಿ–ತಪ್ಪುಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ. ಕೆಲವು ವರ್ಷಗಳ ಹಿಂದಿನ ಸ್ಥಿತಿಗತಿಗೆ ಹೋಲಿಕೆ ಮಾಡುವುದಾದರೆ ಇಂದು ಮುಂದುವರೆಯುವ ಪ್ರಯತ್ನ ಸಮುದಾಯದಲ್ಲಿ ಎದ್ದು ಕಾಣುತ್ತಿದೆ.

ಸಾರಿಗೆ ಮತ್ತು ಸಮೂಹ ಮಾಧ್ಯಮಗಳ ಪ್ರಭಾವದಿಂದಾಗಿ ಆಧುನಿಕತೆಯ ಗಾಳಿ ಎಲ್ಲಡೆಯೂ ಬೀಸುತ್ತಿದೆ. ಫಲವಾಗಿ ಸಿದ್ದಿಯರು ಆಧುನಿಕತೆಯ ಸಮಾಜದ ಕಡೆ ಪರಿವರ್ತನೆಗೊಳ್ಳುತ್ತಿದ್ದಾರೆ. ಪ್ರಸ್ತುತ ಆಧುನಿಕ ಸಮಾಜದ ಆಚಾರ ವಿಚಾರಗಳು ಸಿದ್ದಿಯರಲ್ಲಿ ಸುಳಿದಾಡುತ್ತಿವೆ. ಅದರಲ್ಲಿಯೂ ಮುಖ್ಯವಾಗಿ ಯುವ ಪೀಳಿಗೆಯ ಮೇಲೆ ಆಧುನಿಕತೆಯು ಪ್ರಮುಖ ಪ್ರಭಾವ ಬೀರುತ್ತಿದೆ. ಬಹುತೇಕ ಸಿದ್ದಿ ಹಿರಿಯರು ತಾವು ಅನುಭವಿಸಿದ ಕಷ್ಟಗಳು ತಮ್ಮ ಕಾಲಕ್ಕೇ ಸಾಕು. ಮುಂದಿನ ಪೀಳಿಗೆಯವರಾದರೂ ಸ್ವತಂತ್ರವಾಗಿ ಬದುಕಲಿ ಎನ್ನುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಸಿದ್ದಿಯರು ತಾವು ಅನುಭವಿಸಿದ ಗುಲಾಮಗಿರಿ ಬೇರೆ ಯಾವ ಸಮುದಾಯಕ್ಕೂ ಬೇಡವೆಂದು, ಇದು ಇಲ್ಲಿಗೆ ಮುಗಿಯಲಿ ಎನ್ನುತ್ತಿದ್ದಾರೆ. ಯುವ ಪೀಳಿಗೆಯವರು ಇಂದು ದಾಸ್ಯದ ಜೀವನಕ್ಕೆ ಜೋತುಬೀಳದೆ ಸ್ವತಂತ್ರವಾಗಿ ಜೀವನ ನಡೆಸುವುದರ ಕಡೆ ಮನಸ್ಸು ಹರಿಸುತ್ತಿದ್ದಾರೆ. ಸ್ವಾಭಿಮಾನದಿಂದ ಬದುಕುವ ಛಲ ಹೊಂದಿದ್ದಾರೆ. ಸಮುದಾಯದ ಪ್ರಗತಿಗಾಗಿ ಸಿದ್ದಿಯರು ಆಧುನಿಕತೆಯನ್ನು ಹೊಂದುವ ಕಡೆ ಗಮನ ಹರಿಸುತ್ತಿದ್ದಾರೆ.

ಆಧುನಿಕ ಜೀವನ ಆದಿವಾಸಿಗಳಿಗೆ ಸಂಕೀರ್ಣವಾದುದು. ಕಾರಣ ಪ್ರಸ್ತುತದ ಆಧುನಿಕತೆಯನ್ನು ಅಳವಡಿಸಿಕೊಳ್ಳುವುದರ ಕಡೆ ಗಮನಹರಿಸುತ್ತಿದ್ದಾರೆ. ಈ ಆಧುನಿಕತೆಯನ್ನು ಅಳವಡಿಸಿಕೊಳ್ಳುವ ವೇಳೆಗೆ ನಾಗರೀಕ ಸಮಾಜ ದಿನದಿಂದ ದಿನಕ್ಕೆ ಮತ್ತಷ್ಟು ಆಧುನಿಕತೆಯನ್ನು ಹೊಂದಿರುತ್ತದೆ. ಆಗ ಆದಿವಾಸಿಗಳು ಮತ್ತೆ ಬಹುದೂರದಲ್ಲಿ ಹಿಂದುಳಿದಿರುತ್ತದೆ. ಆಧುನಿಕ ಜೀವನಕ್ಕೆ ಅವಶ್ಯವಿರುವ ಮಾರ್ಗಗಳನ್ನು ಸರ್ಕಾರ ಮತ್ತು ಸ್ವಯಂಸೇವಾ ಸಂಸ್ಥೆಗಳು ಶೀಘ್ರವಾಗಿ ಒದಗಿಸಿಕೊಡಬೇಕಾಗಿದೆ. ಹಾಗಾದರೆ ಮಾತ್ರ ಆಧಿವಾಸಿಗಳ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಸಾರಿಗೆ ಸಂಪರ್ಕಗಳ ಪ್ರಭಾವ, ಮಾಧ್ಯಮದ ಪ್ರಭಾವ, ಜೀವನ ಶೈಲಿ, ಆಚಾರ-ವಿಚಾರ, ನಿತ್ಯೋಪಯೋಗಿ ವಸ್ತುಗಳ ಬದಲಾವಣೆ, ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆ, ಯಾಂತ್ರಿಕಮಯವಾದ ಜೀವನ, ಐತಿಹಾಸಿಕ ಚರಿತ್ರೆ ಇತರೆ ಅಂಶಗಳು ಸಿದ್ದಿಯರ ಸಂಸ್ಕೃತಿಯ ಮೇಲೆ ಗಣನೀಯ ಪ್ರಭಾವ ಬೀರಿವೆ. ಅದರಲ್ಲಿಯೂ ಮುಖ್ಯವಾಗಿ 'ಕರಣ'ಗಳು ಸಮುದಾಯದ ಮೇಲೆ ಪ್ರಮುಖ ಪ್ರಭಾವ ಬೀರುತ್ತಿವೆ. ಅಂದರೆ ನಗರೀಕರಣ, ಕೈಗಾರೀಕರಣ, ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಮುಂತಾದವು. ಕೇವಲ ಕೂಲಿ ಮತ್ತು ಅತಿಕ್ರಮಣದ ಚಿಕ್ಕ ಭೂ ಹಿಡುವಳಿಯನ್ನು ಅನುಸರಿಸುತ್ತಿದ್ದ ಇವರು ಇಂದು ನಿಧಾನವಾಗಿ ವಿವಿಧ ವೃತ್ತಿಗಳಲ್ಲಿ ತೊಡಗುವಂತಾಗಿದೆ. ತಮ್ಮ ಸಂಸ್ಕೃತಿಯಲ್ಲಿ ಮತ್ತಷ್ಟು ಪ್ರಭಾವಿಯಾದ ಅಂಶಗಳನ್ನು ಅಳವಡಿಸಿಕೊಳ್ಳುವುದಕ್ಕೆ ಸಹಕಾರಿಯಾಗುತ್ತಿದೆ. ಇತರೆ ಸಮುದಾಯಗಳಿಂದ ಎರವಲು ಪಡೆದ

ಸಂಸ್ಕೃತಿಗೆ ಮತ್ತಷ್ಟು ಮೆರಗು ದೊರೆಯುವಂತಾಗಿದೆ. ಆಧುನಿಕತೆಯು ಇವರ ಮೂಲ ಸಂಸ್ಕೃತಿಯನ್ನು ಅಳಿಸಿ ಹಾಕುತ್ತಿದೆ ಎನ್ನುವುದಕ್ಕಿಂತ ಹೊಸ ಜೀವನಕ್ಕೆ ಚೈತನ್ಯವನ್ನು ನೀಡುತ್ತಿದೆ ಎನ್ನುವುದು ನನ್ನ ಅನಿಸಿಕೆಯಾಗಿದೆ. ಗುಲಾಮಗಿರಿಯ ಚಿತ್ರಹಿಂಸೆಗೆ ನಲುಗಿಹೋದ ಸಮುದಾಯ ಇಂದು ಆಧುನಿಕ ಜೀವನದ ಕಡೆ ಒತ್ತು ನೀಡುತ್ತಿದೆ ಎಂದರೆ, ಇತರೆ ಹಿಂದುಳಿದ ಸಮುದಾಯಗಳಿಗೆ ಮಾದರಿಯಾಗುತ್ತಿದೆ ಎನ್ನಬಹುದು. ನಮ್ಮ ಕಾಯ್ದೆಗಳು ಆದಿವಾಸಿಗಳನ್ನು ಸ್ವತಂತ್ರವಾಗಿ ಬದುಕಲು ಬಿಡುತ್ತಿಲ್ಲವೆಂದಾಗ ಅವರ ಮೂಲ ಸಂಸ್ಕೃತಿ ಉಳಿಯಲು ಹೇಗೆ ಸಾಧ್ಯವಾಗುತ್ತದೆ? ಆದಿವಾಸಿಗಳು ಆಧುನಿಕತೆಯನ್ನು ಅಳವಡಿಸಿಕೊಳ್ಳಲು ಅನುವು ಮಾಡಿಕೊಡಬೇಕು. ಆದಿವಾಸಿಗಳ ಅಭಿವೃದ್ಧಿಯನ್ನು ಮಾಡುವ ಸಂದರ್ಭದಲ್ಲಿ ಮೂಲ ಸಂಸ್ಕೃತಿಯ ಸ್ವರೂಪವನ್ನು ಉಳಿಸಿಕೊಳ್ಳುವಂತೆ ಮಾಡುವುದು ಪ್ರತಿಯೊಬ್ಬ ಪ್ರಜ್ಞಾವಂತ ಪ್ರಜೆಯ ಆಧ್ಯ ಕರ್ತವ್ಯವಾಗಿದೆ.

ಸಿದ್ದಿಯರು ಇಂದು ಆಧುನಿಕತೆಯ ಹಲವಾರು ಸಲಕರಣೆಗಳನ್ನು ಬಳಸುತ್ತಿದ್ದಾರೆ. ಗೃಹೋಪಯೋಗಿ ವಸ್ತುಗಳು, ವಾಹನಗಳು, ಸಂಪರ್ಕ ಮಾಧ್ಯಮಗಳು, ಮನೋರಂಜನೆ ಮತ್ತಿತರ ಸಾಧನಗಳನ್ನು ಉಪಯೋಗಿಸುತ್ತಿದ್ದಾರೆ. ಅಲ್ಲದೆ ಇವರಿಗೆ ಸರ್ಕಾರದ ಪಡಿತರ ಚೀಟಿಯೂ ಸಹ ದೊರೆತಿವೆ. ಒಟ್ಟು ೨೧೨೦ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿವೆ. ಇನ್ನುಳಿದಂತೆ ಸಿದ್ದಿಯರು ಬಳಸುವ ಆಧುನಿಕ ವಸ್ತುಗಳನ್ನು ಅಥವಾ ಆಧುನಿಕ ಜೀವನದ ವಿಧಾನಕ್ಕೆ ಬೇಕಾದ ಕೆಲವು ಸಲಕರಣೆಗಳನ್ನು ಬಳಸುತ್ತಿದ್ದಾರೆ. ಅವುಗಳನ್ನು ಈ ಮುಂದಿನಂತೆ ನೋಡಬಹುದು.

| ಕ್ರ. ಸಂ. | ಆಧುನಿಕ ಬಳಕೆಯ ಸಾಧನಗಳು/ಸಲಕರಣೆಗಳು | ಸಂಖ್ಯೆಗಳಲ್ಲಿ |
|---|---|---|
| ೧ | ಸ್ನಾನಗೃಹ | ೯೯೬ |
| ೨ | ಶೌಚಾಲಯ | ೯೪೮ |
| ೩ | ಸೈಕಲ್ | ೫೬೫ |
| ೪ | ನಲ್ಲಿ | ೬೦ |
| ೫ | ಗ್ಯಾಸ್ | ೮ |
| ೬ | ರೇಡಿಯೋ | ೬೨೩ |
| ೭ | ಟಿ.ವಿ. | ೫೭೧ |
| ೮ | ಟೇಪ್ ರೆಕಾರ್ಡರ್ | ೨೯ |
| ೯ | ಸ್ಥಿರ ದೂರವಾಣಿ | ೪೬ |
| ೧೦ | ಮೊಬೈಲ್ | ೨೦ |

ಆಧುನಿಕತೆಯ ಬಳಕೆಯ ಸಾಧನಗಳು ದಿನದಿಂದ ದಿನಕ್ಕೆ ಹೆಚ್ಚು ಆಕರ್ಷಿತವಾಗುತ್ತಾ ಸಮುದಾಯದವರಲ್ಲಿ ಹೆಚ್ಚು ಹೆಚ್ಚು ಪ್ರಮಾಣದ ಆಧುನಿಕತೆ ಗೋಚರಿಸುವ ಲಕ್ಷಣಗಳು ಕಾಣುತ್ತಿವೆ.

**೭.೮ ಮುಖ್ಯ ವಾಹಿನಿ ಮತ್ತು ಸಿದ್ದಿಯರು**

ಸಿದ್ದಿಯರನ್ನು ಸುಮಾರು ೫೦೦ ವರ್ಷಗಳ ಹಿಂದೆ ದಾರುಣವಾಗಿ ನಡೆಸಿಕೊಳ್ಳಲಾಯಿತು. ಮಾನವೀಯತೆ ಇರುವ ಯಾವ ಮನುಷ್ಯನೂ ಇಂತಹ ಕೃತ್ಯವನ್ನು ಎಸಗುವುದಕ್ಕೆ ಸಾಧ್ಯವಿಲ್ಲ. ಸುಳ್ಳ–ಸುಳ್ಳನಿಗೆ ನಂಬಿಕಸ್ಥ ಹಾಗೂ ಕಳ್ಳ–ಕಳ್ಳನಿಗೆ ನಂಬಿಕಸ್ಥ ಎನ್ನುವ ರೀತಿಯಲ್ಲಿ ಯುರೋಪಿಯನ್ನರು ಮತ್ತು ಅರಬರು ಸಿದ್ದಿ ಸಮುದಾಯದವರನ್ನು ಗುಲಾಮರನ್ನಾಗಿ ಮಾರಾಟ ಮಾಡಿದರು. ಅಂದು ಗುಲಾಮಗಿರಿಯ ಕಪಿಮುಷ್ಠಿಗೆ ಸಿಲುಕಿದ ಸಿದ್ದಿಯರು ಜೀವ ಇರುವ ವಸ್ತುಗಳಂತೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೀನಾಯವಾಗಿ ಎಸೆಯಲ್ಪಟ್ಟರು. ಈ ರೀತಿಯಾಗಿ ಪರಿಚಿತವಾದ ಸಮುದಾಯ ಸಮಾಜದ ಮುಖ್ಯ ವಾಹಿನಿಗೆ ಬರುವ ಸಂಕೇತಗಳು ಪ್ರಮುಖವಾಗಿ ಗೋಚರಿಸುತ್ತಿವೆ.

**ಅಡಿಟಿಪ್ಪಣಿಗಳು**

೧. ಪ್ರೊ. ಲಕ್ಷ್ಮಣ್ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು, ಪುಟ ೧೫.
೨. ಕೆ.ಭೈರಪ್ಪ, ಭಾರತೀಯ ಸಮಾಜ, ಪುಟ ೭೧.
೩. ಸಂ: ಎ.ಎಸ್.ಪ್ರಭಾಕರ, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪುಟ ೧೨೫.
೪. ನಂ.ತಪಸ್ವಿಕುಮಾರ್, ಸಂಸ್ಕೃತಿ ವಿಕಾಸ, ಪುಟ ೨೬೦.
೫. ಸಂ: ಹಿ.ಚಿ.ಬೋರಲಿಂಗಯ್ಯ, ಎ.ಎಸ್.ಪ್ರಭಾಕರ, ಬುಡಕಟ್ಟು ಅಧ್ಯಯನ ೪, ಪುಟ ೮೬.
೬. ಡಾ. ಭಟ್ ಎಂ.ಎಂ., ಕರ್ನಾಟಕ ಗ್ರಾಮ ಪಂಚಾಯತ್ ಶಾಸನ ಪರಿಚಯ, ಪುಟ ೯.
೭. ಡಾ. ಎಸ್.ಎ.ಪಾಳೇಕರ್, ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪ್ರಜ್ಞೆ, ಪುಟ ೧೦ ಮತ್ತು ೧೧.
೮. ಶ್ರೀಧರ ಎ., ಪಂಚಾಯತ್ ಸಂಸ್ಥೆಯ ಸಾಮಾಜಿಕ ಆಯಾಮಗಳು, ಪುಟ ೧೨.
೯. ಸಂ: ಎ.ಎಸ್.ಪ್ರಭಾಕರ, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪುಟ ೧೯೧ ಮತ್ತು ೧೯೨.
೧೦. ಸಂ: ಪ್ರೊ. ಕಾಳೇಗೌಡ ನಾಗವಾರ್, ಎನ್.ಹುಚ್ಚಪ್ಪ ಮಾಸ್ತರ್, ಗಿರಿಜನ ಸಂಸ್ಕೃತಿ, ಪುಟ ೩೪.
೧೧. ಪ್ರಜಾವಾಣಿ–ಕ್ರೀಡಾ ಪುರವಣಿ, ಮಂಗಳವಾರ, ೦೯ ನೇ ಅಕ್ಟೋಬರ್ ೨೦೦೭, ಪುಟ II.
೧೨. ಸಂ: ಎ.ಎಸ್.ಪ್ರಭಾಕರ, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪುಟ ೫.

# ಸಮಾರೋಪ

**ನಾ**ನು ಈ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಸಿದ್ದಿಯರು ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಮುಖವಾಗಿ ಕಂಡುಬರುತ್ತಾರೆ. ಗುಲಾಮಗಿರಿಯ ನಂತರ ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳುವ ಪ್ರಯತ್ನದಲ್ಲಿದ್ದಾರೆ. ಕೃಷಿ ಕೂಲಿ ಮತ್ತು ಸಣ್ಣ ಪ್ರಮಾಣದ ಕೃಷಿಯನ್ನು ಅನುಸರಿಸುವುದರ ಮೂಲಕ ಜೀವನ ರೂಪಿಸಿಕೊಳ್ಳುತ್ತಿದ್ದಾರೆ. ಸಿದ್ದಿಯರನ್ನು ಇಂದಿಗೂ ಹೀನಾಯ ಭಾವದಿಂದ ಕಾಣುವವರು ಈಗಲೂ ಇದ್ದಾರೆ. ಬಡ ವರ್ಗದವರಾಗಿರುವುದರಿಂದ ಅದೆಲ್ಲವನ್ನೂ ಸಹಿಸಿಕೊಳ್ಳುತ್ತಾ ಜೀವನ ನಡೆಸುತ್ತಿದ್ದಾರೆ.

**ಅಧ್ಯಯನದ ಫಲಿತಗಳು**

೧. ಸಿದ್ದಿಯರನ್ನು ಇತ್ತೀಚೆಗೆ ಪರಿಶಿಷ್ಟ ಪಂಗಡದಲ್ಲಿ ಸೇರಿಸಿದ್ದಾರೆ. ಶೋಷಣೆಗೆ ಮತ್ತು ದೌರ್ಜನ್ಯಕ್ಕೆ ಒಳಗಾದ ಈ ಸಮುದಾಯಕ್ಕೆ ಎಷ್ಟು ಬೇಗ ಸೌಲಭ್ಯಗಳನ್ನು ಕಲ್ಪಿಸಲಾಗುತ್ತದೆಯೋ ಅಷ್ಟು ಬೇಗ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ.

೨. ಸಿದ್ದಿಯರು ದಟ್ಟವಾದ ಹಾಗು ದುರ್ಗಮವಾದ ಅರಣ್ಯಗಳಲ್ಲಿ ಪ್ರಮುಖವಾಗಿ ವಾಸಿಸುತ್ತಿದ್ದಾರೆ. ನಾಗರಿಕ ಸಮಾಜದೊಂದಿಗಿನ ಸಂಪರ್ಕ ವಿರಳವೆಂದೇ ಹೇಳಬೇಕಾಗುತ್ತದೆ.

೩. ಸಿದ್ದಿಯರು ತಮ್ಮದೇ ಆದ ಸೃಷ್ಟಿ ಪುರಾಣಗಳನ್ನು ಹೊಂದಿದ್ದಾರೆ. ಅಲ್ಲದೆ ತಮ್ಮನ್ನು ಮನುಕುಲದ ಪೂರ್ವಿಕರು ಮತ್ತು ಮನುಕುಲದ ರಕ್ಷಕರು ಎಂದು ಬಿಂಬಿಸಿಕೊಳ್ಳುತ್ತಾರೆ.

೪. ಸಮುದಾಯದಲ್ಲಿ ಹುಟ್ಟಿನಿಂದ ಸಾಯುವವರೆಗೆ ಹಲವಾರು ಆಚರಣೆಗಳನ್ನು ಆಚರಿಸಲಾಗುತ್ತದೆ. ಪ್ರತಿಯೊಂದು ಆಚರಣೆಗಳು ವಿಭಿನ್ನ ಮತ್ತು ವಿಶಿಷ್ಟ ರೀತಿಯಿಂದ ಕೂಡಿರುವುದು ಮತ್ತೊಂದು ವೈಶಿಷ್ಟ್ಯವಾಗಿದೆ.

೫. ಪ್ರತಿಯೊಂದು ಸಮುದಾಯಗಳಲ್ಲಿರುವಂತೆ ಸಿದ್ದಿಯರಲ್ಲಿಯೂ ದೆವ್ವ-ಭೂತದ ನಂಬಿಕೆ ಇರುವುದು ಕಂಡುಬರುತ್ತದೆ. ದೆವ್ವ-ಭೂತಗಳ ನಿವಾರಣೆಗಾಗಿ ಹಲವಾರು ಕ್ರಮಗಳನ್ನು ಕೈಗೊಳ್ಳುತ್ತಾರೆ.

೬. ಸಿದ್ದಿಯರು ಹಿರಿಯರನ್ನು ತೆಂಗಿನ ಕಾಯಿಯ ರೂಪದಲ್ಲಿ ಪೂಜಿಸುತ್ತಾರೆ. ಕುಟುಂಬದಲ್ಲಿ ಸತ್ತಿರುವ ಹಿರಿಯರನ್ನು ಆರಾಧಿಸುವುದರಿಂದ ಯಾವುದೇ ರೀತಿಯ ಸಮಸ್ಯೆಗಳು ಮತ್ತು ದೋಷಗಳು ಬರುವುದಿಲ್ಲ ಎನ್ನುವ ದೃಢ ವಿಶ್ವಾಸವನ್ನು ಹೊಂದಿದ್ದಾರೆ. ತಮ್ಮ ವಂಶದ ಹಿರಿಯರನ್ನು ನೆನಪಿಸಿಕೊಳ್ಳುವುದು ಈ ಆಚರಣೆಯ ಮತ್ತೊಂದು ಉದ್ದೇಶವಾಗಿದೆ.

೭. ಸಮುದಾಯದಲ್ಲಿ ಕನ್ನಡ, ಉರ್ದು, ಹಿಂದಿ, ಮರಾಠಿ ಮತ್ತು ಕೊಂಕಣಿ ಭಾಷೆಗಳು ಪ್ರಮುಖವಾಗಿ ಕಂಡುಬರುತ್ತವೆ. ಕೊಂಕಣಿ, ಮರಾಠಿ ಮತ್ತು ಕನ್ನಡ ಮಿಶ್ರಿತ ಭಾಷೆಯನ್ನು ಮಾತನಾಡುತ್ತಾರೆ. ಈ ಸಿದ್ದಿ ಭಾಷೆಯು ಸಮುದಾಯದವರಿಗೆ ಮಾತ್ರ ಅರ್ಥವಾಗುತ್ತದೆ. ಲಿಪಿ ಇಲ್ಲ ಎನ್ನುವ ಕಾರಣಕ್ಕೆ ಆ ಭಾಷೆಯನ್ನು ಕಡೆಗಣಿಸಲಾಗುತ್ತಿದೆ.

೮. ಸಿದ್ದಿಯರಲ್ಲಿ ಮೂಲ ಕುಟುಂಬದಿಂದ ಚಿಕ್ಕ ಕುಟುಂಬಗಳ ನಿರ್ಮಾಣ ಅರ್ಥಪೂರ್ಣವಾಗಿದೆ. ನವ ದಾಂಪತ್ಯಕ್ಕೆ ಕಾಲಿಟ್ಟ ವ್ಯಕ್ತಿಯು ತನ್ನ ಸಂಸಾರವನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ವಹಿಸಿಕೊಳ್ಳುವ ಕ್ರಮವು ಎಲ್ಲಾ ಸಮುದಾಯಗಳಿಗೂ ಒಂದು ಪಾಠ ಹೇಳಿಕೊಡುವಂತಿದೆ.

೯. ಸಮುದಾಯದಲ್ಲಿ ಬಡತನ ಸರ್ವೆ ಸಾಮಾನ್ಯವಾಗಿದೆ. ಕೂಲಿಯೇ ಇವರ ಜೀವನಕ್ಕೆ ಪ್ರಮುಖ ಆಧಾರ. ಆದ್ದರಿಂದ ಕುಟುಂಬದ ಜವಾಬ್ದಾರಿಯ ವಿಷಯದಲ್ಲಿ ಸ್ತ್ರೀ-ಪುರುಷರಿಬ್ಬರೂ ಸಮಾನರು. ಲಿಂಗ ತಾರತಮ್ಯವಿಲ್ಲ.

೧೦. ಇವರು ಗುಲಾಮರಾಗಿ ಬಂದವರಾಗಿರುವುದರಿಂದ ಸಮುದಾಯದವರಲ್ಲಿ ಬಳಿ ಅಥವಾ ಬೆಡಗುಗಳಿಗಿಂತ ಮುಖ್ಯವಾಗಿ ಮನೆತನದ ಹೆಸರುಗಳು ಪ್ರಮುಖ ಪಾತ್ರ ವಹಿಸುತ್ತವೆ. ಕೆಲವು ಬಗೆಯ ಬಳಿಗಳು ಇವರಲ್ಲಿ ಕಂಡುಬರುತ್ತವೆ. ಅವುಗಳೆಂದರೆ ಕುವಾ, ಮಾಕುವಾ. ಆದರೆ ಬಳಿಗಳ ಆಚರಣೆ ಅಥವಾ ಬಳಕೆ ಅಷ್ಟಾಗಿ ಕಾಣುವುದಿಲ್ಲ. ಮನೆತನಗಳು ಎಂದ ಕೂಡಲೇ ತಾರತಮ್ಯವಿಲ್ಲ. ಇದು ಗುರುತಿಸುವ ಸಂಕೇತ ಮಾತ್ರವಾಗಿ ಕಾರ್ಯನಿರ್ವಹಿಸುತ್ತವೆ.

೧೧. ಸಗೋತ್ರ ವಿವಾಹ ಇವರಲ್ಲಿ ನಿಷಿದ್ಧವಾಗಿದೆ.

೧೨. ಸಮುದಾಯದಲ್ಲಿ ರಕ್ತ ಸಂಬಂಧ ಗಾಢತೆಯನ್ನು ಹೊಂದಿದೆ. ಆದರೆ ಆಧುನಿಕತೆಯ ಸ್ಪರ್ಶ ಸೋಕಿದಂತೆಲ್ಲ ಸ್ವಲ್ಪ ಮಟ್ಟಿನ ಬದಲಾವಣೆಗಳು ಕಂಡುಬರುತ್ತಿವೆ.

೧೩. ಸಿದ್ದಿಯರಲ್ಲಿ ಇಂದಿಗೂ ನೀಗ್ರೋ ಜನಾಂಗದ ಲಕ್ಷಣಗಳು ಪ್ರಮುಖವಾಗಿ ಕಂಡುಬರುತ್ತಿದೆ. ಆದರೆ ಕೆಲವು ಕಡೆ ಜನಾಂಗಗಳ ಮಿಶ್ರಣವಾಗಿರುವುದನ್ನು ಗುರುತಿಸಬಹುದಾಗಿದೆ.

೧೪. ಸಮುದಾಯದವರ ಉಡುಗೆ-ತೊಡುಗೆಗಳನ್ನು ಗಮನಿಸಿದಾಗ ಹಳೆಯ ಕಾಲದ ಹಿರಿಯರು ಪಾರಂಪರಿಕತೆಯನ್ನು ಅನುಸರಿಸುತ್ತಿದ್ದಾರೆ. ಯುವ ಪೀಳಿಗೆಯವರು ಆಧುನಿಕ ವಿನ್ಯಾಸದ ಉಡುಗೆ-ತೊಡುಗೆಗಳನ್ನು ಬಳಸುತ್ತಿರುವುದು ಕಂಡುಬರುತ್ತಿದೆ.

೧೫. ಸಿದ್ದಿಯರ ಮನೆಗಳು ಚೌಕಾಕಾರವಾಗಿರುತ್ತವೆ. ಸುತ್ತಲೂ ಬಿದಿರಿನ ಗೋಡೆಯನ್ನು ನಿರ್ಮಿಸಿ ಮಣ್ಣನ್ನು ಮೆತ್ತುತ್ತಿದ್ದರು. ಯಾವುದೇ ರೀತಿಯಾದ ಕೋಣೆಗಳು ಇರುತ್ತಿರಲಿಲ್ಲ. ಇಂದು ಆಶ್ರಯ ಮನೆಗಳನ್ನು ಸರ್ಕಾರ ಒದಗಿಸುತ್ತಿರುವುದರಿಂದ ಮನೆಗಳ ವಿನ್ಯಾಸದಲ್ಲಿ ಕೆಲವು ಮಟ್ಟಿನ ಪರಿವರ್ತನೆಗಳು ಕಂಡುಬರುತ್ತಿವೆ.

೧೬. ಸಿದ್ದಿಯರು ಬೇಟೆಯಾಡುವುದರಲ್ಲಿ ನಿಪುಣರು. ಇವರು ಮಾಂಸಾಹಾರಿಗಳು. ಇಂದು ಬೇಟೆಯನ್ನು ನಿಷೇಧಿಸಿರುವುದರಿಂದ ಮಾಂಸಾಹಾರ ಸೇವನೆಯ ಪ್ರಮಾಣ ಮೊದಲಿನಷ್ಟಿಲ್ಲ.

೧೭. ಕೆಂಪು ಇರುವೆಗಳಿಂದ ಚಟ್ನಿ ತಯಾರಿಸುವ ಕ್ರಮವು ವೈಶಿಷ್ಟ್ಯವಾಗಿದೆ. ಇತರೆ ಯಾವ ಸಮುದಾಯಗಳಲ್ಲಿ ಕಂಡುಬರದ ಈ ಚಟ್ನಿಯು ಇವರಲ್ಲಿ ಪ್ರಸಿದ್ದಿಯಾಗಿದೆ. ಈ ಚಟ್ನಿಯನ್ನು ಸಮುದಾಯದಲ್ಲಿ ಎಲ್ಲರೂ ಬಳಸುತ್ತರಾದರೂ ನಂಜು ಹತ್ತಿದವರಿಗೆ ಹಾಗೂ ಬಾಣಂತಿಯರಿಗೆ ಇದು ಶ್ರೇಷ್ಠವಾದುದು. ಆದರೆ ಇಂದಿನ ಯುವ ಪೀಳಿಗೆ ಈ ಆಹಾರವನ್ನು ವರ್ಜಿಸುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

೧೮. ಸಿದ್ದಿಯರಲ್ಲಿ ಅವರದೇ ಆದ ಕುಲ ಪಂಚಾಯತಿ ವ್ಯವಸ್ಥೆ ಇದೆ. ಸಮುದಾಯದಲ್ಲಿ ಬರುವ ಪ್ರತಿಯೊಂದು ವ್ಯಾಜ್ಯಗಳನ್ನು ಬಗೆಹರಿಸಿ ನ್ಯಾಯ ನಿರ್ಣಯವನ್ನು ಕೈಗೊಳ್ಳಲಾಗುತ್ತದೆ. ಇಂದು ಸಮುದಾಯದ ಕೆಲವರು ಪೋಲೀಸ್ ಮತ್ತು ನ್ಯಾಯಾಲಯದ ಕಟ್ಟೆ ತುಳಿಯುತ್ತಿರುವುದು ಸಹ ಅಲ್ಲಲ್ಲಿ ಕಂಡುಬರುತ್ತಿದೆ.

೧೯. ಸಿದ್ದಿಯರು ತಮ್ಮದೇ ಆದ ವೈದ್ಯ ಪದ್ಧತಿಯ ಮುಖಾಂತರ ಔಷಧಿಯನ್ನು ಕಂಡುಕೊಂಡಿದ್ದಾರೆ. ಮಾನವ, ಪಶು, ಸಸ್ಯ ವೈದ್ಯಕೀಯ ಜ್ಞಾನ ಹೊಂದಿದ್ದಾರೆ. ತೀರಾ ಅನಿವಾರ್ಯವಾದಾಗ ಮಾತ್ರ ಆಸ್ಪತ್ರೆಗಳಿಗೆ ತೆರಳುತ್ತಾರೆ.

೨೦. ಸಿದ್ದಿಯರೂ ಸಹ ತಮ್ಮದೇ ಆದ ನಂಬಿಕೆ–ನಿಷೇಧಗಳನ್ನು ಹೊಂದಿದ್ದಾರೆ. ಕೆಲವು ನಂಬಿಕೆ–ನಿಷೇಧಗಳು ಮಹತ್ವವನ್ನು ಕಳೆದುಕೊಳ್ಳುತ್ತಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬರುತ್ತದೆ.

೨೧. ಸಿದ್ದಿಯರು ಕಡುಬಡತನವನ್ನು ಹೊಂದಿರುವುದರಿಂದ ಹಲವಾರು ಸಮಸ್ಯೆಗಳು ತಾಂಡವವಾಡುತ್ತಿವೆ. ಬಲಿಷ್ಠವಾದ ದೇಹಸಿರಿಯನ್ನು ಹೊಂದಿದ್ದರೂ ಸರಿಯಾದ ಉದ್ಯೋಗವಿಲ್ಲದೆ ನಿರುದ್ಯೋಗದಿಂದ ಬಳಲುತ್ತಿದ್ದಾರೆ.

೨೨. ಇತರೆ ಪ್ರಮುಖ ದೇಶಗಳು ಕರಿಯರನ್ನು ಒಲಂಪಿಕ್ಸ್‌ಗೆ ಕಳುಹಿಸುವಂತೆ ಭಾರತವೂ ಸಹ ಸಿದ್ದಿಯರನ್ನು ಆಟೋಟಕ್ಕೆ ಬಳಸಿಕೊಳ್ಳುವ ಪ್ರಯತ್ನ ಮಾಡಿತಾದರೂ ಪೂರ್ಣ ಪ್ರಮಾಣದಲ್ಲಿ ಅನುಷ್ಠಾನಕ್ಕೆ ತರುವಲ್ಲಿ ವಿಫಲವಾಯಿತು.

೨೩. ಸಿದ್ದಿಯರಿಗೆ ಶಿಕ್ಷಣ ಎನ್ನುವುದು ಮರೀಚಿಕೆಯಾಗಿತ್ತು. ಇಂದು ಸಿದ್ದಿಯರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸುವ ಪ್ರವೃತ್ತಿ ಸಮುದಾಯದಲ್ಲಿ ಈಗಲೂ ಕಂಡುಬರುತ್ತಿದೆ.

೨೪. ಸಿದ್ದಿಯರು ಬಡತನದ ರೇಖೆಗಿಂತ ಕೆಳಗಿರುವುದರಿಂದ ಮಕ್ಕಳ ದುಡಿಮೆ ಅಥವಾ ಬಾಲ ಕಾರ್ಮಿಕ ಪದ್ದತಿ ಇವರಲ್ಲಿ ಇನ್ನೂ ಜೀವಂತವಾಗಿದೆ.

೨೫. ಜೀತ ಪದ್ದತಿಯೂ ಸಹ ಕಂಡುಬರುತ್ತದೆ.

೨೬. ವೈವಾಹಿಕ ಬಾಂಧವ್ಯ ಗಟ್ಟಿಯಾಗಿರದೆ, ಸುಲಭವಾಗಿ ವಿಚ್ಛೇದನೆ ಪಡೆಯಲು ಅವಕಾಶವಿದೆ.

೨೭. ಸಿದ್ದಿಯರು ಹಿಂದೂ, ಕ್ರೈಸ್ತ ಮತ್ತು ಮುಸ್ಲಿಂ ಧರ್ಮಗಳಲ್ಲಿ ಹಂಚಿಹೋಗಿದ್ದಾರೆ. ಧರ್ಮದ ವೈವಿಧ್ಯತೆ ಇದ್ದರೂ ಸಮಾನತೆಯನ್ನು ಹೊಂದಿದ್ದಾರೆ. ಧಾರ್ಮಿಕ ಬೇಧ–ಭಾವ ಇವರಲ್ಲಿ ಕಂಡುಬರುವುದಿಲ್ಲ. ಆಧುನಿಕ ಸಮಾಜಕ್ಕೆ ಸಹಬಾಳ್ವೆಯ ಸ್ಪಷ್ಟ ಸಂದೇಶವನ್ನು ನೀಡಿದ್ದಾರೆ.

೨೮. ವಿವಿಧ ಪ್ರಮುಖ ಧರ್ಮಗಳಲ್ಲಿ ಇವರು ಹಂಚಿ ಹೋಗಿದ್ದರೂ, ಆಯಾ ಧರ್ಮಗಳಲ್ಲಿ ಇವರಿಗೆ ಯಾವುದೇ ರೀತಿಯ ಪ್ರಾಶಸ್ತ್ಯವನ್ನು ನೀಡದೇ ಕಡೆಗಣಿಸಲಾಗಿದೆ.

೨೯. ಒಂದೇ ಕುಟುಂಬದಲ್ಲಿ ಮೂರೂ ಧರ್ಮಕ್ಕೆ ಸೇರಿದ ವ್ಯಕ್ತಿಗಳು ಕಂಡುಬರುತ್ತಾರೆ. ಇವರಲ್ಲಿ ಯಾವುದೇ ರೀತಿಯ ಧಾರ್ಮಿಕ ನಿರ್ಬಂಧಗಳಿಲ್ಲ.

೩೦. ವಿವಿಧ ಧರ್ಮಗಳಲ್ಲಿ ಹಂಚಿದ್ದರೂ ತಮ್ಮ ತಮ್ಮ ಧರ್ಮಕ್ಕನುಗುಣವಾದ ನಂಬಿಕೆ ಮತ್ತು ಆಚರಣೆಗಳನ್ನು ಎಲ್ಲರೂ ಸೇರಿ ಆಚರಿಸುತ್ತಾರೆ.

೩೧. ಆಧುನಿಕ ಸಮಾಜದಲ್ಲಿ ಹೇಗೆ ಬದುಕಬೇಕು ಎಂಬುದನ್ನು ಅರಿಯದ ಮುಗ್ಧ ಜನರು ಇವರಾಗಿದ್ದಾರೆ. ಆಧುನಿಕತೆಯನ್ನು ಒಪ್ಪದೆ ತಮ್ಮ ಪರಂಪರೆಯಲ್ಲಿಯೇ ಬದುಕಲು ಇಷ್ಟ ಪಡುತ್ತಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಸಮುದಾಯದಲ್ಲಿಯ ಎಲ್ಲ ಬಗೆಯ ಆಚರಣೆಗಳನ್ನು ಮುಂದುವರೆಸಿಕೊಂಡು ಹೋಗುವ ಇಚ್ಛೆಯನ್ನು ಪ್ರಮುಖವಾಗಿ ಹೊಂದಿದ್ದಾರೆ.

೩೨. ಸಿದ್ದಿಯರು ಹಲವಾರು ಬಗೆಯ ಪ್ರಮುಖ ಆಚರಣೆಗಳನ್ನು ಹೊಂದಿದ್ದಾರೆ. ಅವುಗಳನ್ನು ಇಂದಿಗೂ ಅಚ್ಚುಕಟ್ಟಾಗಿ ನೆರವೇರಿಸಿಕೊಂಡು ಬರುತ್ತಿದ್ದಾರೆ. ಆಧುನಿಕತೆಯ ಸ್ಪರ್ಶದಿಂದಾಗಿ ಆಚರಣೆಗಳಲ್ಲಿ ಕೊಂಚ ಮಟ್ಟಿನ ಬದಲಾವಣೆಯ ಗಾಳಿ ಬೀಸತೊಡಗಿದೆಯೆಂದು ಹೇಳಬಹುದು.

೩೩. ಸಿದ್ದಿಯರ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯು ಶ್ರೀಮಂತಿಕೆಯಿಂದ ಕೂಡಿದೆ. ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರತೆ ಕಂಡುಬಂದಿದೆ. ಇವರ ಭಾಷೆಗೆ ಲಿಪಿ ಇಲ್ಲದಿರುವುದರಿಂದ ಕಲೆ ಮತ್ತು ಸಾಹಿತ್ಯಗಳು ಮೌಖಿಕ ಪರಂಪರೆಯಲ್ಲಿ ಮುಂದುವರೆದುಕೊಂಡು ಬರುತ್ತಿವೆ. ಯುವ ಪೀಳಿಗೆ ತಮ್ಮ ಸಮುದಾಯದ ಮೌಖಿಕ ಕಲೆ ಮತ್ತು ಸಾಹಿತ್ಯವನ್ನು ಕಡೆಗಣಿಸುತ್ತಿರುವುದು ಕಂಡುಬರುತ್ತದೆ.

೩೪. ಸಿದ್ದಿಯರ ಸ್ವಂತಿಕೆಯನ್ನು ಬಿಂಬಿಸುವ ಡಮಾಮಿ ಕಲೆಯು ಆಧುನಿಕತೆಗೆ ತಕ್ಕಂತೆ ಪರಿವರ್ತನೆಯಾಗುತ್ತಿದೆ ಎಂದು ಹೇಳಬೇಕಾಗುತ್ತದೆ. ಅಂದರೆ ಈ ಕುಣಿತವನ್ನು ಆಚರಿಸಬೇಕಾದರೆ ಕೇವಲ ಮರದ ತಪ್ಪಲನ್ನು ಸುತ್ತಿಕೊಂಡು ಬೆಂಕಿಯನ್ನು ಹೊತ್ತಿಸಿ, ಅದರ ಸುತ್ತ ನರ್ತಿಸುತ್ತಿದ್ದರು. ಆದರೆ ಇಂದು ಮೈತುಂಬ ಬಟ್ಟೆಯನ್ನು ತೊಟ್ಟಿರುತ್ತಾರೆ. ಹಗಲಲ್ಲಿ ಈ ಕುಣಿತವನ್ನು ಕೈಗೊಳ್ಳುವುದು ಕಂಡುಬರುತ್ತಿರುವುದರಿಂದ ಬೆಂಕಿಯನ್ನು ಹೊತ್ತಿಸುವ ಅವಶ್ಯಕತೆ ಇಲ್ಲದಂತಾಗುತ್ತದೆ.

೩೫. ಸಮುದಾಯದವರು ನಿಧಾನವಾಗಿ ಶಿಕ್ಷಣದ ಕಡೆ ವಾಲುತ್ತಿದ್ದಾರೆ. ವಿದ್ಯಾವಂತರ ಪ್ರಮಾಣದಲ್ಲಿ ಅಲ್ಪ ಮಟ್ಟಿನ ಏರಿಕೆಯಾಗುತ್ತಿರುವುದನ್ನು ಗುರುತಿಸಲಾಗಿದೆ. ವಿದ್ಯಾವಂತರು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿರುವುದು ಕಂಡುಬರುತ್ತಿದೆ. ಸರ್ಕಾರೇತರ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿದ್ದಿಯರು ತಮ್ಮ ಜನರನ್ನು ತಮ್ಮತ್ತ ಸೆಳೆಯುವ ಸಮರ್ಪಕವಾದ ಪ್ರಯತ್ನವನ್ನು ಮಾಡುತ್ತಿಲ್ಲ.

೩೬. ಸಿದ್ದಿಯರು ಸರ್ಕಾರದ ಹಲವಾರು ಸೇವೆಗಳಿಂದ ವಂಚಿತರಾಗುತ್ತಿದ್ದಾರೆ. ಅದರಲ್ಲಿಯೂ ಮುಖ್ಯವಾಗಿ ವೈದ್ಯಕೀಯ ಸೇವೆಯಿಂದ ವಂಚಿತರಾಗುತ್ತಿದ್ದಾರೆ. ನಾಟಿ ವೈದ್ಯ ಪದ್ಧತಿಯನ್ನು ಇತ್ತೀಚಿಗೆ ಅಷ್ಟಾಗಿ ಬಳಸುತ್ತಿಲ್ಲ. ಅಲ್ಲದೆ ಗಂಭೀರ ಪ್ರಮಾಣದ

ಕಾಯಿಲೆಗಳಿಗೆ ಸೂಕ್ತವಾದ ಔಷದೋಪಚಾರ ವ್ಯವಸ್ಥೆ ಇರುವುದಿಲ್ಲ. ಗಂಭೀರ ರೋಗಗಳು ಬಂದರೆ ನಾಗರಿಕ ಸಮಾಜದ ಆಸ್ಪತ್ರೆಗಳನ್ನು ಹುಡುಕಿಕೊಂಡು ಹೋಗುವುದು ತೊಂದರೆಯಾಗುತ್ತಿದೆ.

೩೭. ಸರ್ಕಾರದ ಸೌಲಭ್ಯಗಳು ಇವರ ಮನೆ ಬಾಗಿಲನ್ನು ತಲುಪುವುದರ ಒಳಗೆ ಸೋರಿ ಹೋಗಿರುತ್ತವೆ. ಆದ್ದರಿಂದ ಸರ್ಕಾರದ ಸೌಲಭ್ಯಗಳು ನೇರವಾಗಿ ಇವರಿಗೆ ದೊರೆಯುವಂತಾಗಬೇಕಾಗಿದೆ.

೩೮. ಆಶ್ರಮ ಶಾಲೆಗಳು, ಗಿರಿಜನ ಶಾಲೆಗಳನ್ನು ಪ್ರಾರಂಭಿಸುತ್ತಿರುವುದು ಸಂತೋಷದ ಸಂಗತಿ. ಆದರೆ ಈ ಶಾಲೆಗಳು ಸಿದ್ದಿಯರ ಮಕ್ಕಳನ್ನು ಆಕರ್ಷಿಸುವಲ್ಲಿ ವಿಫಲವಾಗಿವೆ ಎಂದು ಹೇಳಬೇಕಾಗುತ್ತದೆ.

೩೯. ನಾಗರಿಕ ಸಮುದಾಯದವರನ್ನು ಕಂಡರೆ ಹೆದರಿ ಓಡಿಹೋಗುತ್ತಿದ್ದ ಸಿದ್ದಿಯರು ಇಂದು ಸಂಘಟನಾತ್ಮಕ ಮನೋಭಾವನೆಯನ್ನು ಹೊಂದಿದ್ದಾರೆ.

೪೦. ಇತ್ತೀಚಿಗೆ ಸಿದ್ದಿಯರು ಮುಖ್ಯ ವಾಹಿನಿಗೆ ಬರುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಚಾಲಕರಾಗಿ, ಸಣ್ಣ-ಪುಟ್ಟ ವ್ಯಾಪಾರಗಳಲ್ಲಿ ಆಸಕ್ತಿ ವಹಿಸಿ ಮುಂದೆ ಬರುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಇವರಿಗೆ ಬಂಡವಾಳದ ಕೊರತೆ ಇದ್ದು, ಸರ್ಕಾರವು ಸಬ್ಸಿಡಿ ಸಾಲವನ್ನು ಹೆಚ್ಚಿನ ಪ್ರಮಾಣದಲ್ಲಿ ನೀಡಿದರೆ ಅನುಕೂಲವಾಗುತ್ತದೆ.

೪೧. ಸಿದ್ದಿಯರು ರಾಜಕೀಯವಾಗಿ ಬಹಳ ಹಿಂದುಳಿದಿದ್ದಾರೆ. ಇವರಿಗೆ ರಾಜಕೀಯದಲ್ಲಿ ವಿಶೇಷ ಪ್ರಾತಿನಿಧ್ಯವನ್ನು ನೀಡಬೇಕಾಗಿದೆ.

೪೨. ಇವರ ಅತಿಕ್ರಮಣ ಭೂಮಿಯನ್ನು ಸಕ್ರಮಗೊಳಿಸಿ, ಸ್ಥಿರವಾಗಿ ಒಂದೆಡೆ ಜೀವನ ರೂಪಿಸಿಕೊಳ್ಳುವಂತೆ ಮಾಡಿ, ಮುಖ್ಯ ವಾಹಿನಿಗೆ ತರಬೇಕಾದ ಅವಶ್ಯಕತೆ ಇದೆ.

ಈ ಮೇಲಿನ ಅಂಶಗಳು ನನ್ನ ಅಧ್ಯಯನದ ಫಲಿತಗಳಾಗಿವೆ.

**ಸಿದ್ದಿಯರ ಅಭಿವೃದ್ಧಿಗಾಗಿ ಸಲಹೆ ಸೂಚನೆಗಳು**

- ಸಿದ್ದಿಯರ ಅಭಿವೃದ್ಧಿಗಾಗಿ ರೂಪಿಸಿದ ಸರ್ಕಾರದ ಯೋಜನೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಬೇಕು. ಕೆಲವು ಸರ್ಕಾರಿ ಉದ್ಯೋಗಗಳನ್ನು ಸೃಷ್ಟಿಸಬೇಕು.
- ಸರ್ವ ಸಮಸ್ಯೆಗಳ ಮೂಲ ಎಂದರೆ ಬಡತನ. ಸಮುದಾಯದಲ್ಲಿ ಬಡತನ ಸರ್ವೇ ಸಾಮಾನ್ಯವಾಗಿರುವುದರಿಂದ ಅಭಿವೃದ್ಧಿಗೆ ತೊಡಕಾಗುತ್ತಿದೆ. ಬಡತನವನ್ನು ನಿವಾರಿಸುವ ಪ್ರಥಮ ಪ್ರಯತ್ನವಾಗಬೇಕಾಗಿದೆ.
- ಸಿದ್ದಿಯರಿಗೆ ಆಶ್ರಯ ಮನೆಗಳನ್ನು ಒದಗಿಸುವಾಗ ಅವರ ಸಂಸ್ಕೃತಿಯ ದ್ಯೋತಕವಾದ ಪಾರಂಪರಿಕ ಮನೆಯ ಮಾದರಿಯಲ್ಲಿಯೇ ನಿರ್ಮಿಸಿಕೊಡಬೇಕು.

- ಅರಣ್ಯದ ಕಿರು ಉತ್ಪನ್ನಗಳನ್ನು ಸಂಗ್ರಹ ಮಾಡಲು ಹೆಚ್ಚಿನ ಪ್ರಮಾಣದ ಅವಕಾಶವನ್ನು ಒದಗಿಸಬೇಕಾಗಿದೆ.
- ಸಿದ್ದಿಯರು ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಂಡು ಸಮರ್ಥರಾಗಿ ಬದುಕುವುದಕ್ಕೆ ಸೂಕ್ತವಾದ ಮಾರ್ಗದರ್ಶನವನ್ನು ನೀಡಿ ತಯಾರಿ ಮಾಡಬೇಕಾಗಿದೆ.
- ಸಮುದಾಯದ ಪ್ರತಿಯೊಬ್ಬ ಯುವಕನಿಗೆ ಸ್ವಯಂ ಉದ್ಯೋಗಗಳನ್ನು ಕೈಗೊಳ್ಳುವಂತೆ ಗುಡಿ ಕೈಗಾರಿಕೆಗಳನ್ನು ಸ್ಥಾಪಿಸುವಂತೆ ಹಾಗೂ ಕೃಷಿಯಲ್ಲಿ ತಂತ್ರಜ್ಞಾನ ಅಳವಡಿಸಿಕೊಳ್ಳುವಂತೆ ಪ್ರೇರೇಪಿಸಬೇಕಾಗಿದೆ.
- ಧಾರ್ಮಿಕ ಸಹಬಾಳ್ವೆಯನ್ನು ಹೊಂದಿರುವ ಇವರಿಗೆ ಆಯಾ ಧರ್ಮಗಳಲ್ಲಿ ಇತರರಂತೆ ಪ್ರಾಶಸ್ತ್ಯವನ್ನು ಕಲ್ಪಿಸಬೇಕು.
- ಸರಕಾರ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುವಾಗ ಸಮುದಾಯದವರನ್ನು ಗಣನೆಗೆ ತೆಗೆದುಕೊಳ್ಳಬೇಕು. ಅಲ್ಲಿನ ವಾಸ್ತವತೆ ಮತ್ತು ಬೇಕು ಬೇಡಗಳನ್ನು ಸಮುದಾಯದವರಿಂದಲೇ ತಿಳಿಯುವುದರಿಂದ ಅವಶ್ಯಕವಾದ ಸೂಕ್ತ ಅಭಿವೃದ್ಧಿ ಕ್ರಮಗಳನ್ನು ಕೈಗೊಳ್ಳಬಹುದು.
- ಮಹಿಳೆಯರ ಅಭಿವೃದ್ಧಿಗಾಗಿ ಮಹಿಳಾ ಸಂಘಟನೆಗಳನ್ನು ಸ್ಥಾಪಿಸಿ, ಸ್ತ್ರೀ ಶಕ್ತಿ ಸಂಘಗಳು ಸಕ್ರೀಯವಾಗಿ ಕಾರ್ಯನಿರ್ವಹಿಸುವಂತೆ ಮಾಡಬೇಕು.
- ಸಿದ್ದಿ ಮಹಿಳೆಯರಿಗಾಗಿ ಉದ್ಯೋಗದಲ್ಲಿ ಕೆಲವು ಮೀಸಲು ಸ್ಥಾನಗಳನ್ನು ನೀಡಬೇಕು.
- ಸ್ವಯಂ ಉದ್ಯೋಗಕ್ಕಾಗಿ ಪ್ರತ್ಯೇಕ ಯೋಜನೆ ರೂಪಿಸಬೇಕು. ಅವರಲ್ಲಿರುವ ಕರಕುಶಲ ಕಲೆಗಳಿಗೆ ಅವಕಾಶ ಕಲ್ಪಿಸಿಕೊಡುವುದರ ಜೊತೆಗೆ ಪೂರಕವಾದ ವಾತಾವರಣವನ್ನು ನಿರ್ಮಿಸಬೇಕು.
- ಸಮುದಾಯದವರ ಆರೋಗ್ಯ ರಕ್ಷಣೆಗಾಗಿ ಅವರು ವಾಸವಾಗಿರುವ ಪ್ರದೇಶಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿ ಅವರ ಆರೋಗ್ಯದ ದೃಢತೆಗಾಗಿ ವೈದ್ಯಕೀಯ ಸೌಲಭ್ಯ ಸಮರ್ಪಕವಾಗಿ ದೊರೆಯುವಂತೆ ಮಾಡಬೇಕು.
- ಕೆಲವೊಂದು ದುರ್ಗಮ ಪ್ರದೇಶಗಳಲ್ಲಿ ವಾಸವಾಗಿರುವ ಇವರ ಸ್ಥಳಗಳಿಗೆ ಸಾರಿಗೆ ಸಂಪರ್ಕವನ್ನು ಕಲ್ಪಿಸಬೇಕು.

# ಅಂಕಿ ಅಂಶಗಳ ಪಟ್ಟಿ – ೧

## ಕಾರವಾರ ಜಿಲ್ಲೆಯ ತಾಲೂಕುವಾರು ಗ್ರಾಮಗಳ ಜನಸಂಖ್ಯೆ ವಿವರ

### ಅಂಕೋಲ ತಾಲೂಕು

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಚಾವೆ | ೨೫ | ೨೮ | ೫೩ |
| ೨ | ಅಂಗಡಿಬೈಲ್ | ೧೮ | ೧೮ | ೩೬ |
| ೩ | ದೊಡ್ಡಕಟ್ಟೆ | ೧೧ | ೧೧ | ೨೨ |
| ೪ | ಡೊಂಗ್ರಿ | ೬೦ | ೫೩ | ೧೧೩ |
| ೫ | ಹಳವಳ್ಳಿ | ೧೩೫ | ೧೨೨ | ೨೫೭ |
| ೬ | ಹಿಗ್ಗಾರ | ೬ | ೯ | ೧೫ |
| ೭ | ಕೈಗಡಿ | ೪ | ೮ | ೧೨ |
| ೮ | ಕಲ್ಲೇಶ್ವರ | ೪೭ | ೪೯ | ೯೬ |
| ೯ | ಕಮ್ಮಾಣಿ | ೪೬ | ೩೮ | ೮೪ |
| ೧೦ | ಕೊಡ್ಲಿಗದ್ದೆ | ೨೮ | ೨೪ | ೫೨ |
| ೧೧ | ರೋಣಾಳ್ | ೧ | ೧ | ೨ |
| ೧೨ | ಸೋರಕರ್ | ೭ | ೧೧ | ೧೮ |
| ೧೩ | ಸುಕಸಾಲ್ | ೭ | ೫ | ೧೨ |
| ೧೪ | ವಂಡರಮನೆ | ೩ | ೧ | ೪ |
| | **ಒಟ್ಟು** | **೩೯೮** | **೩೭೮** | **೭೭೬** |

### ಮುಂಡಗೋಡ ತಾಲೂಕು

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಬಸರೆಜಡ್ಡಿ | ೩೦ | ೧೭ | ೪೭ |
| ೨ | ಕೆಂದಿಲ್‌ಗೇರಿ | ೧೭೧ | ೧೬೦ | ೩೩೧ |
| ೩ | ಉಗ್ಗಿನಕೇರಿ | ೬೨ | ೫೪ | ೧೧೬ |
| | **ಒಟ್ಟು** | **೨೬೩** | **೨೩೧** | **೪೯೪** |

### ಕಾರವಾರ ತಾಲೂಕು

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಕಾಸಿರವಾಡ | ೧೯ | ೧೩ | ೩೨ |
| | ಒಟ್ಟು | ೧೯ | ೧೩ | ೩೨ |

## ಜೋಯಿಡಾ ತಾಲೂಕು

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಇರಸೊಳ್ಳಿ | ೨೪ | ೨೪ | ೪೮ |
| | ಒಟ್ಟು | ೨೪ | ೨೪ | ೪೮ |

## ಶಿರಸಿ ತಾಲೂಕು

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ದೇವನಹಳ್ಳಿ | ೯ | ೧೩ | ೨೨ |
| ೨ | ಹಗರಿಮನೆ | ೧೭ | ೨೩ | ೪೦ |
| ೩ | ಕಕ್ಕಳ್ಳಿ | ೧೮ | ೨೨ | ೪೦ |
| ೪ | ಕೆಳಗಿನಕೇರಿ | ೨೯ | ೧೯ | ೪೮ |
| ೫ | ಮತ್ತಿಗಟ್ಟ | ೦ | ೧ | ೧ |
| ೬ | ಸಿರಗಾವೆ | ೧೨ | ೧೦ | ೨೨ |
| ೭ | ವಾನಹಳ್ಳಿ | ೪೪ | ೪೫ | ೮೯ |
| | ಒಟ್ಟು | ೧೨೯ | ೧೩೩ | ೨೬೨ |

## ಹಳಿಯಾಳ ತಾಲೂಕು

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಡಕೆ ಹೊಸೂರು | ೧೨೨ | ೧೦೧ | ೨೨೩ |
| ೨ | ಅಗಸಲಕಟ್ಟಾ | ೨೮ | ೧೮ | ೪೬ |
| ೩ | ಅಜಗರ | ೨ | ೨ | ೪ |
| ೪ | ಆಲೂರು | ೭ | ೮ | ೧೫ |
| ೫ | ಬಾಳಶೆಟ್ಟಿಕೊಪ್ಪ | ೩೮ | ೩೮ | ೭೬ |
| ೬ | ಭಾಗವತಿ | ೨೦೩ | ೨೦೮ | ೪೧೧ |
| ೭ | ಬಿದರೊಳ್ಳಿ | ೫೧ | ೧೩ | ೬೪ |
| ೮ | ಬೊಮ್ಮನಹಳ್ಳಿ | ೩೭ | ೩೧ | ೬೮ |
| ೯ | ದೊಡ್ಡಕೊಪ್ಪ | ೨೨ | ೨೬ | ೪೮ |
| ೧೦ | ಗವಗೇರಾ | ೫೭ | ೫೬ | ೧೧೩ |
| ೧೧ | ಗರಡೊಳ್ಳಿ | ೯೫ | ೧೧೮ | ೨೧೩ |
| ೧೨ | ಗೊಲೆಹಳ್ಳಿ | ೧೧೮ | ೧೦೯ | ೨೨೭ |
| ೧೩ | ಗುತ್ತಿಬೈಲ್ | ೨೨ | ೧೫ | ೩೭ |
| ೧೪ | ಹಳಿಯಾಳ | ೩ | ೧ | ೪ |
| ೧೫ | ಹೊಸೂರು | ೫೭ | ೪೫ | ೧೦೨ |

| ಕ್ರಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧೬ | ಜನಗ | ೧೦ | ೧೧ | ೨೧ |
| ೧೭ | ಜತಗಾ | ೩೪ | ೩೧ | ೬೫ |
| ೧೮ | ಜತಗಾ ಹೊಸೂರು | ೪೬ | ೩೩ | ೭೯ |
| ೧೯ | ಕಾಮತಿಕೊಪ್ಪ | ೫೮ | ೬೦ | ೧೧೮ |
| ೨೦ | ಕೆಗದಾಳ | ೪೨ | ೫೧ | ೯೩ |
| ೨೧ | ಕಾಮದೊಳ್ಳಿ | ೩ | ೩ | ೬ |
| ೨೨ | ಕುಂಬಾರಕೊಪ್ಪ | ೩ | ೧ | ೪ |
| ೨೩ | ಮೂಡಲಿಗೇರ | ೨ | ೩ | ೫ |
| ೨೪ | ಎನ್.ಎಸ್.ಕೊಪ್ಪ | ೪೫ | ೪೬ | ೯೧ |
| ೨೫ | ಪಂಡರವಾಳ | ೨೨ | ೧೬ | ೩೮ |
| ೨೬ | ರಾಂಪುರ | ೧೯ | ೧೯ | ೩೮ |
| ೨೭ | ರಾಯಪಟ್ಟಣ | ೧೦ | ೮ | ೧೮ |
| ೨೮ | ಸಾಂಬ್ರಾಣಿ | ೧೮೦ | ೧೬೭ | ೩೪೭ |
| ೨೯ | ಸಿದ್ದಾಪುರ | ೨ | ೪ | ೬ |
| ೩೦ | ತಟ್ಟಗೇರಿ | ೨೫೮ | ೨೩೮ | ೪೯೬ |
| ೩೧ | ತಾವರಕಟ್ಟ | ೫೩ | ೬೫ | ೧೧೮ |
| ೩೨ | ತೆಗ್ಗಳ್ಳಿ | ೩೩ | ೨೨ | ೫೫ |
| ೩೩ | ತತ್ವಣಗಿ | ೧೪೭ | ೧೧೧ | ೨೫೮ |
| ೩೪ | ವಾಡಾ | ೧೧೩ | ೧೧೩ | ೨೨೬ |
| | **ಒಟ್ಟು** | **೧೯೪೨** | **೧೭೯೧** | **೩೭೩೩** |

**ಯಲ್ಲಾಪುರ ತಾಲೂಕು**

| | | | | |
|---|---|---|---|---|
| ೧ | ಅಂಬಗಾಂವ್ | ೨೦ | ೧೩ | ೩೩ |
| ೨ | ಅಂಗೋಡ | ೩ | ೧ | ೪ |
| ೩ | ಅಂದ್ರಳ್ಳಿ | ೩ | ೪ | ೭ |
| ೪ | ಅರಬೈಲ್ | ೨೮ | ೩೪ | ೬೨ |
| ೫ | ಬೈಲಂದೂರು | ೬೧ | ೮೩ | ೧೪೪ |
| ೬ | ಬಳಗಾರ | ೨೨ | ೨೧ | ೪೩ |
| ೭ | ಬಳಗಿಮನೆ | ೩ | ೧ | ೪ |

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೮ | ಬಳಕಿ | ೨ | ೧ | ೩ |
| ೯ | ಬೆದ್ದನಹೆಕ್ಲು | ೫ | ೮ | ೧೩ |
| ೧೦ | ಬೆಳಕೋಡ್ | ೩ | ೨ | ೫ |
| ೧೧ | ಬೆಳಕೊಪ್ಪ | ೯ | ೯ | ೧೮ |
| ೧೨ | ಬೆಳ್ಳಂಬಿ | ೧೭ | ೧೬ | ೩೩ |
| ೧೩ | ಬೆಂಡಿಗೇರಿ | ೨ | ೧ | ೩ |
| ೧೪ | ಬಾನಹಳ್ಳಿ | ೨೬ | ೨೬ | ೫೨ |
| ೧೫ | ಭರಣಿ | ೨೩ | ೨೬ | ೪೯ |
| ೧೬ | ಭರತನಹಳ್ಳಿ | ೯ | ೧೧ | ೨೦ |
| ೧೭ | ಬೀಗಾರ | ೨೧ | ೧೨ | ೩೩ |
| ೧೮ | ಬಿಕ್ಕಬಿಳ್ಳಿ | ೨ | ೨ | ೪ |
| ೧೯ | ಬಿಳಕಿ | ೫೬ | ೪೭ | ೧೦೩ |
| ೨೦ | ಬಿಂಬನಹಳ್ಳಿ | ೧೦ | ೮ | ೧೮ |
| ೨೧ | ಬೋರಿನೊಂದ | ೯ | ೮ | ೧೭ |
| ೨೨ | ಚಂದುಗುಳಿ | ೨೨ | ೧೯ | ೪೧ |
| ೨೩ | ಚಿಕ್ಕುಮನೆ | ೯ | ೧೦ | ೧೯ |
| ೨೪ | ದೇವರಕಲ್ಲಹಳ್ಳಿ | ೧೪ | ೧೫ | ೨೯ |
| ೨೫ | ದೇವಿಸರ | ೪ | ೨ | ೬ |
| ೨೬ | ಗೊಟಕೋಳ | ೧೦ | ೧೬ | ೨೬ |
| ೨೭ | ಗುಡಂದೂರು | ೫೧ | ೫೪ | ೧೦೫ |
| ೨೮ | ಗುಳ್ಳಾಪುರ | ೫೫ | ೫೨ | ೧೦೭ |
| ೨೯ | ಗುಮ್ಮಕುಂಬ್ರಿ | ೨ | ೨ | ೪ |
| ೩೦ | ಹಡ್ಲಿಗೇರಿ | ೧೨ | ೧೧ | ೨೩ |
| ೩೧ | ಹಲಸಿನಕೊಪ್ಪ | ೩ | ೪ | ೭ |
| ೩೨ | ಹಳ್ಳಿಗದ್ದೆ | ೪೪ | ೩೮ | ೮೨ |
| ೩೩ | ಹಂಸನಗದ್ದೆ | ೧೩ | ೧೨ | ೨೫ |
| ೩೪ | ಹರಿಗದ್ದೆ | ೫೧ | ೪೧ | ೯೨ |
| ೩೫ | ಹಸೆಕಳ್ಳ | ೨೩ | ೧೯ | ೪೨ |
| ೩೬ | ಹೆಡ್ಡಳ್ಳಿ | ೨ | ೧ | ೩ |

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೩೭ | ಹೆಗ್ಗುಂಜ್ಜಿ | ೧೨ | ೯ | ೨೧ |
| ೩೮ | ಹಿತ್ಲಳ್ಳಿ | ೩ | ೪ | ೭ |
| ೩೯ | ಹೊಳೆಮಡು | ೨ | ೨ | ೪ |
| ೪೦ | ಹೊನ್ನಾಳಿ | ೨೯ | ೨೪ | ೫೩ |
| ೪೧ | ಹೊಸಳ್ಳಿ | ೧೨ | ೮ | ೨೦ |
| ೪೨ | ಹುಳಸೆಮನಿ | ೧೨ | ೧೦ | ೨೨ |
| ೪೩ | ಹುಣಶೆಟ್ಟಿಕೊಪ್ಪ | ೧ | ೨ | ೩ |
| ೪೪ | ಹುಟುಕಮನೆ | ೧೬ | ೧೫ | ೩೧ |
| ೪೫ | ಹುಟ್ವಂದ | ೩ | ೩ | ೬ |
| ೪೬ | ಹಿಡಗುಂದಿ | ೧೨ | ೭ | ೧೯ |
| ೪೭ | ಜಡಗಿನಕೊಪ್ಪ | ೨೪ | ೨೫ | ೪೯ |
| ೪೮ | ಜಡ್ಡಿಗದ್ದೆ | ೧೮ | ೧೬ | ೩೪ |
| ೪೯ | ಜಗರಮನೆ | ೧೦ | ೭ | ೧೭ |
| ೫೦ | ಜಕ್ಕೋಳಿ | ೯ | ೮ | ೧೭ |
| ೫೧ | ಜರಗಳ್ಳ | ೩ | ೨ | ೫ |
| ೫೨ | ಜಕಾಳಿ | ೫ | ೩ | ೮ |
| ೫೩ | ಜೋಗದಮನೆ | ೬ | ೫ | ೧೧ |
| ೫೪ | ಕಾಗರಕೊಡ್ಲು | ೯ | ೫ | ೧೪ |
| ೫೫ | ಕಾಳಮ್ಮನಗರ | ೧೩ | ೧೯ | ೩೨ |
| ೫೬ | ಕಳಸೆ | ೩೧ | ೪೩ | ೭೪ |
| ೫೭ | ಕಣದಾಳ | ೫೮ | ೭೧ | ೧೨೯ |
| ೫೮ | ಕಣ್ಣಿಗೇರಿ | ೨೦ | ೧೭ | ೩೭ |
| ೫೯ | ಕಾಕನಕುಂಜ್ಜಿ | ೧೨ | ೮ | ೨೦ |
| ೬೦ | ಕರೆಪ್ಪನಗುಡಿ | ೫ | ೮ | ೧೩ |
| ೬೧ | ಕಾಸಿಕೆಜಡ್ಡಿ | ೬ | ೫ | ೧೧ |
| ೬೨ | ಕೆರೆಹೊಸಳ್ಳಿ | ೪೮ | ೪೭ | ೯೫ |
| ೬೩ | ಕಾಸಿನಪ್ಪಜಡಿ | ೫ | ೩ | ೮ |
| ೬೪ | ಕಿರುವತ್ತಿ | ೧೦೧ | ೧೨೧ | ೨೨೨ |
| ೬೫ | ಕೋಡಿಗೆ | ೩೦ | ೧೭ | ೪೭ |

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೬೬ | ಕೋಟೆಮನೆ | ೬ | ೪ | ೧೦ |
| ೬೭ | ಕುಂದೂರು | ೬ | ೩ | ೯ |
| ೬೮ | ಕುಂಟಗೇಣಿ | ೭ | ೬ | ೧೩ |
| ೬೯ | ಲಾಲಗುಳಿ | ೫೨ | ೪೯ | ೧೦೧ |
| ೭೦ | ಲಿಂಗದಬೈಲ್ | ೨೯ | ೩೦ | ೫೯ |
| ೭೧ | ಮದನಸರ | ೯ | ೧೪ | ೨೩ |
| ೭೨ | ಮದುವಲಕೇರಿ | ೮ | ೮ | ೧೬ |
| ೭೩ | ಮಾದನೂರು | ೬೫ | ೬೮ | ೧೩೩ |
| ೭೪ | ಮಾಗೋಡು | ೭೦ | ೫೭ | ೧೨೭ |
| ೭೫ | ಮಮ್ಮನಹಳ್ಳಿ | ೬ | ೫ | ೧೧ |
| ೭೬ | ಮಂಚಿಕೇರಿ | ೧೫ | ೯ | ೨೪ |
| ೭೭ | ಮಾವನಕಟ್ಟೆ | ೮ | ೯ | ೧೭ |
| ೭೮ | ಮೋಡಣಗಿ | ೬೨ | ೫೫ | ೧೧೭ |
| ೭೯ | ನಾಡೊಳ್ಳಿ | ೧೩ | ೧೦ | ೨೩ |
| ೮೦ | ನಂದಿಬಾವಿ | ೨೪ | ೧೯ | ೪೩ |
| ೮೧ | ನವಣೆ | | ೧ | ೧ |
| ೮೨ | ಒನಿಕೆಮನೆ | ೭ | ೬ | ೧೩ |
| ೮೩ | ಪ.ಪಂ.ಯಲ್ಲಾಪುರ | ೧೨ | ೧೨ | ೨೪ |
| ೮೪ | ಪುರ್ಲೇಮನೆ | ೬ | ೪ | ೧೦ |
| ೮೫ | ಸಂಡೆಬೈಲ್ | ೨ | ೨ | ೪ |
| ೮೬ | ಸರಗದ್ದೆ | ೮ | ೪ | ೧೨ |
| ೮೭ | ಸವಣೆ | ೧೪ | ೧೨ | ೨೬ |
| ೮೮ | ಸಿರನಾಳ್ | ೧೨ | ೧೧ | ೨೩ |
| ೮೯ | ಸಿರಲೆ | ೬ | ೧೧ | ೧೭ |
| ೯೦ | ಸುಳಗಾರ್ | ೪ | ೪ | ೮ |
| ೯೧ | ಸುಣ್ಣಗೋಗ | ೧೩ | ೧೧ | ೨೪ |
| ೯೨ | ಸುರಬೈಲು | ೧೦ | ೮ | ೧೮ |
| ೯೩ | ತಾಳಿಕುಂಬ್ರಿ | ೧೧ | ೧೩ | ೨೪ |
| ೯೪ | ತೂಕದಬೈಲ್ | ೯ | ೮ | ೧೭ |

| ಕ್ರ.ಸಂ. | ಗ್ರಾಮ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೯೫ | ಉಚ್ಚಗೇರಿ | ೪ | ೭ | ೧೧ |
| ೯೬ | ಉಳ್ಳರಮನೆ | ೨೫ | ೨೧ | ೪೬ |
| ೯೭ | ವಣಕೆಮನೆ | ೩ | ೫ | ೮ |
| ೯೮ | ವಿದ್ಯಾನಗರ | ೧ | ೧ | ೨ |
| ೯೯ | ತೋಟಕಟ್ಟ | ೩೧ | ೨೯ | ೬೦ |
| ೧೦೦ | ತೋಟದಕಲ್ಲಳ್ಳಿ | ೪ | ೨ | ೬ |
| ೧೦೧ | ತೊಟ್ಟಿಲಗುಂಡಿ | ೪೨ | ೪೩ | ೮೫ |
| | ಒಟ್ಟು | ೧೭೬೮ | ೧೭೦೫ | ೩೪೭೩ |

## ಕಾರವಾರ ಜಿಲ್ಲೆಯ ತಾಲೂಕವಾರು ಜನಸಂಖ್ಯೆ

| ಕ್ರ.ಸಂ. | ತಾಲೂಕು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಂಕೋಲ | ೩೯೮ | ೩೭೮ | ೭೭೬ |
| ೨ | ಹಳಿಯಾಳ | ೧೯೪೨ | ೧೭೯೧ | ೩೭೩೩ |
| ೩ | ಜೋಯಿಡಾ | ೨೪ | ೨೪ | ೪೮ |
| ೪ | ಕಾರವಾರ | ೧೯ | ೧೩ | ೩೨ |
| ೫ | ಮುಂಡಗೋಡ | ೨೬೩ | ೨೩೧ | ೪೯೪ |
| ೬ | ಶಿರಸಿ | ೧೨೯ | ೧೩೩ | ೨೬೨ |
| ೭ | ಯಲ್ಲಾಪುರ | ೧೭೬೮ | ೧೭೦೫ | ೩೪೭೩ |
| | ಒಟ್ಟು | ೪೫೪೩ | ೪೨೭೫ | ೮೮೧೮ |

# ಅಂಕಿ ಅಂಶಗಳ ಪಟ್ಟಿ – ೨

## ಕಾರವಾರ ಜಿಲ್ಲೆಯ ತಾಲೂಕುವಾರು ಗ್ರಾಮಗಳ ಮಾತೃಭಾಷೆಯ ವಿವರ

### ಅಂಕೋಲ ತಾಲೂಕು

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೧ | ಅಚಾವೆ | – | – | ೧೬ | – | – | – | ೧೬ |
| ೨ | ಅಂಗಡಿಬೈಲ್ | – | – | ೯ | – | – | – | ೯ |
| ೩ | ದೊಡ್ಡಕಟ್ಟೆ | ೧ | – | ೫ | – | – | – | ೬ |
| ೪ | ಡೊಂಗ್ರಿ | ೨ | – | ೨೬ | – | – | – | ೨೮ |
| ೫ | ಹಳವಳ್ಳಿ | – | – | ೬೭ | – | – | – | ೬೭ |
| ೬ | ಹಿಗ್ಗಾರ | – | – | ೪ | – | – | – | ೪ |
| ೭ | ಕೈಗಡಿ | – | – | ೪ | – | – | – | ೪ |
| ೮ | ಕಲ್ಲೇಶ್ವರ | – | – | ೨೩ | – | – | – | ೨೩ |
| ೯ | ಕಮ್ಮಾಣಿ | – | – | ೨೦ | – | – | – | ೨೦ |
| ೧೦ | ಕೊಡ್ಲಿಗದ್ದೆ | – | – | ೧೩ | – | – | – | ೧೩ |
| ೧೧ | ರೋನಾಳ್ | – | – | ೧ | – | – | – | ೧ |
| ೧೨ | ಸೋರಕರ್ | – | – | ೩ | – | – | – | ೩ |
| ೧೩ | ಸುಕಸಾಲ್ | – | – | ೩ | – | – | – | ೩ |
| ೧೪ | ವಂಡರಮನೆ | – | – | ೧ | – | – | – | ೧ |
|  | ಒಟ್ಟು | ೩ | ೦ | ೧೯೫ | ೦ | ೦ | ೦ | ೧೯೮ |

### ಮುಂಡಗೋಡ ತಾಲೂಕು

| ೧ | ಬಸರೆಜಡ್ಡಿ | – | – | ೧೪ | – | – | – | ೧೪ |
|---|---|---|---|---|---|---|---|---|
| ೨ | ಕೆಂದಿಲ್‌ಗೇರಿ | – | – | – | – | – | ೭೨ | ೭೨ |
| ೩ | ಉಗ್ಗಿನಕೇರಿ | – | – | ೨೦ | – | – | – | ೨೦ |
|  | ಒಟ್ಟು | ೦ | ೦ | ೩೪ | ೦ | ೦ | ೭೨ | ೧೦೬ |

### ಕಾರವಾರ ತಾಲೂಕು

| ೧ | ಕಾಸಿರವಾಡ | – | – | ೬ | ೧ | – | – | ೭ |
|---|---|---|---|---|---|---|---|---|
|  | ಒಟ್ಟು | ೦ | ೦ | ೬ | ೧ | ೦ | ೦ | ೭ |

## ಜೋಯಿಡಾ ತಾಲೂಕು

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೧ | ಇರನೊಳ್ಳಿ | – | – | ೧೨ | – | – | – | ೧೨ |
| | ಒಟ್ಟು | ೦ | ೦ | ೧೨ | ೦ | ೦ | ೦ | ೧೨ |

## ಸಿರಸಿ ತಾಲೂಕು

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೧ | ದೇವನಹಳ್ಳಿ | – | – | ೬ | – | – | – | ೬ |
| ೨ | ಹಗರಿಮನೆ | – | – | ೧೦ | – | – | – | ೧೦ |
| ೩ | ಕಕ್ಕಳ್ಳಿ | – | – | ೧೦ | – | – | – | ೧೦ |
| ೪ | ಕೆಳಗಿನಕೇರಿ | – | – | ೧೩ | – | – | – | ೧೩ |
| ೫ | ಮತ್ತಿಗಟ್ಟ | – | – | ೧ | – | – | – | ೧ |
| ೬ | ಸಿರಗಾವೆ | – | – | ೪ | – | – | – | ೪ |
| ೭ | ವಾನಹಳ್ಳಿ | – | – | ೨೩ | – | – | – | ೨೩ |
| | ಒಟ್ಟು | ೦ | ೦ | ೬೭ | ೦ | ೦ | ೦ | ೬೭ |

## ಹಳಿಯಾಳ ತಾಲೂಕು

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೧ | ಅಡಕೆ ಹೊಸೂರು | – | – | – | – | – | ೫೬ | ೫೬ |
| ೨ | ಅಗಸಲಕಟ್ಟಾ | – | – | ೪ | – | – | ೭ | ೧೧ |
| ೩ | ಅಜಗರ | – | – | – | – | – | ೨ | ೨ |
| ೪ | ಆಲೂರು | – | – | – | ೪ | – | – | ೪ |
| ೫ | ಬಾಳಶೆಟ್ಟಿಕೊಪ್ಪ | – | – | ೧೨ | ೮ | – | – | ೨೦ |
| ೬ | ಭಾಗವತಿ | – | – | ೧೩ | ೨ | – | ೮೪ | ೯೯ |
| ೭ | ಬಿದರೊಳ್ಳಿ | – | – | – | ೬ | – | – | ೬ |
| ೮ | ಬೊಮ್ಮನಹಳ್ಳಿ | – | – | – | – | – | ೧೬ | ೧೬ |
| ೯ | ದೊಡ್ಡಕೊಪ್ಪ | – | – | – | ೯ | – | – | ೯ |
| ೧೦ | ಗದಗೇರಾ | – | – | – | ೨೭ | – | – | ೨೭ |
| ೧೧ | ಗರಡೊಳ್ಳಿ | – | – | – | ೭೧ | – | – | ೭೧ |
| ೧೨ | ಗೊಲೆಹಳ್ಳಿ | – | – | – | – | – | ೫೪ | ೫೪ |
| ೧೩ | ಗುತ್ತಿಬೈಲ್ | – | – | – | – | – | ೧೦ | ೧೦ |
| ೧೪ | ಹಳಿಯಾಳ | – | – | ೧ | ೧ | – | – | ೨ |
| ೧೫ | ಹೊಸೂರು | – | – | ೧ | – | – | ೧೯ | ೨೦ |

| ಕ್ರಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೧೬ | ಜನಗ | – | – | – | – | – | ೬ | ೬ |
| ೧೭ | ಜತಗಾ | – | – | – | – | – | ೨೧ | ೨೧ |
| ೧೮ | ಜತಗಾ ಹೊಸೂರು | – | – | – | ೧೭ | – | – | ೧೭ |
| ೧೯ | ಕಾಮತಿಕೊಪ್ಪ | – | – | – | ೩೩ | – | – | ೩೩ |
| ೨೦ | ಕೆಗದಾಳ | – | – | ೨೮ | – | – | – | ೨೮ |
| ೨೧ | ಕಾಮದೊಳ್ಳಿ | – | – | – | ೨ | – | – | ೨ |
| ೨೨ | ಕುಂಬಾರಕೊಪ್ಪ | – | – | – | ೧ | – | – | ೧ |
| ೨೩ | ಮೂಡಲಿಗೇರ | – | – | – | ೧ | – | – | ೧ |
| ೨೪ | ಎನ್.ಎಸ್.ಕೊಪ್ಪ | – | – | ೨೩ | – | – | ೧ | ೨೪ |
| ೨೫ | ಪಂಡರವಾಳ | – | – | – | – | – | ೯ | ೯ |
| ೨೬ | ರಾಂಪುರ | – | – | – | ೮ | – | – | ೮ |
| ೨೭ | ರಾಯಪಟ್ಟಣ | – | – | – | ೪ | – | – | ೪ |
| ೨೮ | ಸಾಂಬ್ರಾಣಿ | – | – | ೨೧ | ೧೬ | – | ೪೩ | ೮೦ |
| ೨೯ | ಸಿದ್ದಾಪುರ | – | – | – | ೨ | – | – | ೨ |
| ೩೦ | ತಟ್ಟಿಗೇರಿ | – | ೨ | – | – | – | ೧೧೪ | ೧೧೬ |
| ೩೧ | ತಾವರಕಟ್ಟ | – | – | ೨೮ | – | – | ೨ | ೩೦ |
| ೩೨ | ತೆಗ್ಗಳ್ಳಿ | – | – | – | – | – | ೧೫ | ೧೫ |
| ೩೩ | ತತ್ವಣಗಿ | – | – | ೧೪ | – | – | ೫೦ | ೬೪ |
| ೩೪ | ವಾಡಾ | – | – | ೧೦ | ೩೫ | – | – | ೪೫ |
|  | ಒಟ್ಟು | ೦ | ೨ | ೧೫೫ | ೨೪೭ | ೦ | ೫೦೯ | ೯೧೩ |

**ಯಲ್ಲಾಪುರ ತಾಲೂಕು**

| | | | | | | | | |
|---|---|---|---|---|---|---|---|---|
| ೧ | ಅಂಬಗಾಂವ್ | – | – | ೭ | – | – | – | ೭ |
| ೨ | ಅಂಗೋಡ | – | – | ೧ | – | – | – | ೧ |
| ೩ | ಅಂದ್ರಳ್ಳಿ | – | – | ೯ | – | – | – | ೯ |
| ೪ | ಅರಬೈಲ್ | – | – | ೧೭ | – | – | – | ೧೭ |
| ೫ | ಬೈಲಂದೂರು | – | – | ೨ | – | – | ೪೦ | ೪೨ |
| ೬ | ಬಳಗಾರ | ೧೨ | – | – | – | – | – | ೧೨ |
| ೭ | ಬಳಗಿಮನೆ | ೧ | – | – | – | – | – | ೧ |

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೮ | ಬಳಕಿ | – | – | ೧ | – | – | – | ೧ |
| ೯ | ಬೆದ್ದನಹೆಕ್ಲು | – | – | ೩ | – | – | – | ೩ |
| ೧೦ | ಬೆಳಕೋಡ್ | – | – | ೧ | – | – | – | ೧ |
| ೧೧ | ಬೆಳಕೊಪ್ಪ | – | – | ೪ | – | – | – | ೪ |
| ೧೨ | ಬೆಳ್ಳಂಬಿ | ೨ | – | ೮ | – | – | – | ೧೦ |
| ೧೩ | ಬೆಂಡಿಗೇರಿ | – | – | ೧ | – | – | – | ೧ |
| ೧೪ | ಬಾನಹಳ್ಳಿ | – | – | ೧೫ | – | – | – | ೧೫ |
| ೧೫ | ಭರಣಿ | – | – | ೧೧ | – | – | – | ೧೧ |
| ೧೬ | ಭರತನಹಳ್ಳಿ | – | – | ೬ | – | – | – | ೬ |
| ೧೭ | ಬೀಗಾರ | ೪ | – | ೧ | – | – | – | ೫ |
| ೧೮ | ಬಿಕ್ಕಬಿಳ್ಳಿ | – | – | ೧ | – | – | – | ೧ |
| ೧೯ | ಬಿಳಕಿ | – | – | ೨೭ | – | – | – | ೨೭ |
| ೨೦ | ಬಿಂಬನಹಳ್ಳಿ | – | – | ೫ | – | – | – | ೫ |
| ೨೧ | ಬೋರಿನೊಂದ | – | – | ೪ | – | – | – | ೪ |
| ೨೨ | ಚಂದುಗುಳಿ | – | – | ೧೦ | – | – | – | ೧೦ |
| ೨೩ | ಚಿಕ್ಕುಮನೆ | – | – | ೮ | – | – | – | ೮ |
| ೨೪ | ದೇವರಕಲ್ಲಹಳ್ಳಿ | – | – | ೫ | – | – | – | ೫ |
| ೨೫ | ದೇವಿಸರ | – | – | ೨ | – | – | – | ೨ |
| ೨೬ | ಗೊಟಕೋಳ | – | – | ೪ | – | – | – | ೪ |
| ೨೭ | ಗುಡಂದೂರು | – | – | – | – | – | ೨೫ | ೨೫ |
| ೨೮ | ಗುಳ್ಳಾಪುರ | – | – | ೩೩ | – | – | – | ೩೩ |
| ೨೯ | ಗುಮ್ಸೆಕುಂಬ್ರಿ | ೧ | – | – | – | – | – | ೧ |
| ೩೦ | ಹಡ್ಲಿಗೇರಿ | – | – | ೭ | – | – | – | ೭ |
| ೩೧ | ಹಲಸಿನಕೊಪ್ಪ | – | – | ೨ | – | – | – | ೨ |
| ೩೨ | ಹಳ್ಳಿಗದ್ದೆ | – | ೧೭ | – | – | – | – | ೧೭ |
| ೩೩ | ಹಂಸನಗದ್ದೆ | ೬ | – | ೧ | – | – | – | ೭ |
| ೩೪ | ಹರಿಗದ್ದೆ | – | – | ೨೮ | – | – | – | ೨೮ |
| ೩೫ | ಹಸೆಕಳ್ಳ | – | – | ೧೨ | – | – | – | ೧೨ |
| ೩೬ | ಹೆಡ್ಡಳ್ಳಿ | – | – | ೧ | – | – | – | ೧ |

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೩೭ | ಹೆಗ್ಗುಂಬ್ಳಿ | – | – | ೬ | – | – | – | ೬ |
| ೩೮ | ಹಿತ್ಲಳ್ಳಿ | – | – | ೨ | – | – | – | ೨ |
| ೩೯ | ಹೊಳೆಮಡು | – | – | ೧ | – | – | – | ೧ |
| ೪೦ | ಹೊನ್ನಾಳಿ | – | – | ೧೭ | – | – | – | ೧೭ |
| ೪೧ | ಹೊಸಳ್ಳಿ | – | – | ೫ | – | – | – | ೫ |
| ೪೨ | ಹುಳಸೆಮನಿ | – | – | ೬ | – | – | – | ೬ |
| ೪೩ | ಹುಣಶೆಟ್ಟಿಕೊಪ್ಪ | – | – | ೧ | – | – | – | ೧ |
| ೪೪ | ಹುಟುಕಮನೆ | ೩ | – | ೯ | – | – | – | ೧೨ |
| ೪೫ | ಹುಟ್ಗಂದ | – | – | ೧ | – | – | – | ೧ |
| ೪೬ | ಹಿಡಗುಂದಿ | – | – | ೫ | – | – | – | ೫ |
| ೪೭ | ಜಡಗಿನಕೊಪ್ಪ | – | – | ೧೩ | – | – | – | ೧೩ |
| ೪೮ | ಜಡ್ಡಿಗದ್ದೆ | – | – | ೮ | – | – | – | ೮ |
| ೪೯ | ಜಗರಮನೆ | – | – | ೫ | – | – | – | ೫ |
| ೫೦ | ಜಕ್ಕೋಳಿ | – | – | ೫ | – | – | – | ೫ |
| ೫೧ | ಜರಗಳ್ಳ | – | – | ೨ | – | – | – | ೨ |
| ೫೨ | ಜಕಾಳಿ | – | – | ೩ | – | – | – | ೩ |
| ೫೩ | ಜೋಗದಮನೆ | – | – | ೪ | – | – | – | ೪ |
| ೫೪ | ಕಾಗರಕೊಡ್ಲು | – | – | ೪ | – | – | – | ೪ |
| ೫೫ | ಕಾಳಮ್ಮನಗರ | – | – | ೭ | – | – | – | ೭ |
| ೫೬ | ಕಳಸೆ | ೧೧ | – | ೫ | – | – | – | ೧೬ |
| ೫೭ | ಕಣದಾಳ | – | – | ೨೦ | – | ೨೦ | – | ೪೦ |
| ೫೮ | ಕಣ್ಣಿಗೇರಿ | – | – | ೨೦ | – | – | – | ೨೦ |
| ೫೯ | ಕಾಕನಕುಂಬ್ರಿ | ೨ | – | ೩ | – | – | – | ೫ |
| ೬೦ | ಕರೆವ್ವನಗುಡಿ | – | – | ೪ | – | – | – | ೪ |
| ೬೧ | ಕಾಸಿಕಜಡ್ಡಿ | – | – | ೩ | – | – | – | ೩ |
| ೬೨ | ಕೆರೆಹೊಸಳ್ಳಿ | – | ೧ | ೨೭ | – | – | – | ೨೮ |
| ೬೩ | ಕಾಸಿನಪ್ಪಜಡಿ | – | – | ೩ | – | – | – | ೩ |
| ೬೪ | ಕಿರುವತ್ತಿ | – | – | ೪೧ | – | – | ೨೯ | ೭೦ |
| ೬೫ | ಕೋಡಿಗೆ | ೧೦ | – | – | – | – | – | ೧೦ |

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೬೬ | ಕೋಟೆಮನೆ | – | – | ೧ | – | – | – | ೧ |
| ೬೭ | ಕುಂದೂರು | – | – | ೨ | – | – | – | ೨ |
| ೬೮ | ಕುಂಟಗೇಣಿ | – | – | ೪ | – | – | – | ೪ |
| ೬೯ | ಲಾಲಗುಳಿ | – | – | ೧೬ | – | ೫ | – | ೨೧ |
| ೭೦ | ಲಿಂಗದಬೈಲ್ | ೧೭ | – | ೧ | – | – | – | ೧೮ |
| ೭೧ | ಮದನಸರ | – | – | ೮ | – | – | – | ೮ |
| ೭೨ | ಮದುವಲಕೇರಿ | – | – | ೪ | – | – | – | ೪ |
| ೭೩ | ಮಾದನೂರು | – | – | ೨೫ | – | – | ೯ | ೩೪ |
| ೭೪ | ಮಾಗೋಡು | – | – | ೩೧ | – | – | – | ೩೧ |
| ೭೫ | ಮಮ್ಮನಹಳ್ಳಿ | – | – | ೪ | – | – | – | ೪ |
| ೭೬ | ಮಂಚಿಕೇರಿ | – | – | ೮ | – | – | – | ೮ |
| ೭೭ | ಮಾವನಕಟ್ಟೆ | – | – | ೭ | – | – | – | ೭ |
| ೭೮ | ಮೋಡಣಗಿ | – | – | ೩೭ | – | – | – | ೩೭ |
| ೭೯ | ನಾಡೊಳ್ಳಿ | – | – | ೬ | – | – | – | ೬ |
| ೮೦ | ನಂದಿಬಾವಿ | – | – | ೧೨ | – | – | – | ೧೨ |
| ೮೧ | ನವಣೆ | – | – | ೧ | – | – | – | ೧ |
| ೮೨ | ಒನಿಕೆಮನೆ | – | – | ೪ | – | – | – | ೪ |
| ೮೩ | ಪ.ಪಂ.ಯಲ್ಲಾಪುರ | – | – | ೪ | – | – | ೩ | ೭ |
| ೮೪ | ಪುರ್ಲೇಮನೆ | – | – | ೩ | – | – | – | ೩ |
| ೮೫ | ಸಂಡೆಬೈಲ್ | ೧ | – | – | – | – | – | ೧ |
| ೮೬ | ಸರಗದ್ದೆ | – | – | ೪ | – | – | – | ೪ |
| ೮೭ | ಸವಣೆ | – | – | ೭ | – | – | – | ೭ |
| ೮೮ | ಸಿರನಾಳ್ | ೪ | – | ೩ | – | – | – | ೭ |
| ೮೯ | ಸಿರಲೆ | – | – | ೩ | – | – | – | ೩ |
| ೯೦ | ಸುಳಗಾರ್ | – | – | ೨ | – | – | – | ೨ |
| ೯೧ | ಸುಣ್ಣಗೋಗ | – | ೪ | ೨ | – | – | – | ೬ |
| ೯೨ | ಸುರಬೈಲು | – | – | ೫ | – | – | – | ೫ |
| ೯೩ | ತಾಳಿಕುಂಬ್ರಿ | – | – | ೬ | – | – | – | ೬ |
| ೯೪ | ತೂಕದಬೈಲ್ | – | – | ೪ | – | – | – | ೪ |

| ಕ್ರ.ಸಂ. | ಗ್ರಾಮ | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೯೫ | ಉಚ್ಚಗೇರಿ | – | – | ೧೦ | – | – | – | ೧೦ |
| ೯೬ | ಉಳ್ಳರಮನೆ | – | – | ೧೨ | – | – | – | ೧೨ |
| ೯೭ | ವಣಕೆಮನೆ | – | – | ౩ | – | – | – | ౩ |
| ೯೮ | ವಿದ್ಯಾನಗರ | – | – | ೧ | – | – | – | ೧ |
| ೯೯ | ತೋಟಕಟ್ಟ | – | – | ೧೬ | – | – | – | ೧೬ |
| ೧೦೦ | ತೋಟದಕಲ್ಲಳ್ಳಿ | – | – | ೨ | – | – | – | ೨ |
| ೧೦೧ | ತೊಟ್ಟಿಲಗುಂಡಿ | – | – | ೨೩ | – | – | – | ೨೩ |
| | ಒಟ್ಟು | ೭೪ | ೨೨ | ೭೪೮ | ೦ | ೨೫ | ೧೦೬ | ೯೭೫ |

## ಕಾರವಾರ ಜಿಲ್ಲೆಯ ತಾಲೂಕವಾರು ಮಾತೃಭಾಷೆಯ ವಿವರ

| ಕ್ರ.ಸಂ. | ತಾಲೂಕು | ಕನ್ನಡ | ಹಿಂದಿ | ಕೊಂಕಣಿ | ಮರಾಠಿ | ಸಿದ್ದಿ | ಉರ್ದು | ಒಟ್ಟು |
|---|---|---|---|---|---|---|---|---|
| ೧ | ಅಂಕೋಲ | ౩ | ೨ | ೧೯೫ | – | – | – | ೨೦೦ |
| ೨ | ಹಳಿಯಾಳ | – | – | ೧೫೫ | ೨೪೭ | – | ೫೦೯ | ೯೧೧ |
| ౩ | ಜೋಯಿಡಾ | – | – | ೧೨ | – | – | – | ೧೨ |
| ೪ | ಕಾರವಾರ | – | – | ೬ | ೧ | – | – | ೭ |
| ೫ | ಮುಂಡಗೋಡ | – | – | ౩೪ | – | – | ೭೨ | ೧೦೬ |
| ೬ | ಶಿರಸಿ | – | – | ೬೭ | – | – | – | ೬೭ |
| ೭ | ಯಲ್ಲಾಪುರ | ೭೪ | ೨೨ | ೭೪೮ | – | ೨೫ | ೧೦೬ | ೯೭೫ |
| | ಒಟ್ಟು | ೭೭ | ೨೪ | ೧೨೧೭ | ೨೪೮ | ೨೫ | ೬೮೭ | ೨೨೭೮ |

# ಅಂಕಿ ಅಂಶಗಳ ಪಟ್ಟಿ – ೩

## ಕಾರವಾರ ಜಿಲ್ಲೆಯ ತಾಲೂಕುವಾರು ಗ್ರಾಮಗಳ ಮನೆಗಳ ಮಾದರಿಯ ವಿವರ

### ಅಂಕೋಲ ತಾಲೂಕು

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಅಚಾವೆ | – | ೭ | – | – | – | ೬ | ೯ | – |
| ೨ | ಅಂಗಡಿಬೈಲ್ | – | ೪ | – | – | – | ೪ | ೫ | – |
| ೩ | ದೊಡ್ಡಕಟ್ಟೆ | – | ೧ | – | – | – | ೨ | ೩ | – |
| ೪ | ಡೊಂಗ್ರಿ | – | ೧೪ | – | – | – | ೫ | ೮ | – |
| ೫ | ಹಳವಳ್ಳಿ | – | ೩೫ | – | – | – | ೧೬ | ೨೪ | – |
| ೬ | ಹಿಗ್ಗಾರ | – | – | – | – | – | – | ೪ | – |
| ೭ | ಕೈಗಡಿ | – | ೧ | – | – | – | – | – | – |
| ೮ | ಕಲ್ಲೇಶ್ವರ | – | ೧೧ | – | – | – | ೬ | ೬ | – |
| ೯ | ಕಮ್ಮಾಣಿ | – | ೬ | – | – | – | ೭ | ೬ | – |
| ೧೦ | ಕೊಡ್ಲಿಗದ್ದೆ | – | ೩ | – | – | – | ೩ | ೮ | – |
| ೧೧ | ರೋನಾಳ್ | – | ೧ | – | – | – | – | – | – |
| ೧೨ | ಸೋರಕರ್ | – | ೨ | – | – | – | ೧ | – | – |
| ೧೩ | ಸುಕಸಾಲ್ | – | ೧ | – | – | – | ೧ | ೧ | ೧ |
| ೧೪ | ವಂಡರಮನೆ | – | ೧ | – | – | – | – | – | – |
|  | ಒಟ್ಟು | ೭ | ೮೭ | ೦ | ೦ | ೦ | ೫೧ | ೭೪ | ೧ |

### ಮುಂಡಗೋಡ ತಾಲೂಕು

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಬಸರೆಜಡ್ಡಿ | – | ೩ | – | – | – | ೧೧ | ೧ | – |
| ೨ | ಕೆಂದಿಲ್‌ಗೇರಿ | – | ೪ | – | – | – | ೨೩ | ೪೪ | ೧ |
| ೩ | ಉಗ್ಗಿನಕೇರಿ | – | ೨ | – | – | – | ೧೭ | – | – |
|  | ಒಟ್ಟು |  | ೯ |  |  |  | ೫೧ | ೪೫ | ೧ |

### ಕಾರವಾರ ತಾಲೂಕು

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಕಾಸಿರವಾಡ | – | – | – | – | – | ೨ | ೫ | – |
|  | ಒಟ್ಟು | – | – | – | – | – | ೨ | ೫ | – |

**ಜೋಯಿಡಾ ತಾಲೂಕು**

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಇರನೊಳ್ಳಿ | – | ೩ | – | – | – | ೨ | ೭ | – |
| | ಒಟ್ಟು | – | ೩ | – | – | – | ೨ | ೭ | – |

**ಶಿರಸಿ ತಾಲೂಕು**

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ದೇವನಹಳ್ಳಿ | – | ೨ | – | – | – | ೪ | ೨ | – |
| ೨ | ಹಗರಿಮನೆ | – | – | – | – | – | ೧೦ | ೧೦ | – |
| ೩ | ಕಕ್ಕಳ್ಳಿ | – | – | – | – | – | ೭ | ೯ | – |
| ೪ | ಕೆಳಗಿನಕೇರಿ | – | – | – | – | – | ೩ | – | – |
| ೫ | ಮತ್ತಿಗಟ್ಟ | ೧ | – | – | – | – | – | – | – |
| ೬ | ಸಿರಗಾವೆ | ೧ | ೧ | – | – | – | ೨ | ೧ | – |
| ೭ | ವಾನಹಳ್ಳಿ | – | ೪ | – | – | – | ೧೮ | ೧೮ | – |
| | ಒಟ್ಟು | ೨ | ೭ | ೦ | ೦ | ೦ | ೪೪ | ೪೦ | ೦ |

**ಹಳಿಯಾಳ ತಾಲೂಕು**

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಅಡಕೆ ಹೊಸೂರು | – | – | – | – | – | ೯ | ೫೧ | – |
| ೨ | ಅಗಸಲಕಟ್ಟಾ | – | – | – | – | – | ೨ | ೯ | – |
| ೩ | ಅಜಗರ | – | – | – | – | – | ೧ | ೧ | – |
| ೪ | ಆಲೂರು | – | – | – | – | – | ೧ | ೩ | – |
| ೫ | ಬಾಳಶೆಟ್ಟಿಕೊಪ್ಪ | – | – | – | – | – | ೧೪ | ೧೫ | – |
| ೬ | ಭಾಗವತಿ | – | ೨ | – | – | – | ೮೬ | ೬೫ | ೬ |
| ೭ | ಬಿದರೊಳ್ಳಿ | – | – | – | – | – | ೧ | ೪ | – |
| ೮ | ಬೊಮ್ಮನಹಳ್ಳಿ | – | – | – | – | – | ೧೬ | ೧೧ | ೩ |
| ೯ | ದೊಡ್ಡಕೊಪ್ಪ | – | – | – | – | – | ೯ | ೬ | – |
| ೧೦ | ಗದಗೇರಾ | – | – | – | – | – | ೭ | ೨೦ | – |
| ೧೧ | ಗರಡೊಳ್ಳಿ | – | – | – | – | – | – | ೫೨ | – |
| ೧೨ | ಗೊಲೆಹಳ್ಳಿ | – | – | – | – | – | ೫೧ | ೫೨ | – |
| ೧೩ | ಗುತ್ತಿಬೈಲ್ | – | – | – | – | – | ೧೦ | ೮ | – |
| ೧೪ | ಹಳಿಯಾಳ | – | – | – | – | – | ೧ | ೧ | – |
| ೧೫ | ಹೊಸೂರು | – | – | – | – | – | ೨೦ | ೨೦ | – |

| ಕ್ರಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧೬ | ಜನಗ | – | – | – | – | – | ೬ | ೫ | – |
| ೧೭ | ಜತಗಾ | – | – | – | – | – | ೨೦ | ೨೧ | – |
| ೧೮ | ಜತಗಾ ಹೊಸೂರು | – | – | – | – | – | ೧೭ | ೧೬ | – |
| ೧೯ | ಕಾಮತಿಕೊಪ್ಪ | – | – | – | – | – | – | ೩೩ | – |
| ೨೦ | ಕೆಗದಾಳ | – | – | – | – | – | ೨೪ | ೧೬ | ೩ |
| ೨೧ | ಕಾಮದೊಳ್ಳಿ | – | – | – | – | – | – | ೨ | – |
| ೨೨ | ಕುಂಬಾರಕೊಪ್ಪ | – | – | – | – | – | – | ೧ | – |
| ೨೩ | ಮೂಡಲಿಗೇರ | – | – | – | – | – | ೧ | – | – |
| ೨೪ | ಎನ್.ಎಸ್.ಕೊಪ್ಪ | – | – | – | – | – | ೨೨ | ೧೮ | ೨ |
| ೨೫ | ಪಂಡರವಾಳ | – | – | – | – | – | – | ೯ | – |
| ೨೬ | ರಾಂಪುರ | – | – | – | – | – | ೧ | ೭ | – |
| ೨೭ | ರಾಯಪಟ್ಟಣ | – | – | – | – | – | – | ೩ | – |
| ೨೮ | ಸಾಂಬ್ರಾಣಿ | – | ೧೩ | – | – | – | ೪೩ | ೨೨ | ೨ |
| ೨೯ | ಸಿದ್ದಾಪುರ | – | – | – | – | – | ೧ | ೧ | – |
| ೩೦ | ತಟ್ಟಿಗೇರಿ | – | ೫ | – | – | – | ೮೮ | ೧೦೨ | ೪ |
| ೩೧ | ತಾವರಕಟ್ಟ | – | – | – | – | – | ೧೭ | ೧೩ | – |
| ೩೨ | ತೆಗ್ಗಳ್ಳಿ | – | – | – | – | – | ೧೫ | ೧೪ | – |
| ೩೩ | ತತ್ವಣಿಗಿ | – | – | – | – | – | ೫೫ | ೪೮ | ೮ |
| ೩೪ | ವಾಡಾ | – | – | – | – | – | ೧೫ | ೩೦ | – |
| | ಒಟ್ಟು | ೦ | ೨೦ | ೦ | ೦ | ೦ | ೫೫೩ | ೬೭೯ | ೨೮ |

**ಯಲ್ಲಾಪುರ ತಾಲೂಕು**

| ಕ್ರಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಅಂಬಗಾಂವ್ | – | ೪ | – | – | – | – | ೩ | – |
| ೨ | ಅಂಗೋಡ | ೧ | – | – | – | – | – | – | – |
| ೩ | ಅಂದ್ರಳ್ಳಿ | – | – | – | – | – | ೧ | ೧ | – |
| ೪ | ಅರಬೈಲ್ | – | ೯ | – | – | – | ೩ | ೩ | ೧ |
| ೫ | ಬೈಲಂದೂರು | – | ೩ | – | – | – | ೨ | ೩೭ | – |
| ೬ | ಬಳಗಾರ | – | – | – | – | – | ೩ | ೧೦ | ೧ |
| ೭ | ಬಳಗಿಮನೆ | – | – | – | – | – | ೧ | ೧ | – |

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೮ | ಬಳಕಿ | – | – | – | – | – | ೧ | – | – |
| ೯ | ಬೆದ್ದನಹೆಕ್ಲು | – | – | – | – | – | – | ೩ | – |
| ೧೦ | ಬೆಳಕೋಡ್ | – | ೧ | – | – | – | – | – | – |
| ೧೧ | ಬೆಳಕೊಪ್ಪ | – | ೧ | – | – | – | ೨ | ೧ | – |
| ೧೨ | ಬೆಳ್ಳಂಬಿ | – | – | – | – | – | ೬ | ೩ | – |
| ೧೩ | ಬೆಂಡಿಗೇರಿ | – | – | – | – | – | ೧ | – | – |
| ೧೪ | ಬಾನಹಳ್ಳಿ | – | ೩ | – | – | – | ೧೨ | – | – |
| ೧೫ | ಭರಣಿ | – | ೭ | – | – | – | – | ೪ | – |
| ೧೬ | ಭರತನಹಳ್ಳಿ | – | ೧ | – | – | – | – | ೫ | – |
| ೧೭ | ಬೀಗಾರ | – | – | – | – | – | – | ೫ | – |
| ೧೮ | ಬಿಕ್ಕಬಿಳ್ಳಿ | – | – | – | – | – | ೧ | – | – |
| ೧೯ | ಬಿಳಕಿ | – | ೮ | – | – | – | ೧೮ | ೧ | – |
| ೨೦ | ಬಿಂಬನಹಳ್ಳಿ | – | – | – | – | – | ೩ | ೨ | – |
| ೨೧ | ಬೋರಿನೊಂದ | – | – | – | – | – | – | ೪ | – |
| ೨೨ | ಚಂದುಗುಳಿ | – | ೪ | – | – | – | ೫ | ೧ | – |
| ೨೩ | ಚಿಕ್ಕುಮನೆ | – | ೨ | – | – | – | ೬ | ೩ | – |
| ೨೪ | ದೇವರಕಲ್ಲಹಳ್ಳಿ | – | ೧ | – | – | – | – | ೪ | – |
| ೨೫ | ದೇವಿಸರ | – | ೧ | – | – | – | ೧ | – | – |
| ೨೬ | ಗೊಟಕೋಳ | – | – | – | – | – | – | ೪ | – |
| ೨೭ | ಗುಡಂದೂರು | – | ೧ | – | – | – | ೨೪ | – | – |
| ೨೮ | ಗುಳ್ಳಾಪುರ | – | ೭ | – | – | – | ೧೩ | ೨೨ | – |
| ೨೯ | ಗುಮ್ಮೆಕುಂಬ್ರಿ | – | ೧ | – | – | – | – | – | – |
| ೩೦ | ಹಡ್ಲಿಗೇರಿ | – | – | – | – | – | ೧ | ೬ | – |
| ೩೧ | ಹಲಸಿನಕೊಪ್ಪ | – | – | – | – | – | ೨ | – | – |
| ೩೨ | ಹಳ್ಳಿಗದ್ದೆ | – | ೪ | – | – | – | ೨ | ೧೧ | – |
| ೩೩ | ಹಂಸನಗದ್ದೆ | – | ೩ | – | – | – | ೩ | ೨ | ೧ |
| ೩೪ | ಹರಿಗದ್ದೆ | – | ೧೫ | – | – | – | ೧೦ | ೩ | – |
| ೩೫ | ಹಸೆಕಳ್ಳ | – | ೬ | – | – | – | ೩ | ೩ | – |
| ೩೬ | ಹೆಡ್ಡಳ್ಳಿ | – | – | – | – | – | – | ೧ | – |

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೩೭ | ಹೆಗ್ಗುಂಬ್ಳಿ | – | ೪ | – | – | – | – | ೨ | – |
| ೩೮ | ಹಿತ್ಲಳ್ಳಿ | – | – | – | – | – | – | ೨ | – |
| ೩೯ | ಹೊಳೆಮಡು | – | ೧ | – | – | – | – | – | – |
| ೪೦ | ಹೊನ್ನಾಳಿ | – | ೬ | – | – | – | – | ೧೧ | – |
| ೪೧ | ಹೊಸಳ್ಳಿ | – | – | – | – | – | ೧ | ೩ | – |
| ೪೨ | ಹುಳಸೆಮನಿ | – | – | – | – | – | ೬ | ೩ | – |
| ೪೩ | ಹುಣಶೆಟ್ಟಿಕೊಪ್ಪ | – | – | – | – | – | – | ೧ | – |
| ೪೪ | ಹುಟುಕಮನೆ | – | ೯ | – | – | – | ೨ | ೧ | – |
| ೪೫ | ಹುಟ್ವಂದ | – | – | – | – | – | ೧ | – | – |
| ೪೬ | ಹಿಡಗುಂದಿ | – | ೪ | – | – | – | ೧ | – | – |
| ೪೭ | ಜಡಗಿನಕೊಪ್ಪ | – | ೨ | – | – | – | ೧೧ | – | – |
| ೪೮ | ಜಡ್ಡಿಗದ್ದೆ | – | – | – | – | – | ೭ | ೫ | – |
| ೪೯ | ಜಗರಮನೆ | – | – | – | – | – | ೪ | ೧ | – |
| ೫೦ | ಜಕ್ಕೋಳಿ | – | ೨ | – | – | – | ೧ | ೨ | – |
| ೫೧ | ಜರಗಳ್ಳ | – | – | – | – | – | ೨ | – | – |
| ೫೨ | ಜಕಾಳಿ | – | ೨ | – | – | – | ೧ | – | – |
| ೫೩ | ಜೋಗದಮನೆ | – | ೨ | – | – | – | ೨ | – | – |
| ೫೪ | ಕಾಗರಕೊಡ್ಲು | – | – | – | – | – | ೩ | – | – |
| ೫೫ | ಕಾಳಮ್ಮನಗರ | – | ೭ | – | – | – | – | – | – |
| ೫೬ | ಕಳಸೆ | – | – | – | – | – | ೧೪ | ೨ | – |
| ೫೭ | ಕಣದಾಳ | – | ೬ | – | – | – | ೧೦ | ೧೫ | – |
| ೫೮ | ಕಣ್ಣಿಗೇರಿ | – | ೩ | – | – | – | ೭ | ೩ | – |
| ೫೯ | ಕಾಕನಕುಂಬ್ರಿ | – | ೩ | – | – | – | ೧ | ೨ | – |
| ೬೦ | ಕರೆವ್ವನಗುಡಿ | – | – | – | – | – | – | ೪ | – |
| ೬೧ | ಕಾಸಿಕೆಜಡ್ಡಿ | – | – | – | – | – | ೨ | ೧ | – |
| ೬೨ | ಕೆರೆಹೊಸಳ್ಳಿ | – | ೫ | – | – | – | ೨೪ | ೧ | – |
| ೬೩ | ಕಾಸಿನಪ್ಪಜಡಿ | – | – | – | – | – | ೧ | ೨ | – |
| ೬೪ | ಕಿರುವತ್ತಿ | – | ೬ | – | – | – | ೧೨ | ೪೧ | ೭ |
| ೬೫ | ಕೋಡಿಗೆ | ೧ | ೪ | – | – | – | ೩ | ೧ | ೨ |

| ಕ್ರ ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೬೬ | ಕೋಟೆಮನೆ | – | ೧ | – | – | – | – | – | – |
| ೬೭ | ಕುಂದೂರು | – | – | – | – | – | – | ೨ | – |
| ೬೮ | ಕುಂಟಗೇಣಿ | – | ೨ | – | – | – | – | ೨ | – |
| ೬೯ | ಲಾಲಗುಳಿ | – | ೨ | – | – | – | ೮ | ೧೧ | – |
| ೭೦ | ಲಿಂಗದಬೈಲ್ | – | ೪ | – | – | – | ೧೦ | ೫ | ೧ |
| ೭೧ | ಮದನಸರ | – | – | – | – | – | ೫ | ೩ | – |
| ೭೨ | ಮದುವಲಕೇರಿ | – | – | – | – | – | – | ೪ | – |
| ೭೩ | ಮಾದನೂರು | – | – | – | – | – | ೪ | ೩೦ | – |
| ೭೪ | ಮಾಗೋಡು | – | ೧೫ | – | – | – | ೧೨ | ೪ | – |
| ೭೫ | ಮಮ್ಮನಹಳ್ಳಿ | – | – | – | – | – | ೪ | ೧ | – |
| ೭೬ | ಮಂಚಿಕೇರಿ | – | ೪ | – | – | – | ೨ | ೨ | – |
| ೭೭ | ಮಾವನಕಟ್ಟೆ | – | ೨ | – | – | – | – | ೪ | – |
| ೭೮ | ಮೋಡಣಗಿ | – | ೧೬ | – | – | – | ೨೦ | ೨ | – |
| ೭೯ | ನಾಡೊಳ್ಳಿ | – | ೨ | – | – | – | ೨ | ೨ | – |
| ೮೦ | ನಂದಿಬಾವಿ | – | ೩ | – | – | – | ೪ | ೩ | – |
| ೮೧ | ನವಣೆ | – | – | – | – | – | ೧ | – | – |
| ೮೨ | ಒನಿಕೆಮನೆ | – | ೧ | – | – | – | ೧ | ೨ | – |
| ೮೩ | ಪ.ಪಂ.ಯಲ್ಲಾಪುರ | – | ೪ | – | – | – | ೧ | ೧ | ೧ |
| ೮೪ | ಪುರ್ಲೇಮನೆ | – | – | – | – | – | ೧ | ೨ | – |
| ೮೫ | ಸಂಡೆಬೈಲ್ | – | – | – | – | – | ೧ | – | – |
| ೮೬ | ಸರಗದ್ದೆ | – | – | – | – | – | ೪ | – | – |
| ೮೭ | ಸವಣೆ | – | ೨ | – | – | – | ೬ | ೬ | – |
| ೮೮ | ಸಿರನಾಳ್ | – | ೨ | – | – | – | ೩ | ೨ | – |
| ೮೯ | ಸಿರಲೆ | – | ೨ | – | – | – | – | ೧ | – |
| ೯೦ | ಸುಳಗಾರ್ | – | ೨ | – | – | – | – | – | – |
| ೯೧ | ಸುಣ್ಣಗೋಗ | – | ೩ | – | – | – | ೧ | ೨ | – |
| ೯೨ | ಸುರಬೈಲು | – | – | – | – | – | ೫ | – | – |
| ೯೩ | ತಾಳಿಕುಂಬ್ರಿ | – | ೫ | – | – | – | – | ೧ | – |
| ೯೪ | ತೂಕದಬೈಲ್ | – | – | – | – | – | ೪ | – | – |

| ಕ್ರ.ಸಂ. | ಗ್ರಾಮ | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೯೫ | ಉಬ್ಚಗೇರಿ | – | – | – | – | – | ೩ | ೮ | – |
| ೯೬ | ಉಳ್ಳರಮನೆ | – | ೧ | – | – | – | ೯ | ೫ | – |
| ೯೭ | ವಣಕೆಮನೆ | – | ೧ | – | – | – | ೧ | ೧ | – |
| ೯೮ | ವಿದ್ಯಾನಗರ | – | – | – | – | – | – | – | ೧ |
| ೯೯ | ತೋಟಕಟ್ಟ | – | ೩ | – | – | – | ೮ | ೫ | – |
| ೧೦೦ | ತೋಟದಕಲ್ಲಳ್ಳಿ | – | ೧ | – | – | – | – | ೧ | – |
| ೧೦೧ | ತೊಟ್ಟಿಲಗುಂಡಿ | – | ೨ | – | – | – | ೨ | ೧೬ | – |
| | ಒಟ್ಟು | ೨ | ೨೨೮ | ೦ | ೦ | ೦ | ೩೬೨ | ೩೭೪ | ೧೫ |

## ಕಾರವಾರ ಜಿಲ್ಲೆಯ ತಾಲೂಕವಾರು ಮನೆಗಳ ಮಾದರಿಯ ವಿವರ

| ಕ್ರ.ಸಂ. | ತಾಲೂಕು | ಗುಡಾರ | ಗುಡಿಸಲು | ಟಿನ್ | ಡಾಬಾ | ಆರ್.ಸಿ.ಸಿ. | ಹೆಂಚಿನ | ಆಶ್ರಯ | ಬಾಡಿಗೆ |
|---|---|---|---|---|---|---|---|---|---|
| ೧ | ಅಂಕೋಲ | ೭ | ೮೭ | – | – | – | ೫೧ | ೭೪ | ೧ |
| ೨ | ಹಳಿಯಾಳ | – | ೨ | – | – | – | ೫೫೩ | ೬೭೯ | ೨೮ |
| ೩ | ಜೋಯಿಡಾ | – | ೩ | – | – | – | ೨ | ೭ | – |
| ೪ | ಕಾರವಾರ | – | – | – | – | – | ೨ | ೫ | – |
| ೫ | ಮುಂಡಗೋಡ | – | ೯ | – | – | – | ೫೧ | ೪೫ | ೧ |
| ೬ | ಶಿರಸಿ | ೨ | ೭ | – | – | – | ೪೪ | ೪೦ | – |
| ೭ | ಯಲ್ಲಾಪುರ | ೨ | ೨೨೮ | – | – | – | ೩೬೨ | ೩೭೪ | ೧೫ |
| | ಒಟ್ಟು | ೧೧ | ೩೩೬ | ೦ | ೦ | ೦ | ೧೦೬೫ | ೧೨೨೪ | ೪೫ |

# ಅಂಕಿ ಅಂಶಗಳ ಪಟ್ಟಿ – ೪

ಕಾರವಾರ ಜಿಲ್ಲೆಯ ತಾಲೂಕುವಾರು ಗ್ರಾಮಗಳ ಧಾರ್ಮಿಕ ಕುಟುಂಬಗಳು.

## ಅಂಕೋಲ ತಾಲೂಕು

| ಕ್ರ.ಸಂ. | ಗ್ರಾಮ | ಹಿಂದು | ಮುಸ್ಲಿಂ | ಕ್ರೈಸ್ತ | ಒಟ್ಟು |
|---|---|---|---|---|---|
| ೧ | ಅಚಾವೆ | ೧೬ | – | – | ೧೬ |
| ೨ | ಅಂಗಡಿಬೈಲ್ | ೯ | – | – | ೯ |
| ೩ | ದೊಡ್ಡಕಟ್ಟೆ | ೬ | – | – | ೬ |
| ೪ | ಡೊಂಗ್ರಿ | ೨೮ | – | – | ೨೮ |
| ೫ | ಹಳವಳ್ಳಿ | ೬೭ | – | – | ೬೭ |
| ೬ | ಹಿಗ್ಗಾರ | ೪ | – | – | ೪ |
| ೭ | ಕೈಗಡಿ | ೪ | – | – | ೪ |
| ೮ | ಕಲ್ಲೇಶ್ವರ | ೨೩ | – | – | ೨೩ |
| ೯ | ಕಮ್ಮಾಣಿ | ೨೦ | – | – | ೨೦ |
| ೧೦ | ಕೊಡ್ಲಿಗದ್ದೆ | ೧೩ | – | – | ೧೩ |
| ೧೧ | ರೋನಾಳ್ | ೧ | – | – | ೧ |
| ೧೨ | ಸೋರಕರ್ | ೩ | – | – | ೩ |
| ೧೩ | ಸುಕಸಾಲ್ | ೩ | – | – | ೩ |
| ೧೪ | ವಂಡರಮನೆ | ೧ | – | – | ೧ |
| | ಒಟ್ಟು | ೧೯೮ | ೦ | ೦ | ೧೯೮ |

## ಮುಂಡಗೋಡ ತಾಲೂಕು

| ಕ್ರ.ಸಂ. | ಗ್ರಾಮ | ಹಿಂದು | ಮುಸ್ಲಿಂ | ಕ್ರೈಸ್ತ | ಒಟ್ಟು |
|---|---|---|---|---|---|
| ೧ | ಬಸರೆಜಡ್ಡಿ | ೧೪ | – | – | ೧೪ |
| ೨ | ಕೆಂದಿಲ್‌ಗೇರಿ | – | ೭೨ | – | ೭೨ |
| ೩ | ಉಗ್ಗಿನಕೇರಿ | – | – | ೨೦ | ೨೦ |
| | ಒಟ್ಟು | ೧೪ | ೭೨ | ೨೦ | ೧೦೬ |

## ಕಾರವಾರ ತಾಲೂಕು

| ಕ್ರ.ಸಂ. | ಗ್ರಾಮ | ಹಿಂದು | ಮುಸ್ಲಿಂ | ಕ್ರೈಸ್ತ | ಒಟ್ಟು |
|---|---|---|---|---|---|
| ೧ | ಕಾಸಿರವಾಡ | ೧ | – | ೬ | ೭ |
| | ಒಟ್ಟು | ೧ | ೦ | ೬ | ೭ |

**ಜೋಯಿಡಾ ತಾಲೂಕು**

| ಕ್ರ.ಸಂ. | ಗ್ರಾಮ | ಹಿಂದು | ಮುಸ್ಲಿಂ | ಕ್ರೈಸ್ತ | ಒಟ್ಟು |
|---|---|---|---|---|---|
| ೧ | ಇರನೊಳ್ಳಿ | – | – | ೧೨ | ೧೨ |
| | ಒಟ್ಟು | ೦ | ೦ | ೧೨ | ೧೨ |

**ಶಿರಸಿ ತಾಲೂಕು**

| ಕ್ರ.ಸಂ. | ಗ್ರಾಮ | ಹಿಂದು | ಮುಸ್ಲಿಂ | ಕ್ರೈಸ್ತ | ಒಟ್ಟು |
|---|---|---|---|---|---|
| ೧ | ದೇವನಹಳ್ಳಿ | ೬ | – | – | ೬ |
| ೨ | ಹಗರಿಮನೆ | ೧೦ | – | – | ೧೦ |
| ೩ | ಕಕ್ಕಳ್ಳಿ | ೧೦ | – | – | ೧೦ |
| ೪ | ಕೆಳಗಿನಕೇರಿ | ೧೩ | – | – | ೧೩ |
| ೫ | ಮತ್ತಿಗಟ್ಟ | ೧ | – | – | ೧ |
| ೬ | ಸಿರಗಾವೆ | ೪ | – | – | ೪ |
| ೭ | ವಾನಹಳ್ಳಿ | ೨೩ | – | – | ೨೩ |
| | ಒಟ್ಟು | ೬೭ | ೦ | ೦ | ೬೭ |

**ಹಳಿಯಾಳ ತಾಲೂಕು**

| ಕ್ರ.ಸಂ. | ಗ್ರಾಮ | ಹಿಂದು | ಮುಸ್ಲಿಂ | ಕ್ರೈಸ್ತ | ಒಟ್ಟು |
|---|---|---|---|---|---|
| ೧ | ಅಡಕೆ ಹೊಸೂರು | – | ೫೬ | – | ೫೬ |
| ೨ | ಅಗಸಲಕಟ್ಟಾ | – | ೭ | ೪ | ೧೧ |
| ೩ | ಅಜಗರ | – | ೨ | – | ೨ |
| ೪ | ಆಲೂರು | – | – | ೩ | ೪ |
| ೫ | ಬಾಳಶೆಟ್ಟಿಕೊಪ್ಪ | – | – | ೨೦ | ೨೦ |
| ೬ | ಭಾಗವತಿ | – | ೮೩ | ೧೬ | ೯೯ |
| ೭ | ಬಿದರೊಳ್ಳಿ | – | | ೬ | ೬ |
| ೮ | ಬೊಮ್ಮನಹಳ್ಳಿ | – | ೧೬ | – | ೧೬ |
| ೯ | ದೊಡ್ಡಕೊಪ್ಪ | – | – | ೯ | ೯ |
| ೧೦ | ಗದಗೇರಾ | ೨ | – | ೨೫ | ೨೭ |
| ೧೧ | ಗರಡೊಳ್ಳಿ | ೫ | – | ೬೬ | ೭೧ |
| ೧೨ | ಗೊಲೆಹಳ್ಳಿ | – | ೫೪ | – | ೫೪ |
| ೧೩ | ಗುತ್ತಿಬೈಲ್ | – | ೧೦ | – | ೧೦ |
| ೧೪ | ಹಳಿಯಾಳ | – | – | ೨ | ೨ |
| ೧೫ | ಹೊಸೂರು | – | ೧೯ | ೧ | ೨೦ |
| ೧೬ | ಜನಗ | – | ೬ | – | ೬ |

